







# ಹಾದಿಮನಿಯವರ ಹಾಯಾದ 'ಡೈಮಂಡ್ ಸ್ಟ್ರೋಕ್' ಕಲಾಕೃತಿಗಳು



**ಹಾ**ವೇರಿ ಜಿಲ್ಲೆ ರಾಣೆಬೆನ್ನೂರು ತಾಲೂಕಿನ ಚಿಕ್ಕಮಗನೂರು ಗ್ರಾಮದ ಶಿವು ಹಾದಿಮನಿ ವಿದ್ಯಾರ್ಥಿ ದೆಸೆಯಿಂದಲೇ ಕಲಾ ಕ್ಷೇತ್ರದಲ್ಲೊಂದು ಹೊಸತನವನ್ನು ನೀಡಬೇಕೆಂದು ಹಗಲಿರುಳು ಕನವರಿಸಿದವರು. ಚಿತ್ರಕಲೆಯಲ್ಲಿ ಆರ್ಟಮಾಸ್ಟರ್ ಪದವಿ ಪಡೆದುಕೊಂಡ ಬಳಿಕ ಕಾಪಿಟ್ಟುಕೊಂಡು ಬಂದ ತಮ್ಮ ಕನವರಿಕೆಯನ್ನು ಅಕ್ರಲಿಕ್ ವರ್ಣ, ಕ್ಯಾನವಾಸ್, ಕುಂಚಗಳೊಂದಿಗೆ ನಿರಂತರವಾಗಿ ಅನುಸಂಧಿಸಿ ವಿಶಿಷ್ಟ ಶೈಲಿಯೊಂದನ್ನು ರೂಢಿಸಿಕೊಂಡಿದ್ದಾರೆ. ರೂಢಿಸಿಕೊಂಡ ಹೊಸ ಶೈಲಿಗೆ 'ಡೈಮಂಡ್ ಸ್ಟ್ರೋಕ್' ಎಂಬ ಶೀರ್ಷಿಕೆ ಇಟ್ಟುಕೊಂಡು ಅದರಡಿಯಲ್ಲಿ ಅದ್ಭುತ ಕಲಾಕೃತಿಗಳನ್ನು ರಚಿಸುತ್ತಿದ್ದಾರೆ.

ಕವಿ ಮತ್ತು ಕಲಾವಿದರು ಕೆಲ ಸಂಪ್ರದಾಯ ನಂಬಿಕೆ ಚೌಕಟ್ಟುಗಳನ್ನು ಮುರಿದು ಮತ್ತೆ ಕಟ್ಟುತ್ತಾರೆ. ಮುರಿದು ಕಟ್ಟುವ ಅಥವಾ ನೋಡುಗರನ್ನು ಮಂತ್ರಮುಗ್ಧರನ್ನಾಗಿಸುವ ಕಾಯಕದಲಿ ನಿರತರಾಗಿರುವವರ ಸಾಲಿನಲ್ಲಿ ಭರವಸೆಯ ಯುವ ಕಲಾವಿದ ಶಿವು ಹಾದಿಮನಿ ಕೂಡಾ ಓರ್ವರು.

ಕಳೆದೆರಡು ದಶಕಗಳಿಂದ ದೆಹಲಿ, ಕೊಯಿಮುತ್ತೂರು, ಬೆಂಗಳೂರು, ಮಂಗಳೂರು, ಮೈಸೂರು, ಹಂಪಿ ಹೀಗೆ ಇಪ್ಪತ್ತಕ್ಕೂ ಹೆಚ್ಚು ನಗರಗಳಲ್ಲಿ ತಮ್ಮ ಕಲಾಕೃತಿಗಳನ್ನು ಪ್ರದರ್ಶಿಸಿ ಕಲಾ ಲೋಕದಲ್ಲೊಂದು ಗಟ್ಟಿಯಾದ ಹೆಜ್ಜೆಗುರತನ್ನು ಮೂಡಿಸಿದ್ದಾರೆ. ಹಾದಿಮನಿಯವರ ಕಲಾಕೃತಿಗಳನ್ನು ಅಂತರಜಾಲದಲ್ಲೂ ನೋಡಬಹುದು (www.hadimaniart.in)

**ಕೆ. ಬಿ. ವೀರಲಿಂಗನಗೌಡ್ರ**









# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ಸುನಿಲ್ ಮಿಶ್ರಾ, ತನು, ವಿ. ಗೋಪಾಲ್
ಬಿ. ಎಂ. ಬೊಮ್ಮನಹಳ್ಳಿ, ಗೋಪಿ ಹಿರೇಬೆಟ್ಟು

**ಮುಖಪುಟ :** ಕಾಶ್ಮೀರ : ಎಲ್ಲೆಲ್ಲೂ ಭದ್ರತಾ ಪಡೆ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು




ಸಂಚಿಕೆಯೊಂದಿಗೆ 'ಹೊಸತು' ತನ್ನ ೧೮ನೆಯ ವರ್ಷಕ್ಕೆ ಕಾಲಿಟ್ಟಿದೆ. ತನ್ನ ಘೋಷಿತ ಆಶಯಕ್ಕೆ ತಕ್ಕಂತೆ ಇಷ್ಟೂ ಕಾಲ ವಿವಿಧ ಪ್ರಕಾರಗಳ ಬರಹಗಳನ್ನು ನೀಡುತ್ತಾ ಬಂದಿರುವ ಈ ಪತ್ರಿಕೆಗೆ ಓದುಗರು ಮತ್ತು ಬರಹಗಾರರು ಬೆಂಬಲ ನೀಡಿ ಪತ್ರಿಕೆಯನ್ನು ಬೆಳೆಸುತ್ತಾ ಬಂದಿದ್ದಾರೆ. ಅವರಿಗೆಲ್ಲ ಪತ್ರಿಕೆಯು ವಂದನೆಗಳನ್ನು ಸಲ್ಲಿಸುತ್ತದೆ. ಅಂತೆಯೇ ಜಾಹೀರಾತುಗಳ ಮೂಲಕ ಪತ್ರಿಕೆಗೆ ಭಾಗಶಃ ಆಸರೆ ನೀಡುತ್ತಾ ಬಂದಿರುವವರಿಗೆಲ್ಲಾ ಪತ್ರಿಕೆಯು ಆಭಾರಿಯಾಗಿದೆ. ನಾವೆಲ್ಲಾ ಕೈಜೋಡಿಸಿ ಬೆಳಕಿನತ್ತ ಸಾಗಲು ಕ್ರಿಯಾಶೀಲರಾಗೋಣ. ಓದುಗರೆಲ್ಲರ ಪ್ರತಿಕ್ರಿಯೆಗಳನ್ನು ಪತ್ರಿಕೆಯು ಎಂದಿನಂತೆ ಸ್ವಾಗತಿಸುತ್ತದೆ. ಜನತೆಯ ಸ್ವಾತಂತ್ರ್ಯವನ್ನು ಯಥಾರ್ಥಗೊಳಿಸುವತ್ತ ಸಾಮೂಹಿಕವಾಗಿ ಅಡಿಯಿಡೋಣ.

*– ಸಂ.*

✶ ✶ ✶

ಎರಡು ಮಹತ್ವದ ತೀರ್ಪುಗಳು ಒಂದೇ ವಾರದಲ್ಲಿ ಬಂದಿವೆ ನ್ಯಾಯಾಲಯಗಳಿಂದ. ಮದರಾಸು ಹೈಕೋರ್ಟ್ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಎತ್ತಿ ಹಿಡಿಯಿತಾದರೆ, ಸರ್ವೋಚ್ಚ ನ್ಯಾಯಾಲಯ ಸಶಸ್ತ್ರ ಪಡೆಗಳ ವಿಶೇಷ ಕಾಯಿದೆಯ ದುರ್ಬಳಕೆಯನ್ನು ಅಂತ್ಯಗೊಳಿಸಿದೆ. ಎರಡೂ ಸ್ವಾಗತಾರ್ಹವಾದುವು ಹಾಗೂ ಪ್ರಜೆಗಳ ಹಕ್ಕನ್ನು ಎತ್ತಿಹಿಡಿಯುವಂಥವು.

ಸಣ್ಣಪುಟ್ಟ ಕಾರಣಗಳಿಗೆಲ್ಲ ಬಲಪಂಥೀಯ ಸಂಪ್ರದಾಯವಾದಿಗಳ ಪ್ರತಿರೋಧ ಹಾಗೂ ಒತ್ತಾಯಗಳಿಗೆ ಮಣಿದ ಸರಕಾರಗಳು ಸೃಜನಶೀಲ ಕೃತಿಯೊಂದನ್ನು ಹತ್ತಿಕ್ಕಲು ಮುಂದಾಗುವುದು ಹೊಸದೇನಲ್ಲ. ತಮಿಳುನಾಡಿನಲ್ಲಿ ಒಂದು ವರ್ಷದ ಹಿಂದೆ ಪೆರುಮಾಳ್ ಮುರುಗನ್ ಎಂಬ ಲೇಖಕ ರಚಿಸಿದ್ದ ಕಾದಂಬರಿ 'ಮಾದೋರು ಬಗನ್' ಕೆಲವು ಹಿಂದೂಪರ ಸಂಘಟನೆಗಳ ಆಕ್ರೋಶಕ್ಕೆ ಬಲಿಯಾಗಿತ್ತು. ಸ್ಥಳೀಯ ಆಡಳಿತಾಧಿಕಾರಿ ಪಂಚಾಯಿತಿಕೆ ನಡೆಸಿ ಲೇಖಕರನ್ನು ಮುಜುಗರಕ್ಕೆ ಸಿಕ್ಕಿಸಿದ್ದರು. ಲೇಖಕರು ಬೇಸತ್ತು ಇನ್ನುಮುಂದೆ ಬರೆಯುವುದನ್ನೇ ನಿಲ್ಲಿಸುತ್ತೇನೆ ಎಂದು ಘೋಷಿಸಿದ್ದನ್ನು, ಪುಸ್ತಕದ ಮೇಲೆ ವಿಧಿಸಿದ್ದ ನಿಷೇಧವನ್ನು ನೆನಪಿಸಿಕೊಳ್ಳಬಹುದು. ಇಂಥ ಪ್ರಕರಣಗಳು ನಮ್ಮ ಕರ್ನಾಟಕದಲ್ಲೂ ನಡೆದಿವೆ. ಅನಗತ್ಯ ಕಾರಣಗಳಿಗೆ ಸರಕಾರ ಪುಸ್ತಕಗಳ ಮೇಲೆ ನಿಷೇಧ ಹೇರಿದುದನ್ನು ಗಮನಿಸಬಹುದು. ಅಂಥ ಸಂದರ್ಭಗಳಲ್ಲಿ ಲೇಖಕರು, ಕಲಾವಿದರು, ಸಾರ್ವಜನಿಕರು ಪ್ರತಿಭಟನೆ ನಡೆಸಿದ್ದಾರೆ. ಆಗಿಂದಾಗ್ಗೆ ನ್ಯಾಯಾಲಯಗಳೂ ಕೂಡ ಕೆಲವೊಮ್ಮೆ ಆಡಳಿತಾರೂಢರ ಕ್ರಮಗಳನ್ನು ಎತ್ತಿ ಹಿಡಿದಿರುವುದುಂಟು. ಮದರಾಸು ಹೈಕೋರ್ಟಿನ ತೀರ್ಪು ಕಾದಂಬರಿಯನ್ನು ನಿಷೇಧಿಸುವ ಕ್ರಮವನ್ನು ತಿರಸ್ಕರಿಸಿ, ಲೇಖಕರ ಹಕ್ಕನ್ನು ಎತ್ತಿ ಹಿಡಿದಿದೆ. 'ಏನು ಓದಬೇಕು ಎನ್ನುವುದು ಓದುಗನಿಗೆ ಬಿಟ್ಟದ್ದು. ಪುಸ್ತಕ ಹಿಡಿಸದಿದ್ದ ಓದುಗ ಅದನ್ನು ಬದಿಗಿರಿಸಬಹುದು. ಯಾರೂ ಓದಬೇಕೆಂದು ಒತ್ತಾಯಪಡಿಸಲಾಗದು. ಸಾಹಿತ್ಯಾಭಿರುಚಿ ಭಿನ್ನ. ಲೇಖಕನಿಗೆ ತನಗನಿಸಿದ್ದನ್ನು ಬರೆಯುವ ಹಕ್ಕನ್ನು ಯಾರೂ ಕಸಿದುಕೊಳ್ಳಲಾಗದು' ಎಂದು ತೀರ್ಪಿನಲ್ಲಿ ಹೇಳಲಾಗಿದೆ.

ಗಲಭೆಗ್ರಸ್ತ ಪ್ರದೇಶಗಳಲ್ಲಿ ನಿಯೋಜಿತವಾಗುವ ಸೇನಾಪಡೆಗಳ ಕಾರ್ಯಾಚರಣೆಗಳನ್ನು ಯಾವುದೇ ಬಗೆಯಲ್ಲಿ ಪ್ರಶ್ನಿಸುವಂತಿಲ್ಲ ಎಂಬುದಾಗಿ ನೀಡಿದ್ದ ವಿಶೇಷ ವಿನಾಯಿತಿಯನ್ನು ಸುಪ್ರೀಮ್ ಕೋರ್ಟು ರದ್ದುಗೊಳಿಸಿದೆ. ಪ್ರಮುಖವಾಗಿ ಇಂಥ ವಿನಾಯಿತಿಯನ್ನು ಸೇನಾಪಡೆಗಳಿಗೆ ಈಶಾನ್ಯ ಭಾರತದ ಕೆಲವು ಪ್ರದೇಶಗಳು ಹಾಗೂ ಕಾಶ್ಮೀರದಲ್ಲಿ ನೀಡಲಾಗಿದೆ. ಈ ಬಗೆಯ ಕಾನೂನನ್ನು ಸಂಸತ್ತಿನಲ್ಲಿ ಅನುಮೋದಿಸಿದ್ದು ೧೯೫೮ರಲ್ಲಿ ಆಂತರಿಕ ಭದ್ರತೆ ಕಾಪಾಡುವುದಕ್ಕೋಸ್ಕರ. ಸ್ವಲ್ಪ ಸಂಶಯವಿದ್ದರೂ ಆರೋಪಿಯನ್ನು ಹತ್ಯೆಗೈದರೆ ಸೇನೆಯವರನ್ನು ಪ್ರಶ್ನಿಸುವಂತಿಲ್ಲ. ಇದು ಎನ್‌ಕೌಂಟರ್, ಫೇಕ್ ಎನ್‌ಕೌಂಟರ್ ಮುಂತಾದುವಕ್ಕೆ ಎಡೆಮಾಡಿಕೊಟ್ಟಿದೆ. ಈ ಕಾಯ್ದೆ ಜಾರಿಯಲ್ಲಿರುವ ಯಾವುದೇ


**(೬ನೇ ಪುಟಕ್ಕೆ )**



ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ–೧೮ ಸಂಚಿಕೆ–೧ ಆಗಸ್ಟ್ ೨೦೧೬



**ಮುದ್ರಕ-ಪ್ರಕಾಶಕ**
ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**
**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**



# ಸಂಪಾದಕೀಯ

## ಆಪತ್ತಿಗೆ ಸಿಲುಕಿದ ಶಿಕ್ಷಣ

ಇದೇ ೧೧ರಂದು ಬೆಳಗಾವಿ ಜಿಲ್ಲೆ ಚಿಕ್ಕೋಡಿ ಬಳಿ ಯಂಕನಮರ್ಡಿ ಎಂಬಲ್ಲಿ ಬಾಲಿಕೆಯರ ಪಾಠಶಾಲೆಯ ಗೋಡೆ ಕುಸಿದು ತರಗತಿಯಲ್ಲಿದ್ದವರ ಪೈಕಿ ಇಬ್ಬರು ಸಾವನ್ನಪ್ಪಿದರು. ನಮ್ಮ ರಾಜ್ಯದ ಮತ್ತು ದೇಶದ ಶಿಕ್ಷಣ ವ್ಯವಸ್ಥೆಯು ಎಲ್ಲ ಹಂತಗಳಲ್ಲೂ ಗೆದ್ದಲು ಹತ್ತಿ ನಿಂತಿದೆ. ಕೆಲವು ಸ್ತರಗಳಲ್ಲಿ ಕುಸಿದಿದ್ದೂ ಆಗಿದೆ. ಯಂಕನಮರ್ಡಿ ಅಪಘಾತವು ನಮ್ಮ ಶಿಕ್ಷಣ ವ್ಯವಸ್ಥೆಯನ್ನು ಸಂಕೇತಿಸುತ್ತದೆ. ನಮ್ಮ ದೇಶಕ್ಕೆ ನಾಚಿಕೆಯೇನಾದರೂ ಇದ್ದಿದ್ದರೆ ಮತ್ತು ಕೆಳಸ್ತರದ ಜನಸಾಮಾನ್ಯರ ಬಗ್ಗೆ ಕಿಂಚಿತ್ತಾದರೂ ಗೌರವವಿದ್ದಿದ್ದರೆ ಸರ್ಕಾರಿ ಶಾಲೆಗಳು ಇಷ್ಟು ಶೋಚನೀಯ ಸ್ಥಿತಿಯನ್ನು ತಲುಪುತ್ತಿರಲಿಲ್ಲ. ಪ್ರಾಥಮಿಕ ಹಂತದ ಏಳು ವರ್ಷಗಳಲ್ಲಿ ಕಲಿಕೆಯು ನಿರೀಕ್ಷಿತ ಮಟ್ಟವನ್ನು ಮುಟ್ಟುವುದಿರಲಿ, ಕನಿಷ್ಠ ಓದು–ಬರಹ–ಮಗ್ಗಿ ಸಹ ಮಕ್ಕಳಿಗೆ ನಾವು ಕಲಿಸಿಲ್ಲ. ಸಾಮಾಜಿಕ ಜವಾಬ್ದಾರಿ ಮತ್ತು ಸರ್ಕಾರದ ನಿಷ್ಠೆ ಅಷ್ಟು ಪಾತಾಳವನ್ನು ಮುಟ್ಟಿದೆ. ಸಾಕಷ್ಟು ಸೌಲಭ್ಯ ಮತ್ತು ಅವಕಾಶಗಳಿರುವ ಬೇರೆ ಶಾಲೆಗಳಲ್ಲಿ ಕಲಿತ ಮಕ್ಕಳೊಡನೆ ಅತಿಸಾಮಾನ್ಯ ಕುಟುಂಬಗಳ ಮಕ್ಕಳು ಸ್ಪರ್ಧಿಸಬೇಕೆಂದು ಬೋಧಿಸುವ ಮಂದಿ ಬೇಕಾದಷ್ಟಿದ್ದಾರೆ. ಅವರ ಅಪ್ರಾಮಾಣಿಕತೆಗೆ ಎಲ್ಲೆಯಿಲ್ಲ. ಕೇಂದ್ರೀಯ ವಿದ್ಯಾಶಾಲೆಗಳು, ನವೋದಯ ಶಾಲೆಗಳು, ಶ್ರೀಮಂತರ ಮಕ್ಕಳು ಕಲಿಯುವ 'ಪಬ್ಲಿಕ್' ಶಾಲೆಗಳು, ವಿವಿಧ ಮಾದರಿಗಳ ಖಾಸಗಿ ಶಾಲೆಗಳು, ಇವೆಲ್ಲಾ ಪ್ರತಿಷ್ಠಿತ ವರ್ಗಗಳ ಮತ್ತು ಮಧ್ಯಮ ವರ್ಗಗಳ ಕುಟುಂಬಗಳಿಂದ ಬಂದ ಮಕ್ಕಳಿಗೆ ಉತ್ತಮ ಇಲ್ಲವೇ ತಕ್ಕಮಟ್ಟಿನ ಕಲಿಕೆಗೆ ಅವಕಾಶ ಕಲ್ಪಿಸಿಕೊಡುತ್ತವೆ. ಸರಕಾರಿ ಪ್ರಾಥಮಿಕ ಶಾಲೆಗಳಿಗೆ ಸೇರ್ಪಡೆಗೊಳ್ಳುವ ಮಕ್ಕಳು ದರವೇಶಿಗಳು ಎಂದು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ನಂಬಿವೆ ಮತ್ತು ಅವರನ್ನು ಹಾಗೆಯೇ ನಡೆಸಿಕೊಳ್ಳುತ್ತವೆ. ಸಂವಿಧಾನ, ನ್ಯಾಯಾಲಯಗಳು ಮತ್ತು ಸಾಮಾಜಿಕ ಪ್ರಜ್ಞೆ, ಎಲ್ಲಾ ಈ ಮಕ್ಕಳನ್ನು ಅಸಹ್ಯ ಭಾರವೆಂದು ಪರಿಗಣಿಸುತ್ತಿರುವಂತೆ ತೋರುತ್ತದೆ. ಒಂದಾದ ಮೇಲೊಂದರಂತೆ ಶಿಕ್ಷಣ ನೀತಿಗಳು ಮಾತ್ರ ಪ್ರಕಟವಾಗುತ್ತವೆ, ಎಷ್ಟೋ ಸಹಸ್ರ ಕೋಟಿ ರೂಪಾಯಿ ವೆಚ್ಚ ಮಾಡಿರುವುದಾಗಿ ಹೇಳಿಕೆಗಳು ನಿರಂತರವಾಗಿ ನಮ್ಮನ್ನು ಚುಚ್ಚುತ್ತವೆ.

ಈಗತಾನೆ ನಿರ್ಗಮಿಸಿರುವ ಕೇಂದ್ರ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವೆ ಸ್ಮೃತಿ ಇರಾನಿ ಒಂದಷ್ಟು ಉನ್ನತ ಅಧಿಕಾರಿಗಳ ಸಮಿತಿಯನ್ನು ರಚಿಸಿ ನೂತನ ಶಿಕ್ಷಣ ನೀತಿಯ ದಸ್ತಾವೇಜು ರಚಿಸಲು ತೊಡಗಿಸಿದರು. ನಾಲ್ಕು ನಿವೃತ್ತ ಐ.ಎ.ಎಸ್. ಅಧಿಕಾರಿಗಳು ಮತ್ತು ರಾಜಪುತ್ ಎಂಬ ತಥಾಕಥಿತ ಶಿಕ್ಷಣತಜ್ಞ ಈ ಸಮಿತಿಯ ಸದಸ್ಯರು. ಸಮಿತಿಯ ವರದಿಯು ಅದೆಷ್ಟು 'ಶ್ರೇಷ್ಠ'ವೆಂದರೆ ಸ್ಮೃತಿ ಇರಾನಿ ಅದನ್ನು ಗುಟ್ಟಾಗಿ ಬಚ್ಚಿಟ್ಟಿದ್ದರು, ಆದರೆ ಸಮಿತಿಯ ಅಧ್ಯಕ್ಷ ಟಿ. ಎಸ್. ಆರ್. ಸುಬ್ರಮಣ್ಯನ್ ಅದನ್ನು ಅಷ್ಟೇ ಗುಟ್ಟಾಗಿ ಬಹಿರಂಗಗೊಳಿಸಿದ್ದಾರೆ. ಅದರಲ್ಲಿರುವುದು ಲೊಳಲೊಟ್ಟೆ ಬೋಕಿಬಿಲ್ಲೆಗಳು ! ಮಕ್ಕಳಿಗೆ ಯೋಗಾಭ್ಯಾಸ ಮಾಡಿಸಿದರೆ ಸಾಕೆಂಬ ಅಜ್ಞಾನ ಸ್ಮೃತಿ ಅವರಿಗೆ. ೧೨–೧೩ ವರ್ಷಗಳಿಗಿಂತಲೂ ಕಡಿಮೆ ವಯಸ್ಸಿನವರಿಗೆ ಯೋಗಾಸನಗಳು ಹಾನಿಕರವೆಂಬ ತಿಳಿವಳಿಕೆ ಸಹ ಆಕೆಗಿಲ್ಲ.

ಒಂದು ಸರ್ಕಾರಿ ಅಧ್ಯಯನದ ಪ್ರಕಾರ ಶ್ರೀಮಂತ ಕುಟುಂಬಗಳ ಶೇ. ೮೯ ಮಕ್ಕಳು ಶಾಲೆಗಳಲ್ಲಿ ಪ್ರವೇಶ ಪಡೆಯುತ್ತಾರೆ ಮತ್ತು ಕೆಳಸ್ತರದ ಶೇ. ೭೯ ಮಕ್ಕಳು ಶಾಲೆಗಳಲ್ಲಿ ದಾಖಲಾಗುತ್ತಾರೆ. ಎರಡನೆಯ ಗುಂಪಿನ ಈ ಮಕ್ಕಳಲ್ಲಿ ಎಷ್ಟೋ ಮಂದಿ ಒಂದೆರಡು ವರ್ಷ ಶಾಲೆಯಲ್ಲಿದ್ದು ನಿರ್ಗಮಿಸುತ್ತಾರೆ. ಈ ವರ್ಗದ ಮಕ್ಕಳು ಶಾಲೆಗಳಲ್ಲಿ ಪ್ರವೇಶ ಪಡೆದಿದ್ದರೂ ಹಾಜರಾಗುವುದು ಶೇ. ೨೦ರಷ್ಟು ದಿನಗಳು ಮಾತ್ರ. ಅದಕ್ಕೆ ಕಾರಣಗಳು ಗುಪ್ತವೇನಲ್ಲ. ಇನ್ನೂ ಮೇಲಿನ ಪ್ರೌಢಶಾಲಾ ಹಂತದಲ್ಲಿ ಇವರ ಪ್ರವೇಶ ಮತ್ತು ಹಾಜರಾತಿ ಮತ್ತಷ್ಟು ಕಡಿಮೆ. ಅವರಿಗೆ ಕಲಿಕೆ ಎಲ್ಲಿಂದ ಮತ್ತು ಹೇಗೆ ಬಂದೀತು !

ದೇಶದಲ್ಲಿ ೧೫ ಲಕ್ಷ ಶಾಲೆಗಳಿವೆ, ಒಂದರಿಂದ ಹನ್ನೆರಡನೆಯ ತರಗತಿವರೆಗೆ ದಾಖಲಾಗುವ ಮಕ್ಕಳ ಸಂಖ್ಯೆ ೨೬ ಕೋಟಿ. ಎಲ್ಲ ರೀತಿಯ ಶಾಲೆಗಳನ್ನೂ ಒಟ್ಟಾಗಿ ನೋಡಿದರೆ ಅಲ್ಲಿ ೮೦ ಲಕ್ಷ ಅಧ್ಯಾಪಕರಿದ್ದಾರೆ. ಕೇವಲ ಪ್ರಾಥಮಿಕ ಹಂತದ ಶಾಲೆಗಳು ೧೪ ಲಕ್ಷ ಮತ್ತು ದಾಖಲಾತಿ ಸುಮಾರು ೨೦ ಕೋಟಿ. ಆ ಪೈಕಿ ಸರ್ಕಾರಿ ಶಾಲೆಗಳು ೧೧ ಲಕ್ಷ , ದಾಖಲಾತಿ ಸುಮಾರು ೧೨ ಕೋಟಿ. ಈ ೧೨ ಕೋಟಿ ಮಕ್ಕಳಿಗೆ ದೇಶವು ಅನ್ಯಾಯವೆಸಗುತ್ತಿದೆ, ಶಿಕ್ಷಣದಿಂದ ಅವರಲ್ಲಿ ಬಹುಭಾಗ ವಂಚಿತರಾಗುತ್ತಿದ್ದಾರೆ. ಕೆಲವು ಅತ್ಯುತ್ತಮ ಸರ್ಕಾರಿ ಶಾಲೆಗಳಿವೆ. ಅಂದರೆ ಸರ್ಕಾರಿ ಶಾಲೆಗಳಲ್ಲಿ ಅತ್ಯುತ್ತಮ ಮಟ್ಟದ ಶಿಕ್ಷಣ ನೀಡಲು ಸಾಧ್ಯವಿದೆ, ಆದರೆ ಅಗಾಧ ಸಂಖ್ಯೆಯ ಶಾಲೆಗಳನ್ನು ನಿರ್ಲಕ್ಷಿಸಲಾಗಿದೆ. ಶಾಲೆಯ ಗೋಡೆಗಳು ಕುಸಿಯುವುದು ಅಂತಹ ಮಕ್ಕಳ ಮೇಲೆ.

ಕೇಂದ್ರ ಸರ್ಕಾರವು ಪ್ರತಿವರ್ಷ ಶಿಕ್ಷಣದ ಗುಣಮಟ್ಟವನ್ನು ಕುರಿತ ವರದಿಯೊಂದನ್ನು ಪ್ರಕಟಿಸುತ್ತದೆ. ಇತ್ತೀಚಿನ ಅಂತಹ ವರದಿಯ ಪ್ರಕಾರ ೮ನೆಯ ತರಗತಿಯಲ್ಲಿರುವ ಶೇ. ೨೧.೬ ಮಕ್ಕಳಿಗೆ ೨ನೆಯ ತರಗತಿಯ ಪಾಠಗಳನ್ನೋದಲು ಬಾರದು. ೧ರಿಂದ ೮ನೆಯ ತರಗತಿಗಳ ಮಕ್ಕಳ ಪೈಕಿ ಶೇ. ೨೪.೫ ಮಕ್ಕಳು ಮಾತ್ರ ಅಂಕಿಗಳನ್ನು ಗುರುತಿಸಬಲ್ಲರು. ೫ನೆಯ ತರಗತಿಯ ಶೇ. ೫೨.೬ ಮಕ್ಕಳಿಗೆ ಸರಳ ಭಾಗಾಕಾರ ತಿಳಿಯದು ಮತ್ತು ಶೇ. ೨೫.೫ ಮಕ್ಕಳಿಗೆ ಸರಳ ಕಳೆಯುವ ಲೆಕ್ಕಗಳು ಬರುವುದಿಲ್ಲ. ಈ ಪಟ್ಟಿಯನ್ನು ಲಂಬಿಸುವ ಅಗತ್ಯವಿಲ್ಲ. ಈ ವರದಿಯಿಂದ ತಿಳಿಯುವ ಮುಖ್ಯಾಂಶವೆಂದರೆ ನಾವು ಅಷ್ಟು ಅಪಾರ ಸಂಖ್ಯೆಯ ಮಕ್ಕಳ ತಲೆಯ ಮೇಲೆ ಕಲ್ಲುಚಪ್ಪಡಿ ಎಳೆದಿದ್ದೇವೆ

ಎಂಬುದು. ಮಕ್ಕಳು ಬುದ್ಧಿಮತ್ತೆ ಹೊಂದಿಲ್ಲವೆಂದಲ್ಲ, ನಮ್ಮ ಶಿಕ್ಷಣ ವ್ಯವಸ್ಥೆಯು ಅವರನ್ನು ಕಡೆಗಾಣಿಸಿದೆ, ಅಷ್ಟೆ. ಈ ಅಪರಾಧಕ್ಕೆ ಶಿಕ್ಷೆಯೂ ಇಲ್ಲ! ಸುಂದರವಾಗಿ ಭಾಷಣ ಮಾಡುವ ಸಚಿವರಿದ್ದಾರೆ, ನೀತಿಬೋಧೆ ಮಾಡುವ ಸಂತರಿದ್ದಾರೆ, ಸಮಾನತೆಯೇ ನಮ್ಮ ಆದರ್ಶವೆಂದು ಅರಚುವ ರಾಜಕಾರಣಿಗಳಿದ್ದಾರೆ, ಶಿಕ್ಷಣದ ಮೂಲಕ ಸಮಾಜೋದ್ಧಾರ ಮಾಡುವುದಾಗಿ ನಂಬಿರುವ ನೂರಾರು ಸಂಸ್ಥೆಗಳಿವೆ, ಅಶ್ವತ್ಥಕ್ಕೆ ಹಾಕುವಷ್ಟು ಶಿಕ್ಷಣತಜ್ಞರಿದ್ದಾರೆ. ಹಣವೂ ಕೋಟಿಗಟ್ಟಲೆ ಹರಿಯುತ್ತದೆ. ಆದರೆ ಕಲಿಕೆಯಲ್ಲಿ ಹಿಂದುಳಿದ ಕೋಟಿಗಟ್ಟಲೆ ಮಕ್ಕಳನ್ನು ಚಿಂದಿ ಆಯಲು ಕಳಿಸುತ್ತಿದ್ದೇವೆ. ಸರ್ಕಾರ ಮತ್ತು ಸಮಾಜ ಎರಡೂ ಕೈಜೋಡಿಸಿ ಈ ದ್ರೋಹವನ್ನೆಸಗುತ್ತಿವೆ. ಈ ಮಕ್ಕಳು ಪ್ರೌಢಶಾಲೆಯ ಹಂತವನ್ನು ದಾಟುವುದಿಲ್ಲ, ಅವರಿಗೆ ಯಾವ ಮೀಸಲಾತಿಯೂ ಅರ್ಥವಿಲ್ಲದ್ದೇ ಆಗಿರುತ್ತದೆ.

ಸಮಾನ ಶಿಕ್ಷಣ ನೀತಿಯ ಗುರಿ ಎಂದೂ ನಮ್ಮದಾಗಿಲ್ಲದಿರುವುದು ಇದಕ್ಕೆ ಮೂಲ ಕಾರಣ. ಅದನ್ನು ಅನುಷ್ಠಾನಕ್ಕೆ ತರುವ ಬದಲು ಹಿಂದಿನ ಶಿಕ್ಷಣ ಸಚಿವ ಕಪಿಲ್ ಸಿಬಲ್ "ಶಿಕ್ಷಣ ಹಕ್ಕಿನ ಶಾಸನ"ವೊಂದನ್ನು ತಂದು ಸಹಸ್ರಾರು ಕೋಟಿ ರೂಪಾಯಿಗಳನ್ನು ಸರ್ಕಾರದಿಂದ ಖಾಸಗಿ ಶಾಲೆಗಳಿಗೆ ದಾನ ಮಾಡಿಸಿದರು. ಈಗಲೂ ಅದು ರಾಷ್ಟ್ರಾದ್ಯಂತ ಮುಂದುವರಿದಿದೆ. ಹಾಗೆ ಖಾಸಗಿ ಶಾಲೆಗಳಲ್ಲಿ ಹೇಗೋ ಪ್ರವೇಶ ಪಡೆದ ಮಕ್ಕಳನ್ನು ಖಾಸಗಿ ಶಾಲೆಗಳಲ್ಲಿ ಅವಜ್ಞೆಯಿಂದ ನೋಡಲಾಗುತ್ತಿದೆ, ಮಾನಸಿಕ ಹಿಂಸೆಗೆ ಗುರಿಮಾಡಲಾಗುತ್ತಿದೆ. ಅದೇ ಹಣದಿಂದ ಸರ್ಕಾರಿ ಶಾಲೆಗಳನ್ನು ಉತ್ತಮಗೊಳಿಸಬಹುದಿತ್ತೆಂಬ ಸತ್ಯವನ್ನು ಸಿಬಲ್ ನಿರಾಕರಿಸಿದರು, ಸರಸ್ವತೀದೇವಿಯ ಆರಾಧಕಿ ಸ್ಮೃತಿ ಇರಾನಿ ಸಹ ಸತ್ಯವನ್ನರಿಯುವ ಗೋಜಿಗೆ ಹೋಗಲಿಲ್ಲ. ಇದು ನಮ್ಮ ದುರಂತ, ಗೋಡೆ ಕುಸಿದು ಮಕ್ಕಳನ್ನು ದೈಹಿಕವಾಗಿ ಮತ್ತು ಶೈಕ್ಷಣಿಕವಾಗಿ ಕೊಲ್ಲುವ ದುರಂತ. ಸನಿಹದ ಶಾಲೆಗಳಲ್ಲೇ ಪ್ರವೇಶ ಪಡೆಯಬೇಕೆಂದು ಆಯೋಜಿಸಿ ಎಲ್ಲ ವರ್ಗಗಳ ಮಕ್ಕಳನ್ನೂ ಒಂದು ಬಲವಾದ ಮಾಳಿಗೆಯಡಿ ಕೂರಿಸಿ ಕಲಿಸುವುದು ಪ್ರಾಥಮಿಕ ಹಂತದ ಶಿಕ್ಷಣದ ಅಡಿಪಾಯವನ್ನು ಸಮರ್ಥವಾಗಿಸಲು ನಮಗಿರುವ ಒಂದೇ ಸರಿಯಾದ ಕ್ರಮ. ಸಮಾನ ಶಿಕ್ಷಣ ಮತ್ತು ಸಮಾನ ಸೌಲಭ್ಯ ಎಂಬ ಆದರ್ಶವನ್ನು ಮೂರ್ತೀಭವಿಸಲು ಸರ್ಕಾರ ಮತ್ತು ಸಮಾಜ ಸಜ್ಜಾಗಬೇಕು. ಸಂವಿಧಾನ ಮತ್ತು ನ್ಯಾಯಾಲಯ ಇದಕ್ಕೆ ಅಡ್ಡಬಂದರೆ ನಮ್ಮ ಪ್ರಜಾಪ್ರತಿನಿಧಿಗಳು ಪಾರ್ಲಿಮೆಂಟಿನಲ್ಲಿ ಸಂವಿಧಾನಕ್ಕೆ ತಿದ್ದುಪಡಿ ತರಬೇಕು. ಖಾಸಗಿ ಶಾಲೆಗಳಲ್ಲಿ ಶುಲ್ಕದ ವಸೂಲಾತಿಯ ಅಕ್ರಮಗಳ ಬಗ್ಗೆ ಬೊಬ್ಬೆ ಹಾಕುವವರು ಈ ಪರ್ಯಾಯವನ್ನು ಸ್ವಾಗತಿಸಬೇಕು, ಅದಕ್ಕಾಗಿ ಜಂಟಿ ಹೋರಾಟಗಳನ್ನು ಆಯೋಜಿಸಬೇಕು.

೧೨ನೇ ತರಗತಿಯ ನಂತರದ ಶಿಕ್ಷಣವನ್ನು 'ಉನ್ನತ ಶಿಕ್ಷಣ' ಎನ್ನಲಾಗುತ್ತದೆ. ಅದು ಬೇರೆಬೇರೆ ಶಿಸ್ತುಗಳಾಗಿ ಕವಲೊಡೆದು ಸ್ನಾತಕೋತ್ತರ ಶಿಕ್ಷಣ ಮತ್ತು ಸಂಶೋಧನೆಗಳತ್ತ ಸಾಗುತ್ತದೆ. ಈ ವಿಭಾಗದಲ್ಲಿ ವಿಷಯಗಳ ಬೋಧನೆಯಲ್ಲಿ ವೈಶಾಲ್ಯ ಮತ್ತು ವಸ್ತುನಿಷ್ಠತೆಗಳಷ್ಟೇ ಸ್ವಾಯತ್ತತೆಯ ಪ್ರಶ್ನೆಯೂ ಪ್ರಮುಖವಾಗುತ್ತದೆ. ಈಚಿನ ವರ್ಷಗಳಲ್ಲಿ ಶಿಕ್ಷಣ ತಜ್ಞರಿಗಿಂತಲೂ ಹೆಚ್ಚಾಗಿ ರಾಜಕಾರಣಿಗಳು, ಅಧಿಕಾರಿಗಳ ವರ್ಗ ಹಾಗೂ ಸಾಂಸ್ಕೃತಿಕ ಮತ್ತು ಮತಧಾರ್ಮಿಕ ಗುಂಪುಗಳು ಉನ್ನತ ಶಿಕ್ಷಣ ಸಂಸ್ಥೆಗಳ ನಿರ್ವಹಣೆ ಮಾಡುತ್ತಿರುವುದು ಒಂದು ವಿಶೇಷ. ಕೆಳಹಂತದ ಶಿಕ್ಷಣ ಕ್ಷೇತ್ರದಲ್ಲಿದ್ದಂತೆ ಉನ್ನತ ಹಂತದಲ್ಲೂ ಸೌಲಭ್ಯ ಮತ್ತು ಅವಕಾಶಗಳಲ್ಲಿ ವೈಪರೀತ್ಯವು ಏರುಪೇರುಗಳನ್ನು ನಿರ್ಮಿಸಿದೆ. ಸುಬ್ರಮಣ್ಯನ್ ಸಮಿತಿಯು ಉನ್ನತ ಶಿಕ್ಷಣ ಕ್ಷೇತ್ರದ "ಸುಧಾರಣೆಯ" ಅಂಗವಾಗಿ ಎರಡು ಮುಖ್ಯ ಉಪಕ್ರಮಗಳನ್ನು ಪ್ರತಿಪಾದಿಸಿದೆ : ವಿಶ್ವವಿದ್ಯಾಲಯ ಧನಸಹಾಯ ಆಯೋಗದ ಪರಿಷ್ಕಾರ ಮತ್ತು ವಿದೇಶಿ ವಿಶ್ವವಿದ್ಯಾನಿಲಯಗಳನ್ನು ಬರಮಾಡಿಕೊಳ್ಳುವುದು. ವಿಶ್ವವಿದ್ಯಾಲಯಗಳ ಈಗಿನ ವ್ಯವಸ್ಥೆಯನ್ನು ಗೌಣವಾಗಿಸಿ ಕೇಂದ್ರ ಸರ್ಕಾರವು ನೇರವಾಗಿ ಆಣತಿಗಳನ್ನು ಹೊರಡಿಸುವ ಪ್ರಕ್ರಿಯೆ ಹೆಚ್ಚುತ್ತಿದೆ. ಜವಾಹರಲಾಲ್ ನೆಹರು ವಿಶ್ವವಿದ್ಯಾಲಯ, ಹೈದರಾಬಾದಿನ ಕೇಂದ್ರೀಯ ವಿ.ವಿ., ಮುಂತಾದೆಡೆ ಇದು ಪ್ರಕಟಗೊಂಡಿದೆ. ವಿದ್ಯಾರ್ಥಿಗಳು ವ್ಯಾಸಂಗ ಮಾಡುವಾಗ ಕಣ್ಣುಕಟ್ಟಿದ ಕುದುರೆಗಳಂತಿರಬೇಕೆಂಬ ಅಭಿಪ್ರಾಯವು ಉನ್ನತ ವಲಯಗಳಲ್ಲಿ ವ್ಯಕ್ತವಾಗುತ್ತಿದೆ. ಸಮಾಜಶಾಸ್ತ್ರ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ಮುಂತಾದವನ್ನು ತರಗತಿ ಮತ್ತು ಪರೀಕ್ಷೆಗಳಿಗೆ ಸೀಮಿತಗೊಳಿಸುವುದು ಅಧ್ಯಯನದ ಎಲ್ಲೆಗಳನ್ನು ಮೊಟಕುಗೊಳಿಸುತ್ತದೆಂಬ ಪರಿವೆ ಇಲ್ಲವಾಗಿದೆ. ಕುತೂಹಲ, ವೀಕ್ಷಣೆ, ಸಮಕಾಲೀನ ಸಾಮಾಜಿಕ ತಲ್ಲಣಗಳ ವಿಶ್ಲೇಷಣೆ, ಮುಂತಾದವನ್ನು ಶಿಕ್ಷಣದ ವ್ಯಾಪ್ತಿಯಿಂದ ಹೊರಗಿರಿಸುವುದರಿಂದ ಶಿಕ್ಷಣದ ಲಕ್ಷಣವನ್ನು ತಿರುಗುಮುರುಗು ಮಾಡಲಾಗುತ್ತದೆ.

ವಾಜಪೇಯಿಯವರು ಪ್ರಧಾನಿಯಾಗಿದ್ದ ಸಂದರ್ಭದಲ್ಲಿ ಉನ್ನತ ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿ ನಾಲ್ಕು ನಿರ್ದೇಶನಗಳನ್ನು ನೀಡಲಾಗಿತ್ತು : ತೆರವಾಗಿರುವ ಅಧ್ಯಾಪಕರ ಸ್ಥಾನಗಳಲ್ಲಿ ಶೇ. ೮೦ರಷ್ಟು ಮಾತ್ರ ಭರ್ತಿ ಮಾಡಬೇಕು, ಮಿಕ್ಕವನ್ನು ಹಂಗಾಮಿ ಸ್ಥಾನಗಳನ್ನಾಗಿ ಪರಿವರ್ತಿಸಬೇಕು; ಎಲ್ಲ ಹೊಸ ನೇಮಕಾತಿಗಳನ್ನು ಸ್ಥಗಿತಗೊಳಿಸಬೇಕು; ಅಧ್ಯಾಪಕ-ಅಧ್ಯಾಪಕೇತರ ಹುದ್ದೆಗಳಲ್ಲಿ ಶೇ. ೧೦ರಷ್ಟನ್ನು ಮೊಟಕುಗೊಳಿಸಬೇಕು; ಒಂದು ವರ್ಷಕ್ಕೂ ಹೆಚ್ಚು ಕಾಲ ನೇಮಕಾತಿಯಾಗದೆ ಉಳಿದಿರುವ ಹುದ್ದೆಗಳನ್ನು ರದ್ದುಗೊಳಿಸಬೇಕು. ಶಿಕ್ಷಣದ ಮೂಲಭೂತ ಸೌಕರ್ಯಗಳ ಮೇಲೆ ಇವು ವಿಷಮ ಪರಿಣಾಮ ಬೀರಿವೆ. ಅಭಿವೃದ್ಧಿ ಮೀಮಾಂಸೆಯಲ್ಲಿ "ಉದ್ಯೋಗಸೃಷ್ಟಿ ಇಲ್ಲದೆ ಅಭಿವೃದ್ಧಿ"ಯ ಆಕಾಂಕ್ಷೆ ಇರುವಂತೆ ಉನ್ನತ ಶಿಕ್ಷಣದಲ್ಲಿ ಶಿಕ್ಷಕರಿಲ್ಲದ ಶಿಕ್ಷಣ ವ್ಯವಸ್ಥೆಯನ್ನು ನಿರ್ಮಿಸಲಾಗುತ್ತಿದೆ. ಇದರ ಪರಿಣಾಮವು ಘೋರವಾಗಿದ್ದು ಈಗಾಗಲೆ ವ್ಯಾಸಂಗ ಮತ್ತು ಸಂಶೋಧನೆ ಅಪಕ್ವಗೊಳ್ಳುತ್ತಿವೆ.

೧೯೬೮ರ ಶಿಕ್ಷಣ ನೀತಿಯಲ್ಲಿ ದೇಶದ ಒಟ್ಟು ಉತ್ಪಾದಿತ ಸಂಪತ್ತಿನ ಶೇ. ೬ರಷ್ಟನ್ನು ಶಿಕ್ಷಣ ಕ್ಷೇತ್ರಕ್ಕೆ ಮೀಸಲಿಡುವ ಘೋಷಣೆ ಮಾಡಲಾಗಿತ್ತು. ಈವರೆಗೆಂದೂ ಅದನ್ನು ಮಾಡಿಲ್ಲ. ಹೆಚ್ಚೆಂದರೆ ಶೇ. ೩.೯ ಒಮ್ಮೆ ಮತ್ತು ಶೇ. ೪ ಒಮ್ಮೆ ದಾಖಲಾಗಿದ್ದವು. ಬೇರೆಯಂತೆ ಅದು ಶೇ. ೩.೬ರಲ್ಲೇ ಉಳಿದಿದೆ. ೨೦೧೫-೧೬ರಲ್ಲಿ ಉನ್ನತ ಶಿಕ್ಷಣ ಕ್ಷೇತ್ರಕ್ಕೆ




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಕಲಬುರಗಿ - ೫೮೫ ೧೦೨
✆ : ೦೮೪೭೨-೨೨೪೩೦೨

ಮುಂಗಡ ಪತ್ರದಲ್ಲಿ ೯೩೧೫ ಕೋಟಿ ರೂಪಾಯಿಗಳನ್ನು ಇರಿಸಲಾಗಿತ್ತು ; ಪ್ರಸ್ತುತ ೨೦೧೬–೧೭ರಲ್ಲಿ ಅದನ್ನು ಶೇ. ೫೫ರಷ್ಟು ಕಡಿತಗೊಳಿಸಿ ೪೨೮೬ ಕೋಟಿ ಮಾತ್ರ ಇರಿಸಲಾಗಿದೆ. ಭಾರತೀಯ ವಿಜ್ಞಾನ ಸಂಸ್ಥೆಯಂತಹ ಸಂಶೋಧನಾ ಕೇಂದ್ರಗಳಿಗೆ ಸಹ ಹೆಚ್ಚಿನ ಕಡಿತವನ್ನು ಮಾಡಲಾಗಿದೆ. ೨೦೧೩–೧೪ರ ವೇಳೆಗೆ ನಮ್ಮ ದೇಶದಲ್ಲಿ ೭೧೨ ವಿಶ್ವವಿದ್ಯಾನಿಲಯಗಳಿದ್ದವು; ೪೫ ಕೇಂದ್ರೀಯ, ರಾಜ್ಯಗಳ ಅಧೀನದಲ್ಲಿ ೩೧೮, ಖಾಸಗಿ ೧೮೫, ವಿಶ್ವವಿದ್ಯಾನಿಲಯಗಳೆಂದು ಪರಿಗಣಿತವಾದವು (ಡೀಮ್ಡ್) ೧೭೨, ಐಐಟಿ – ಎನ್ಐಟಿ ಮುಂತಾದವು ೫೧. ಅದೇ ೨೦೧೪–೧೫ರಲ್ಲಿ ೪೦,೭೬೦ ಕಾಲೇಜುಗಳಿದ್ದವು. ಇವಲ್ಲದೆ ವಿದೇಶದ ವಿಶ್ವವಿದ್ಯಾನಿಲಯಗಳಿಗೆ ನಮ್ಮ ದೇಶದ ವಿದ್ಯಾರ್ಥಿಗಳು ತೆರಳುತ್ತಿರುತ್ತಾರೆ : ೨೦೧೩–೧೪ರಲ್ಲಿ ಕೇವಲ ಅಮೆರಿಕಾಕ್ಕೆ ಹೋದವರು ಹನ್ನೊಂದು ಲಕ್ಷ ಮೂವತ್ತು ಸಾವಿರ. ಹೀಗಿರುವಾಗ ಶೇ. ೫೫ರಷ್ಟು ಹಣದ ಕಡಿತವು ಉನ್ನತ ಶಿಕ್ಷಣವನ್ನು ಬಹು ಹೆಚ್ಚಾಗಿ ಹದಗೆಡಿಸುತ್ತದೆಂಬುದರಲ್ಲಿ ಎರಡು ಮಾತಿಲ್ಲ.

ಅಪ್ರಕಟಿತ ಸುಬ್ರಮಣ್ಯನ್ ವರದಿಯ ಶಿಫಾರಸು ಹೀಗಿದೆ: "ಕಡಿಮೆ ದರ್ಜೆಯವೆಂದು ಹೇಳಲಾಗಿರುವ ಕಾಲೇಜುಗಳನ್ನು ಮುಚ್ಚಬೇಕು." ಅಂದರೆ, ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ವಿದ್ಯಾರ್ಥಿಗಳ ಸಂಖ್ಯೆಯನ್ನು ಕಡಿಮೆಗೊಳಿಸಬೇಕೆಂದರ್ಥ. ಇದರ ತಕ್ಷಣದ ಪರಿಣಾಮವೆಂದರೆ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಇಲ್ಲವಾಗುವ ಉನ್ನತ ಶಿಕ್ಷಣದ ಅವಕಾಶ. ಸಮಸಮಾಜದ ಬದಲು ಶ್ರೇಣೀಕೃತ ಸಮಾಜದ ಅಡಿಪಾಯವನ್ನು ಭದ್ರಗೊಳಿಸುವ ಹುನ್ನಾರ ಇದರಲ್ಲಿದೆ. ಆರ್ಥಿಕ ಅಭಿವೃದ್ಧಿಯು ದೇಶದ ಗುರಿಯೆಂಬ ಘೋಷವಾಕ್ಯ ಒಂದು ಕಡೆ, ಅಭಿವೃದ್ಧಿಗೆ ಸಾಮಗ್ರಿಗಳಲ್ಲೊಂದಾದ ಉನ್ನತ ಶಿಕ್ಷಣದ ಬಾಬ್ತು ವೆಚ್ಚದ ಕಡಿತ ಇನ್ನೊಂದು ಕಡೆ; ಇದೊಂದು ವಿಪರ್ಯಾಸ. ಜನಪರ ಪರ್ಯಾಯಕ್ಕಾಗಿ ಉನ್ನತ ಶಿಕ್ಷಣ ಕ್ಷೇತ್ರದ ಬಗೆಗೆ ಮರುಚಿಂತನೆ ಅತ್ಯಗತ್ಯವಾಗಿದೆ. ನಮ್ಮ ರಾಜ್ಯದಲ್ಲಿ ವಿಶ್ವವಿದ್ಯಾಲಯಗಳ ಉಪಕುಲಪತಿಗಳ ಆಯ್ಕೆಯು ಕಳೆದ ಒಂದು ದಶಕದಲ್ಲಿ, ವಿಶೇಷವಾಗಿ ಎಚ್. ಆರ್. ಭಾರದ್ವಾಜ್ ಕುಲಾಧಿಪತಿಯಾಗಿದ್ದಾಗ, ಭ್ರಷ್ಟಾಚಾರದ ನೆಲೆಯಲ್ಲಿ ನಡೆದದ್ದು ಕರ್ನಾಟಕದ ದುರದೃಷ್ಟ. ಉನ್ನತ ಶಿಕ್ಷಣದ ಕಾಯಕಲ್ಪದ ಬಗೆಗೆ ದೇಶದಲ್ಲಿ ಮಾತುಗಳ ಮಹಾಪೂರವೇ ಹರಿದಿದೆ, ಆದರೆ ನೈಜ ಬೆಳವಣಿಗೆಯು ಇಲ್ಲವಾಗಿದೆ. ಹಿಂದುಳಿದ ವರ್ಗಗಳನ್ನು ಉನ್ನತ ಶಿಕ್ಷಣ ಕ್ಷೇತ್ರಗಳಲ್ಲಿ ಉಳಿಸಿಕೊಳ್ಳುವ ಮತ್ತು ಹೆಚ್ಚಿಸಿಕೊಳ್ಳುವ ಜವಾಬ್ದಾರಿ ನಮ್ಮ ಸಮಾಜದ ಮೇಲಿದೆ.

## ಉಲ್ಬಣಿಸಿರುವ ಕಾಶ್ಮೀರದ ಪರಿಸ್ಥಿತಿ

**ಕಾ**ಶ್ಮೀರದಲ್ಲಿ ಈಚೆಗೆ ಸಂಭವಿಸಿರುವ ಘಟನೆಗಳು ಅನಿರೀಕ್ಷಿತವೇನಲ್ಲ. ಒಂದು ವಾರಕ್ಕೂ ಹೆಚ್ಚು ದಿನಗಳು ಭದ್ರತಾ ಪಡೆಗಳು ಮತ್ತು ಪ್ರತಿಭಟನಾಕಾರರ ಮಧ್ಯೆ ನಡೆಯುತ್ತಿರುವ ಘರ್ಷಣೆಗಳಲ್ಲಿ ಈಗಾಗಲೇ ನಲವತ್ತಕ್ಕೂ ಹೆಚ್ಚು ಜನ ಸಾವಿಗೀಡಾಗಿದ್ದಾರೆ. ದೇಶದ ಸರ್ವೋಚ್ಚ ನ್ಯಾಯಾಲಯ ಸಶಸ್ತ್ರಪಡೆಗಳ ರಕ್ಷಣೆಗೆ ನೀಡಲಾಗಿದ್ದ ವಿನಾಯಿತಿಯ ರದ್ದತಿ ಕುರಿತು ತೀರ್ಪು ನೀಡಿದ ಒಂದೆರಡು ದಿನಗಳ ನಂತರ ಕಾಶ್ಮೀರ ಪ್ರದೇಶದಲ್ಲಿ ಅಸ್ಥಿರತೆ ಉಂಟಾದ್ದನ್ನು ಗಮನಿಸಬೇಕು. ನ್ಯಾಯಾಲಯದ ಪ್ರಕಾರ ಈ ಕಾಯಿದೆ ಅನ್ವಯವಾಗಿರುವ ಪ್ರದೇಶಗಳಲ್ಲಿ ೧೫೨೫ಕ್ಕೂ ಹೆಚ್ಚು 'ಎನ್‌ಕೌಂಟರ್'ಗಳು, ಭಯೋತ್ಪಾದಕರೆಂದು ಶಂಕಿತರಾದ ವ್ಯಕ್ತಿಗಳ ಹತ್ಯೆಗಳು ನಡೆದಿವೆ. ಇವುಗಳಲ್ಲಿ ಜೊಳ್ಳೆಷ್ಟು ಕಾಳೆಷ್ಟು ಎಂಬುದರ ತನಿಖೆಯಾಗಬೇಕು ಎಂದು ನ್ಯಾಯಾಲಯ ಅಭಿಪ್ರಾಯಪಟ್ಟಿದೆ. ಎಷ್ಟೋ ಮಂದಿ ಅಮಾಯಕರು ಹತ್ಯೆಗೀಡಾಗಿದ್ದಾರೆ ಎನ್ನುವುದರಲ್ಲಿ ಉತ್ಪ್ರೇಕ್ಷೆ ಏನಿಲ್ಲ. ಕಾಶ್ಮೀರ ಕಣಿವೆಯಲ್ಲಿ ಬರ್ಹಾನ್ ವಾನಿ ಎಂಬ ಯುವ ಕಾಶ್ಮೀರಿ ಉಗ್ರನೋರ್ವನ ಎನ್‌ಕೌಂಟರ್ ಹತ್ಯೆಯೇ ಪ್ರತಿಭಟನೆ, ಹಿಂಸಾಚಾರಗಳಿಗೆ ಮೂಲ ಕಾರಣ. ಉಗ್ರನೊಬ್ಬನ ಹತ್ಯೆ ಈ ಕಣಿವೆಯಲ್ಲಿ ಅಪರೂಪವೇನಲ್ಲ. ಆದರೆ ವಾನಿ ಹತ್ಯೆಯ ಕಾರಣ ಉದ್ಭವಿಸಿರುವ ಪರಿಸ್ಥಿತಿ ನಿಜಕ್ಕೂ ದಿಗ್ಭ್ರಮೆ ಹಿಡಿಸುವಂಥದ್ದು. ಇಡೀ ಕಾಶ್ಮೀರ ಕಣಿವೆಯಲ್ಲಿ ಜನಜೀವನ ಅಸ್ತವ್ಯಸ್ತಗೊಂಡಿದೆ. ಪ್ರತಿಭಟನಾ ಪ್ರದರ್ಶನಗಳು, ಬಂದ್‌ಗಳು ನಡೆದಿವೆ. ವಿವಿಧ ಪ್ರದೇಶಗಳಲ್ಲಿ, ಕರ್ಫ್ಯೂ, ಪ್ರತಿಬಂಧಕಾಜ್ಞೆಗಳು ಜಾರಿಯಲ್ಲಿವೆ. ಅರ್ಥಾತ್ ಒಳಗೇ ಹುದುಗಿದ್ದ ಅತೃಪ್ತಿ ಈ ಪ್ರದೇಶದಲ್ಲಿ ಆಸ್ಫೋಟಗೊಂಡಿದೆ. ಪ್ರತಿಭಟನೆಗಳಲ್ಲಿ ಪಾಲ್ಗೊಂಡಿರುವವರಲ್ಲಿ ಯುವಜನರೇ ಹೆಚ್ಚಾಗಿದ್ದಾರೆ. ಉಗ್ರನೊಬ್ಬನ ಹತ್ಯೆಯ ವಿರುದ್ಧವಾಗಿ ಇಂಥ ಪ್ರತಿಭಟನೆಗಳು ಜರುಗಿರುವುದು ಇದೇ ಮೊದಲ ಬಾರಿ.

ಕಾಶ್ಮೀರದಲ್ಲಿ ಪೀಪಲ್ಸ್ ಡೆಮಾಕ್ರಟಿಕ್ ಪಾರ್ಟಿ ಮತ್ತು ಭಾರತೀಯ ಜನತಾ ಪಾರ್ಟಿ ಕೂಡಿಕೊಂಡು ಸರಕಾರ ರಚಿಸಿ ಎರಡು ವರ್ಷವಾಗುತ್ತ ಬಂತು. ಪರಿಸ್ಥಿತಿ ಸುಧಾರಿಸುವುದೆಂಬ ನಿರೀಕ್ಷೆಯೂ ಇತ್ತು. ಆದರೆ ಈ ಎರಡೂ ಪಕ್ಷಗಳ ಮಧ್ಯೆ ಸಾಮರಸ್ಯದ ಕೊರತೆ ಎದ್ದುಕಾಣುತ್ತಿತ್ತು. ಉಗ್ರರು, ಪ್ರತ್ಯೇಕವಾದಿಗಳು ಸರಕಾರದ ಮೃದು ಧೋರಣೆಯಿಂದಾಗಿ ಹೆಚ್ಚು ಕ್ರಿಯಾಶೀಲರಾಗಿದ್ದರು. ಆಂತರಿಕವಾಗಿ ಜನರ ಆಕ್ರೋಶ ಹುದುಗಿಕೊಂಡಿತ್ತು ಎನ್ನುವುದನ್ನು ಕಡೆಗಣಿಸಲಾಗುವುದಿಲ್ಲ. ಕಾಶ್ಮೀರದಲ್ಲಿ ಗಂಭೀರ ಪರಿಸ್ಥಿತಿ ಹೊಸದೇನಲ್ಲ. ಸ್ವಾತಂತ್ರ್ಯಾನಂತರದ ದಿನಗಳಿಂದಲೂ ಇದ್ದದ್ದೆ. ಕೇಂದ್ರ ಹಾಗೂ ರಾಜ್ಯ ಸರಕಾರಗಳ ವೈಫಲ್ಯಗಳು ಇಂದಿನ ಪರಿಸ್ಥಿತಿಗೆ ಕಾರಣ. ಕಾಶ್ಮೀರ ರಾಜ್ಯ ಭಾರತದ ಅವಿಭಾಜ್ಯ ಅಂಗ ಎಂಬ ಹೇಳಿಕೆಗಳು ಘೋಷಣೆಯಾಗಿ ಉಳಿದಿವೆಯೇ ಹೊರತು ಕಾರ್ಯರೂಪಕ್ಕೆ ಬಂದಿಲ್ಲ. ಕೇಂದ್ರದ ಸರಕಾರಗಳು ಕಾಶ್ಮೀರ ಜನರನ್ನು ಒಲಿಸಿಕೊಳ್ಳುವ ಬದಲು ದೂರಮಾಡುತ್ತ ಬಂದಿವೆ ಎಂಬುದು ನಿಜ. ಒಮ್ಮೆ ಪರಿಸ್ಥಿತಿ ನಿಯಂತ್ರಣಕ್ಕೆ ಬಂತೆಂದರೆ ಸರಕಾರ ಜನತೆಗೆ ನೀಡಿದ್ದ ಆಶ್ವಾಸನೆಗಳನ್ನು ಕಡೆಗಣಿಸುತ್ತ ಬಂದಿವೆ. ಇದರ ಲಾಭ ಪಡೆದುಕೊಂಡು ಪಾಕಿಸ್ತಾನದ ಉಗ್ರರು, ಪ್ರತ್ಯೇಕವಾದಿಗಳನ್ನು ಎತ್ತಿಕಟ್ಟುತ್ತಿದ್ದಾರೆ. ಈಗ ಉದ್ಭವಿಸಿರುವ ಪರಿಸ್ಥಿತಿಯನ್ನು ಪಾಕಿಸ್ತಾನದ ಪ್ರಧಾನಿ ನವಾಜ್ ಷರೀಫ್ ಉಪಯೋಗಿಸಿಕೊಳ್ಳಲು ಸಾಕಷ್ಟು ಪ್ರಯತ್ನಿಸುತ್ತಿದ್ದಾರೆ. ಅದನ್ನು ಅಂತರರಾಷ್ಟ್ರೀಯ ವಿವಾದವಾಗಿಸಲು ವಿಶ್ವಸಂಸ್ಥೆಗೆ ದೂರು ನೀಡಿದ್ದಾರೆ. ಪಾಕಿಸ್ತಾನಿ ಉಗ್ರಸಂಘಟನೆಗಳು ಪ್ರತಿಭಟನೆಗಳನ್ನು ನಡೆಸಿವೆ. ಈ ಬೆಳವಣಿಗೆಗಳು ಆತಂಕಕಾರಿ. ಅಮೆರಿಕ ಪರಿಸ್ಥಿತಿಯ ಕುರಿತು ಕಳವಳ ವ್ಯಕ್ತಪಡಿಸಿದೆಯೇ ಹೊರತು, ಪಾಕ್ ಹಸ್ತಕ್ಷೇಪದ ವಿಚಾರ ಚಕಾರವೆತ್ತಿಲ್ಲ. ಪಾಕಿಸ್ತಾನ ಸರಕಾರ ಕಾಶ್ಮೀರದ ಪ್ರಶ್ನೆಯನ್ನು ಪ್ರಧಾನವಾದ್ದೆಂದು ಮುಂದೆ ತರಲು ಅವಕಾಶವಾಗಿದೆ, ಇದರಿಂದ.

ಸರಕಾರ ಮತ್ತು ರಾಜಕಾರಣಿಗಳು ಕಾಶ್ಮೀರದಲ್ಲಿ ಗಲಭೆಗಳಾದಾಗ ಮಾತ್ರ ಸಮಸ್ಯೆಗೆ ಪರಿಹಾರ ಹುಡುಕಲು ಹವಣಿಸುತ್ತವೆ. ಅದಕ್ಕಾಗಿ ಸರ್ವಪಕ್ಷಗಳ ಸಮಿತಿಯನ್ನು ರಚಿಸಿ ಕಾಶ್ಮೀರಕ್ಕೆ ಕಳಿಸಿದ್ದೂ ಇದೆ. ಕಾಶ್ಮೀರಿ ಜನರ ನ್ಯಾಯವಾದ ಬೇಡಿಕೆಗಳಿಗೆ ಗಮನ ನೀಡುವ ಆಶ್ವಾಸನೆಯನ್ನೂ ನೀಡುತ್ತವೆ. ಭಿನ್ನಮತೀಯರೊಂದಿಗೆ ಮಾತುಕತೆ ನಡೆಸಿರುವ ಸಂದರ್ಭಗಳೂ ಇವೆ. ಆದರೆ ರಾಜಕೀಯ ಮುತ್ಸದ್ದಿತನ ತೋರಿ ಧೈರ್ಯವಾದ ನಿರ್ಧಾರಗಳನ್ನು ತೆಗೆದುಕೊಳ್ಳುವುದಿಲ್ಲ. ಪರಿಸ್ಥಿತಿ ಹದಗೆಡುತ್ತಿರುವುದಕ್ಕೆ ಇದೇ ಮುಖ್ಯವಾದ ಕಾರಣ. ಈಗ ನಡೆಯುತ್ತಿರುವ ಪ್ರತಿಭಟನೆಗಳು ಇಂದಲ್ಲ ನಾಳೆ ತಣ್ಣಗಾದೀತು. ಆದರೆ ಅದರ ಹಿಂದಿರುವ ನೋವು, ಅತೃಪ್ತಿಗಳು ಮಾತ್ರ ಬುಸುಗುಡುತ್ತಲೇ ಇರುತ್ತವೆ. ಇದನ್ನು ಕಾಶ್ಮೀರ ಕಣಿವೆಯಲ್ಲಷ್ಟೇ ಅಲ್ಲದೆ ದೇಶದ ಈಶಾನ್ಯ ರಾಜ್ಯಗಳಲ್ಲೂ ಕಂಡಿದ್ದೇವೆ. ಈ ಪ್ರದೇಶಗಳ ಅಭಿವೃದ್ಧಿಗೆ ಆದ್ಯತೆ, ವಿಶೇಷ ಗಮನ ನೀಡುವ ಆಶ್ವಾಸನೆಗಳಿದ್ದರೂ ಕಾರ್ಯತಹ ಅಮಲಿಗೆ ಬಂದಿರುವುದು ಕಡಿಮೆ. ಆರೋಪ ಪ್ರತ್ಯಾರೋಪಗಳಿಂದ ಪ್ರಯೋಜನವಾಗದು. ಕಾಶ್ಮೀರದ ಜನರ ವಿಶ್ವಾಸವನ್ನು ಗಳಿಸಲು ಸರಕಾರ ಸೂಕ್ತವಾದ ಕ್ರಮಗಳನ್ನು ಕೈಗೊಳ್ಳಬೇಕು. ಕಾಶ್ಮೀರದ ಜನತೆಗೆ ನೀಡಿರುವ ಆಶ್ವಾಸನೆಗಳನ್ನು ಈಡೇರಿಸಬೇಕು. ಭಿನ್ನರನ್ನು ಭಯೋತ್ಪಾದಕರೆಂದು ಆರೋಪಿಸಿ ದೂರ ಇರಿಸುವುದು ಸರಿಯಾಗದು. ಭಿನ್ನರು ಪ್ರತ್ಯೇಕವಾದಿಗಳು ಬಿಗಿಧೋರಣೆ ಬಿಟ್ಟು ಮಾತುಕತೆಗಳಿಗೆ ಮುಂದಾಗಬೇಕು. ಎಲ್ಲರೊಂದಿಗೂ ಮಾತುಕತೆ ನಡೆಸಿ ಪರಿಹಾರ ಕಂಡುಕೊಳ್ಳಬೇಕು. ಹಲವು ವರ್ಷಗಳಿಂದ ಜಾರಿಯಲ್ಲಿರುವ ಸಶಸ್ತ್ರ ಪಡೆಗಳ ವಿಶೇಷಾಧಿಕಾರ ರಿಯಾಯಿತಿಗಳನ್ನು ರದ್ದುಗೊಳಿಸಬೇಕು ಜರೂರಾಗಿ. ಕಣಿವೆಯಲ್ಲಿ ಉಂಟಾಗಿರುವ ಭಯದ ವಾತಾವರಣವನ್ನು ನಿವಾರಿಸಬೇಕು. ಹಾಗೆ ಸೂಕ್ತಕ್ರಮಗಳನ್ನು ಕೈಗೊಳ್ಳದೆ ಹೋದರೆ ಜನರ ವಿಶ್ವಾಸ ಗಳಿಸಲಾಗದು. ಮತ್ತೆ ಮತ್ತೆ ಇಂಥ ಘಟನೆಗಳು ಸಂಭವಿಸುವ ಅಪಾಯದ ಜೊತೆಗೆ, ಮುಂದೊಂದು ದಿನ ಎಲ್ಲವನ್ನೂ ಕಳೆದುಕೊಳ್ಳಬೇಕಾದೀತು ಎಂಬ ಎಚ್ಚರ ಇರಬೇಕು. ಕಾಶ್ಮೀರದಲ್ಲಿ ಇಂದು ಉದ್ಭವಿಸಿರುವ ಪರಿಸ್ಥಿತಿ ಆದಷ್ಟು ಬೇಗ ಶಮನಗೊಳ್ಳಲಿ ಎಂದು ಆಶಿಸೋಣ.

*(ಈ ತಿಂಗಳು : ೩ನೇ ಪುಟದಿಂದ)*

ಪ್ರದೇಶದಲ್ಲಿ ಸೇನಾಪಡೆಗಳವರು ಏನೇ ದೌರ್ಜನ್ಯ ಎಸಗಿದರೂ ಅವರಿಗೆ ರಕ್ಷಣೆ ನೀಡಲಾಗಿದೆ. ಇದರ ವಿರುದ್ಧವಾಗಿ ಆ ಪ್ರದೇಶಗಳ ಜನ ಪ್ರತಿಭಟಿಸಿದ್ದಾರೆ. ಮಣಿಪುರ ಒಂದರಲ್ಲೇ ೧೫೨೮ ಕಾನೂನುಬಾಹಿರ ಹತ್ಯೆಗಳು ಬೆಳಕಿಗೆ ಬಂದಿವೆ. ಇದನ್ನು ಪ್ರಶ್ನಿಸಿಯೇ ಸುಪ್ರೀಮ್ ಕೋರ್ಟಿನಲ್ಲಿ ಮೊಕದ್ದಮೆ ಹೂಡಿದ್ದುದು. ಸೇನಾಪಡೆಗಳಿಗೆ ನೀಡಲಾಗಿರುವ ಈ ವಿನಾಯಿತಿಯು ಜನಸಾಮಾನ್ಯರಲ್ಲಿ ತೀವ್ರವಾದ ಅತೃಪ್ತಿಗೆ ಎಡೆಕೊಟ್ಟಿದೆ. ಮಣಿಪುರದಲ್ಲಿ ಶರ್ಮಿಳಾ ಎಂಬ ಯುವತಿ ೧೬ ವರ್ಷಗಳಿಂದ ಉಪವಾಸ ಸತ್ಯಾಗ್ರಹ ನಡೆಸುತ್ತಿದ್ದಾಳೆ; ಸೇನೆಗೆ ನೀಡಿರುವ ವಿಶೇಷ ರಿಯಾಯಿತಿಯನ್ನು ರದ್ದುಗೊಳಿಸುವಂತೆ. ಈ ಬಗೆಯಲ್ಲಿ ವಿಶೇಷ ಅಧಿಕಾರದೊಂದಿಗೆ ಸೇನೆಯ ನಿಯೋಜನೆಯಿಂದ ಉಪಯೋಗಕ್ಕಿಂತ ಹಾನಿಯೇ ಅಧಿಕವಾಗಿದೆ ಎನ್ನಬಹುದು. ತ್ರಿಪುರಾದಲ್ಲಿ ೨೦೧೫ರಲ್ಲಿ ಈ ಕಾಯಿದೆ ಅನ್ವಯವನ್ನು ರದ್ದುಗೊಳಿಸಲಾಯಿತು. ಆದರೂ ಕಾಶ್ಮೀರ ಮತ್ತು ಈಶಾನ್ಯ ಪ್ರದೇಶದ ಕೆಲವೆಡೆಗಳಲ್ಲಿ ಅದು ಇನ್ನೂ ಜಾರಿಯಲ್ಲಿದೆ. ನ್ಯಾಯಾಲಯದ ತೀರ್ಪಿನ ನಂತರ ಸರಕಾರವು ಏನು ಕ್ರಮ ಕೈಗೊಳ್ಳುವುದೋ ನೋಡಬೇಕು.

* * *

ಕಳೆದ ಕೆಲ ವರ್ಷಗಳಿಂದ ಆಫ್ರಿಕನ್ ಅಮೆರಿಕನ್ನರು ಎಂದು ಕರೆಯುವ ಕಪ್ಪು ಜನಾಂಗದವರು ಮತ್ತು ಬಿಳಿಯರು, ಅದರಲ್ಲೂ ಪೊಲೀಸರ ನಡುವೆ ವಿರಸ ಹಾಗೂ ವೈಮನಸ್ಯಗಳು ಉಲ್ಬಣಿಸುತ್ತಲೇ ಇವೆ. 'ಕಪ್ಪು ಜನರ ಜೀವಕ್ಕೂ ಬೆಲೆ ಇದೆ' ಎನ್ನುವ ಘೋಷಣೆ ಇತ್ತೀಚಿನದಾದರೂ ಎರಡೂ ಜನಾಂಗಗಳ ಮಧ್ಯೆ ದ್ವೇಷ, ಅಸೂಯೆಗಳು ಬಹಳ ಹಿಂದಿನಿಂದಲೇ ಬಂದದ್ದಾಗಿದೆ. ಅಮೆರಿಕದಲ್ಲಿ ಸಂಭವಿಸಿರುವ ಘರ್ಷಣೆಗಳಲ್ಲಿ ಕರಿಯರು ಬಲಿಯಾಗಿರುವುದೇ ಹೆಚ್ಚು. ಅಮೆರಿಕದಲ್ಲಿ ಆಫ್ರಿಕನ್ ಅಮೆರಿಕನ್ ಪೈಕಿ ಒಬ್ಬರಾದ ಬರಾಕ್ ಒಬಾಮ ಅಧ್ಯಕ್ಷ ಪದವಿಗೇರಿದರೂ ಕರಿಯರ ಮೇಲೆ ಹಿಂಸಾಚಾರವೇನೂ ಕಡಿಮೆಯಾಗಿಲ್ಲ. ಇತ್ತೀಚೆಗೆ ಟೆಕ್ಸಾಸ್‌ನ ಡಲ್ಲಾಸ್‌ನಲ್ಲಿ ನಡೆದ ಬಂದೂಕು ದಾಳಿಯಲ್ಲಿ ಐವರು ಪೊಲೀಸರು ಬಲಿಯಾದ್ದು ಅದಕ್ಕೆ ಸಾಕ್ಷಿ. ಈ ಕೃತ್ಯ ಎಸಗಿದಾತ ಮಿಕಾ ಜಾನ್ಸನ್ ಎಂಬ ಆಫ್ರಿಕನ್ ಅಮೆರಿಕನ್. ಇದು ಕಪ್ಪು ಜನಾಂಗೀಯರ ಮೇಲೆ ಪೊಲೀಸರ ದುಂಡಾವೃತ್ತಿಗೆ ಪ್ರತೀಕಾರವಾಗಿತ್ತು. ಇದಕ್ಕೆ ಮುನ್ನ ಅಮೆರಿಕದ ಲೂಸಿಯಾನ ಮತ್ತು ಮಿನೆಟ್‌ಸೋಟಾ ನಗರಗಳಲ್ಲಿ ಬಿಳಿಯ ಪೊಲೀಸರು ಇಬ್ಬರು ಕರಿಯರನ್ನು ಹತ್ಯೆಗೆಯ್ದಿತ್ತು. ಇದಕ್ಕೆ ವಿರುದ್ಧವಾಗಿ ಡಲ್ಲಾಸ್‌ನಲ್ಲಿ ಆಫ್ರಿಕನ್ ಅಮೆರಿಕನ್ನರು ಪ್ರದರ್ಶನ ನಡೆಸುತ್ತಿದ್ದಾಗ ನಡೆದ ಘಟನೆ ಇದು. ಮಿಕಾ ಜಾನ್ಸನ್ ಎಂಬುವನು ಅಮೆರಿಕ ಸೇನೆಯಲ್ಲಿ ಆಫ್ಘಾನಿಸ್ಥಾನದಲ್ಲಿ ಸೇವೆ ಸಲ್ಲಿಸಿದಾತ. ಅವನು ಪೊಲೀಸರ ಮೇಲೆ ನಡೆಸಿದ ದಾಳಿ ಜನಾಂಗ ದ್ವೇಷದ ಕಿಚ್ಚನ್ನು ಇನ್ನಷ್ಟು ಹೆಚ್ಚಿಸುವ ಸೂಚನೆಯಾಗಿದೆ. ಡಲ್ಲಾಸ್ ಘಟನೆಯ ಸಮಯದಲ್ಲಿ ಯೂರೋಪಿನ ಪ್ರವಾಸದಲ್ಲಿರುವ ಅಧ್ಯಕ್ಷ ಬರಾಕ್ ಒಬಾಮಾ ಆದಷ್ಟು ಬೇಗ ಡಲ್ಲಾಸ್‌ಗೆ ಭೇಟಿ ನೀಡುವುದಾಗಿ ಹೇಳಿದ್ದಾರೆ. ಅವರು ಎರಡೂ ಜನಾಂಗಗಳ ಮಧ್ಯೆ ಸಾಮರಸ್ಯ ಏರ್ಪಡಿಸಲು ಪ್ರಯತ್ನಿಸುತ್ತಿದ್ದು, ಮಾತುಕತೆಗಳನ್ನು ನಡೆಸುತ್ತಿದ್ದಾರೆ. ಡಲ್ಲಾಸ್‌ನ ಈ ದುರ್ಘಟನೆ ಅಮೆರಿಕದಲ್ಲಿ ಮತ್ತೆ ಬಂದೂಕಿನ ನಿಯಂತ್ರಣದ ಬಗ್ಗೆ ಚರ್ಚೆಗೆ ಗ್ರಾಸವಾಗಿದೆ.

* * *

ಕೇಂದ್ರದಲ್ಲಿ ಎರಡು ವರ್ಷಗಳಾದ ಮೇಲೆ, ರಾಜ್ಯದಲ್ಲಿ ಮೂರು ವರ್ಷಗಳಾದ ಮೇಲೆ ಸಂಪುಟ ಪುನಾರಚನೆಯಾಗಿದೆ. ರಾಜ್ಯದಲ್ಲಿ ಅತೃಪ್ತಿಯ ಭುಗಿಲೆದ್ದರೆ, ಕೇಂದ್ರ ಸಚಿವ ಸಂಪುಟದಲ್ಲಿ ಕಿಮಕ್ ಕಮಕ್ ಎನ್ನದೆ ಮಹತ್ತರ ಬದಲಾವಣೆಗಳು ಸಂಭವಿಸಿವೆ. ಮೋದಿ ಸರಕಾರದ ವಿಸ್ತರಣೆಯಾಗಿದೆ, ಹಲವು ಖಾತೆಗಳ ಮರುಹಂಚಿಕೆಯಾಗಿದೆ, ಕೆಲ ಸಚಿವರುಗಳನ್ನು ಕೈಬಿಡಲಾಗಿದೆ. ಕರ್ನಾಟಕಕ್ಕೆ ಅನ್ಯಾಯವಾಗಿದೆ ಎಂಬ ಕೂಗಿದ್ದರೂ ಅದನ್ನು ಕೇಳುವವರು ಯಾರೂ ಇಲ್ಲ. ಕರ್ನಾಟಕದವರಿಗೆ ಯಾವುದೇ ಪ್ರಾಮುಖ್ಯವಾದ ಖಾತೆ ವಹಿಸದಿರುವುದು ಶೋಚನೀಯ. ಮುಖ್ಯವಾಗಿ ಮಾನವ ಸಂಪನ್ಮೂಲ ಸಚಿವೆ ಸ್ಮೃತಿ ಇರಾನಿಯ ಖಾತೆಯನ್ನು ಬದಲಿಸಿ ಆಕೆಗೆ ಜವಳಿ ಖಾತೆ ನೀಡಿರುವುದು ಅಕಾಡೆಮಿಕ್ ವಲಯದಲ್ಲಿ ನಿರಾಳ ಭಾವವುಂಟಾಗಿದೆ. ಪುಣೆ ಫಿಲಂ ಇನ್‌ಸ್ಟಿಟ್ಯೂಟ್ ವಿವಾದ, ಹೈದರಾಬಾದ್ ವಿಶ್ವವಿದ್ಯಾನಿಲಯದಲ್ಲಿ ದಲಿತ ವಿದ್ಯಾರ್ಥಿಯ ಆತ್ಮಹತ್ಯೆ, ಜವಾಹರಲಾಲ್ ವಿಶ್ವವಿದ್ಯಾನಿಲಯದ ಪ್ರಕರಣ ಇವೆಲ್ಲ ಆಕೆ ಖಾತೆ ವಹಿಸಿಕೊಂಡಮೇಲೆ ಆದದ್ದು. ಇದಲ್ಲದೆ ಪ್ರತಿಷ್ಠಿತ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್, ಐಐಟಿ ಹಾಗೂ ಇತರ ಉನ್ನತ ಶಿಕ್ಷಣ ಸಂಸ್ಥೆಗಳ ವ್ಯವಹಾರದಲ್ಲಿ ಬೇಕಾಬಿಟ್ಟಿ ನೇಮಕ ಹಾಗೂ ಮೂಗು ತೂರಿಸಿದ್ದು ಸಾಕಷ್ಟು ಅಸಮಾಧಾನ ತಂದಿತ್ತು. ಮುಂದಿನ ವರ್ಷ ಐದು ರಾಜ್ಯಗಳಲ್ಲಿ ನಡೆಯುವ ಚುನಾವಣೆಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಸಂಪುಟ ಪುನಾರಚನೆಯಾಗಿದೆ. ಉಳಿದಂತೆ ಪ್ರಾಮುಖ್ಯವಾದ ಖಾತೆಗಳಲ್ಲಿ ಬದಲಾವಣೆ ಏನೂ ಇಲ್ಲ.

ಹೆಚ್ಚು ಕಡಿಮೆ ಒಂದು ವರ್ಷ ಕಾಲ ತಳ್ಳಿಕೊಂಡು ಬಂದ ಸಿದ್ದರಾಮಯ್ಯ ಸಂಪುಟದ ಮೇಜರ್ ಸರ್ಜರಿ ಆದದ್ದು ಇತ್ತೀಚೆಗಷ್ಟೆ. ಅದು ಸೃಷ್ಟಿಸಿದ ಅಸಮಾಧಾನ, ಅತೃಪ್ತಿ, ಆಕ್ರೋಶಗಳು ಇನ್ನೂ ಪೂರ್ಣವಾಗಿ ತಣ್ಣಗಾಗಿವೆ ಎಂದು ಹೇಳುವಂತಿಲ್ಲ. ಹೈಕಮಾಂಡ್ ಒತ್ತಡ ಹೇರಿದ ಮೇಲೆ ಕಳೆದ ವರ್ಷ ಸಂಪುಟಕ್ಕೆ ಪರಮೇಶ್ವರ, ಶಿವಕುಮಾರ್ ಇವರಿಗೆ ಕ್ರಮವಾಗಿ ಗೃಹಖಾತೆ ಮತ್ತು ವಿದ್ಯುತ್ ಖಾತೆ ವಹಿಸಿಕೊಟ್ಟು ಸಂಪುಟವನ್ನು ವಿಸ್ತರಿಸಲಾಗಿತ್ತು. ಕೆಲವು ಸಚಿವರನ್ನು ಕೈಬಿಟ್ಟು, ಹೊಸಬರಿಗೆ ಅವಕಾಶ ಮಾಡಿಕೊಟ್ಟು ಸಿದ್ದರಾಮಯ್ಯ ಮುಂದಿನ ಚುನಾವಣೆಗಳತ್ತ ಗಮನ ಹರಿಸಿದ್ದಾರೆ. ಮಂಡ್ಯ, ಮೈಸೂರುಗಳಲ್ಲಿ ಭುಗಿಲೆದ್ದ ಆಕ್ರೋಶ, ಪ್ರತಿಭಟನೆಗಳು ಅವರಿಗೆ ಅನಿರೀಕ್ಷಿತವಾದ್ದೇನಾಗಿರಲಿಲ್ಲ. ಸಾಕಷ್ಟು ಗದ್ದಲ ಎಬ್ಬಿಸಿ, ಶಾಸಕ ಸ್ಥಾನಕ್ಕೂ ರಾಜೀನಾಮೆ ಸಲ್ಲಿಸಿದ್ದ ಅಂಬರೀಶ್ ಈಗ ತಣ್ಣಗಾಗಿದ್ದಾರೆ. ಅತೃಪ್ತರನ್ನು ಶಮನಗೊಳಿಸುವುದರಲ್ಲಿ ಸಂಪೂರ್ಣ ಯಶಸ್ಸು ಕಾಣದಿದ್ದರೂ ಮುಖ್ಯಮಂತ್ರಿಗಳು ಸದ್ಯಕ್ಕೆ ಬಚಾವಾಗಿದ್ದಾರೆ. ಇನ್ನೆರಡು ವರ್ಷ ಹಾಗೂ ಹೀಗೂ ತಳ್ಳುವುದು ಅಂಥ ಕಷ್ಟವೇನಾಗದು. ಆದರೆ ಸಾಕಷ್ಟು ವಿವಾದಗಳನ್ನು ಹುಟ್ಟುಹಾಕಿರುವ ಈ ಕಾಂಗ್ರೆಸ್ ಸರಕಾರ ಮುಂದೇನಾಗಬಹುದು ಎಂಬುದರ ಬಗ್ಗೆ ಕಾಳಜಿ ವಹಿಸಿದಂತಿಲ್ಲ. ಕಾಂಗ್ರೆಸ್ ಮುಕ್ತ ರಾಷ್ಟ್ರದ ಘೋಷಣೆ ನೀಡಿರುವ ಭಾಜಪ ಯಶಸ್ವಿಯಾದೀತೆ ಎಂಬ ಅನುಮಾನ ಹೆಚ್ಚಾಗುತ್ತಿದೆ. ಕಾಂಗ್ರೆಸ್ ದೊಡ್ಡ ರಾಜ್ಯವೊಂದರ ಸಾರಥ್ಯ ವಹಿಸಿಕೊಂಡಿರುವುದು ಕರ್ನಾಟಕದಲ್ಲಿ ಮಾತ್ರ ಎನ್ನುವುದನ್ನು ಗಮನದಲ್ಲಿರಿಸಿಕೊಳ್ಳಬೇಕು.

* * *

ಕರ್ನಾಟಕದಲ್ಲಿ ಅತ್ಯಂತ ಭ್ರಷ್ಟ ಸರಕಾರವನ್ನು ನೀಡಿ, ಕಾರಾಗೃಹ ಸೇರಿದ ಏಕೈಕ ಮುಖ್ಯಮಂತ್ರಿ ಯಡಿಯೂರಪ್ಪ ಮುಂದಿನ ಚುನಾವಣೆಯಲ್ಲಿ ಅಧಿಕಾರ ಗ್ರಹಣ ಮಾಡುವ ಕನಸು ಕಾಣುತ್ತಿದ್ದಾರೆ. ಮೋದಿ–ಅಮಿತ್ ಕೃಪೆಯಿಂದ ಭಾಜಪ ಕರ್ನಾಟಕ ವಿಭಾಗದ ಅಧ್ಯಕ್ಷತೆ ಗಿಟ್ಟಿಸಿಕೊಂಡಿರುವ ಯಡಿಯೂರಪ್ಪ ಕನಸು ನನಸಾಗುವುದು ಅಷ್ಟು ಸುಲಭವೇನಲ್ಲ. ಪದಾಧಿಕಾರಿಗಳ ನೇಮಕದಲ್ಲಿ ಬೇಕಾದಷ್ಟು ಅಸಮಾಧಾನ ಇದೆ. ರಾಜ್ಯದಲ್ಲಿ ಈಚೆಗೆ ಸಂಭವಿಸಿರುವ ಕೆಲವು ಘಟನೆಗಳು ಭಾಜಪಗೆ ಸುಗ್ಗಿಯಾಗಿದೆ. ಎರಡು ವರ್ಷಗಳ ಹಿಂದೆ ಎಂದು ಕಾಣುತ್ತದೆ ಕೋಲಾರದ ಡೆಪ್ಯೂಟಿ ಕಮೀಶನರ್ ಆಗಿದ್ದ ಡಿ. ಕೆ. ರವಿ ಆತ್ಮಹತ್ಯೆ ಪ್ರಕರಣ ಜರುಗಿ, ಈಗ ಅಂಥದೆ ಪ್ರಕರಣಗಳು ಸಿದ್ದರಾಮಯ್ಯ ಸರಕಾರವನ್ನು ಕಾಡುತ್ತಿವೆ. ಅಚ್ಚರಿಯ ಸಂಗತಿ ಎಂದರೆ ಇಬ್ಬರು ಪೊಲೀಸು ಅಧಿಕಾರಿಗಳು, ಅಂದರೆ ಡೆಪ್ಯೂಟಿ ಸೂಪರಿಂಟೆಂಡೆಂಟ್ ದರ್ಜೆಯವರು ಆತ್ಮಹತ್ಯೆಗೀಡಾಗಿದ್ದಾರೆ. ಒಬ್ಬರು ಕಲ್ಲಪ್ಪ ಹಂದಿಬಾಗ್, ಇನ್ನೊಬ್ಬರು ಎಂ. ಕೆ. ಗಣಪತಿ. ಇಬ್ಬರೂ ಖಿನ್ನತೆ ಅನುಭವಿಸುತ್ತಿದ್ದರು ಎನ್ನುವುದು ಸರಕಾರದ ಅಂಬೋಣ. ಪ್ರತಿಪಕ್ಷಗಳ ಪ್ರಕಾರ ಮೇಲಧಿಕಾರಿಗಳ, ಸಚಿವರ ಕಿರುಕುಳ, ಮುಖ್ಯವಾಗಿ ಸಂಪುಟ ಸಚಿವ ಜಾರ್ಜರವರ ವರ್ತನೆ ಈ ಅಧಿಕಾರಿಗಳನ್ನು ಆತ್ಮಹತ್ಯೆಗೆ ದೂಡಿತು. ಅಂದರೆ, ಈ ಆತ್ಮಹತ್ಯೆಗಳನ್ನು ಗಮನಿಸಿದಾಗ ಇಂಥ ಅಳ್ಳೆದೆಯ ಅಧಿಕಾರಿಗಳೂ ಪೊಲೀಸು ಇಲಾಖೆಯಲ್ಲಿದ್ದಾರೆ ಎಂದಾಯಿತು. ಮಾಧ್ಯಮಗಳಿಗೆ ಇಂಥ ಪ್ರಕರಣಗಳು ಒಣ ಚರ್ಚೆಗಳಿಗೆ, ಉತ್ಪ್ರೇಕ್ಷೆಗೆ ಮತ್ತು ವೈಭವೀಕರಣಕ್ಕೆ ಸಿಹಿಸುದ್ದಿ. ಇದ್ದದ್ದು, ಇಲ್ಲದ್ದು ಸೇರಿಸಿ ಮೃತರನ್ನು ಹೀರೋಗಳಾಗಿ ಮಾಡಿ, ತಾವೇ ತೀರ್ಪುಗಾರರಾಗುವುದು ಮಾಧ್ಯಮಗಳಿಗೆ ಹೊಸದೇನಲ್ಲ. ಐಎಎಸ್ ಅಧಿಕಾರಿ ರವಿಯವರ ಸಾವಿನ ಪ್ರಕರಣ ನೋಡಿದ್ದೇವೆ. ಈಗ ಡಿವೈಎಸ್ಪಿಗಳ ಆತ್ಮಹತ್ಯೆ ಪ್ರತಿಪಕ್ಷಗಳ ಪ್ರತಿಭಟನೆಗಳಿಗೆ ಹೇಳಿಮಾಡಿಸಿದಂಥ ಪ್ರಸಂಗಗಳಾಗಿವೆ. ಈಗಾಗಲೇ ವಿಧಾನ ಮಂಡಲದ ಕಾರ್ಯಕಲಾಪಗಳು ಸಾಕಷ್ಟು ಸ್ಥಗಿತಗೊಂಡಿವೆ. ಸರಕಾರ ಏನೇ ಸಮರ್ಥನೆ ನೀಡಿ

ತನಿಖೆಗೆ ಆದೇಶಿಸಿದ್ದರೂ ಶಮನವಾಗಿಲ್ಲ. ಆತ್ಮಹತ್ಯೆ ಮಾಡಿಕೊಂಡವರು ಕಿರುಕುಳ ನೀಡುತ್ತಿದ್ದವರನ್ನು ಎದುರಿಸಿ ಹುದ್ದೆಗೆ ರಾಜೀನಾಮೆ ನೀಡಬಹುದಿತ್ತಲ್ಲವೆ? ಹಾಗೆ ನೋಡಿದರೆ ಡಿವೈಎಸ್ಪಿ ಅನುಪಮಾ ಶಣೈ ಧೈರ್ಯಸ್ಥೆ, ರಾಜೀನಾಮೆ ನೀಡಿದರು.

✶ ✶ ✶

ಸರಕಾರ ನ್ಯಾಯಾಂಗ ತನಿಖೆಗೆ ಆದೇಶ ನೀಡಿದೆ. ಅದು ಸಮಂಜಸವೂ ಕೂಡ. ಪ್ರತಿಪಕ್ಷಗಳು, ಅದರಲ್ಲೂ ಭಾಜಪ ಸಿಬಿಐ ತನಿಖೆಗೆ ಪಟ್ಟುಹಿಡಿದಿದೆ. ಪ್ರಾಯಶಃ ಕೇಂದ್ರದಲ್ಲಿ ಭಾಜಪ ಸರಕಾರ ಇರುವುದರಿಂದ ಡಿ. ಕೆ. ರವಿ ವಿಚಾರ ಸಿಬಿಐಗೆ ಒಪ್ಪಿಸಿ ಏನಾಗಿದೆ? ಪಟ್ಟುಬಿಟ್ಟು ಪ್ರತಿಪಕ್ಷಗಳು ವಿಧಾನ ಮಂಡಲದ ಕಲಾಪಗಳ ಕಡೆಗೆ ಗಮನ ಕೊಡುವುದು ಒಳಿತು.

✶ ✶ ✶

ಕೇಂದ್ರದ ಅರ್ಥಮಂತ್ರಿ ಶ್ರೀ. ಅರುಣ ಜೇಟ್ಲಿ ಬೀದಿಬದಿಯ ಚತುರ ಹಾವಾಡಿಗನ ರೂಪದಲ್ಲಿ ಆಗಾಗ್ಗೆ ಕಾಣಿಸಿಕೊಳ್ಳುತ್ತಾರೆ. ಹಾವಾಡಿಗನು ಹಾವು ಮತ್ತು ಮುಂಗಸಿ ನಡುವೆ ಕಾಳಗ ನಡೆಸುವುದಾಗಿ ಆರಂಭದಿಂದಲೂ ಹೇಳುತ್ತಿರುತ್ತಾನೆ. ಅಸಾಧ್ಯವಾದ ಈ ಪ್ರಸಂಗವನ್ನು ನೋಡಲು ಗುಂಪುಕಟ್ಟಿ ನಿಂತ ಜನ ಕಾತುರದಿಂದ ಕಾಯುತ್ತಿರುತ್ತಾರೆ. ಬೇರೆಷ್ಟೋ ಮಾತುಗಳನ್ನು ಆಡುವಾಗೆಲ್ಲ ಮಧ್ಯಮಧ್ಯೆ ಈ ಪ್ರಸಂಗವನ್ನು ನೆನಪಿಸುತ್ತಾ ಕುತೂಹಲವನ್ನು ಕೆರಳಿಸುತ್ತಿರುತ್ತಾನೆ. ಕೊನೆಗೆ ಹಾವನ್ನು ಬುಟ್ಟಿಯಲ್ಲಿ ಹಾಕಿಕೊಂಡು ಹೊರಟು ನಿಂತಾಗ ಜನ ಮೂಕರಾಗಿಬಿಡುತ್ತಾರೆ. ಹಾವು–ಮುಂಗಸಿ ಆಟ ಪ್ರದರ್ಶಿಸಲಿಲ್ಲವೆಂದು ಯಾರಾದರೂ ಆಕ್ಷೇಪವೆತ್ತಿದರೆ ಮುಸಿನಗುತ್ತಾ ಅವನೆನ್ನುತ್ತಾನೆ: "ಅಲ್ಲಾ ಸ್ವಾಮಿ, ಅದನ್ನು ಮಾಡಿದರೆ ಬೇರೊಂದು ಬೀದಿಯಲ್ಲಿ ಏನು ಆಟ ತೋರಿಸಲಿ?" ಹಾವು ಅವನ ಅತಿಮೌಲ್ಯದ ಬಂಡವಾಳ; ಮುಂಗಸಿ ಅದನ್ನು ಕೊಂದುಹಾಕಿದರೆ ಉದ್ಯೋಗದ ಮುಂದುವರಿಕೆ ಸಾಧ್ಯವಾಗುವುದಿಲ್ಲ. ನಮ್ಮ ದೇಶದ ಕಪ್ಪುಹಣವು ವಿದೇಶಗಳಲ್ಲಿ ಹಲವು ರೂಪಗಳಲ್ಲಿ ಮುಖ ಮರೆಸಿಕೊಂಡು ಹಾಯಾಗಿರುತ್ತದೆ, ಕೆಲವೊಮ್ಮೆ ಲಾಭ ಗಳಿಸುತ್ತಲೂ ಇರಬಹುದು. ಅದನ್ನು ವಾಪಸ್ಸು ತಂದು ದೇಶದ ನಾಗರಿಕರಿಗೆಲ್ಲಾ ಇಂತಿಷ್ಟು ಲಕ್ಷಗಳನ್ನು ಹಂಚುವುದಾಗಿ ಹೇಳುತ್ತಲೇ ಪ್ರಧಾನಿಯಾಗುವ ಚಮತ್ಕಾರ ತೋರಿದವರು ಮಾನ್ಯ ಮೋದಿಯವರು. ನಮಗಂತೂ ಈವರೆಗೆ ಆ ಲಕ್ಷದ ಭಾಗ್ಯ ಇನ್ನೂ ದೊರೆತಿಲ್ಲ. ಮೊನ್ನೆಮೊನ್ನೆ ಜೇಟ್ಲಿಯವರು ನಮ್ಮ ಉತ್ಸುಕತೆಗೆ ನೀರೆರೆಯುವಂತೆ ಹೇಳಿದರು: "ಕಳೆದ ವರ್ಷಕ್ಕಿಂತಲೂ ಕನಿಷ್ಠ ಶೇ. ೧೫ರಷ್ಟು ಕಡಿಮೆ ಕಪ್ಪುಹಣವು ವಿದೇಶಗಳಿಗೆ ಹೋಗಿದೆ. ಅಂದರೆ, ಆ ಹಣವು ಇಲ್ಲೇ ಹೂಡಿಕೆಯಾಗುತ್ತಿದೆ. ಆರ್ಥಿಕತೆಯ ದೃಷ್ಟಿಯಿಂದ ಇದು ಸ್ವಾಗತಾರ್ಹವಾದ ಬೆಳವಣಿಗೆಯಾಗಿದೆ." ಕಳೆದ ವರ್ಷ ಎಷ್ಟು ಕಪ್ಪು ಹಣ ವಿದೇಶಗಳಿಗೆ ಧಾವಿಸಿತೆಂದು ತಿಳಿದಿದ್ದು ಹೇಗೆ? ಅದು ತಿಳಿದಿದ್ದರೆ ಆ ಹಣವನ್ನು ರವಾನಿಸಿದವರು ಯಾರೆಂದು ಸಹ ತಿಳಿದಿರಬೇಕಲ್ಲವೆ? ಎಲ್ಲಿಗೆ ರವಾನಿಸಲಾಗಿದೆಯೆಂದು ತಿಳಿಯಲು ಈ ಮಾಹಿತಿ ಸಾಕು. ಸ್ವಿಟ್ಜರ್ಲೆಂಡ್, ಸಿಂಗಪುರ, ಸಿಶಿಲೆಸ್ ಮುಂತಾದ ದ್ವೀಪಗಳು, ನಮ್ಮ ಕಪ್ಪುಹಣದ ಬಗೆಗಿನ ಮಾಹಿತಿ ನೀಡಿ ಅದರ ಹಿಂದಿರುವಿಕೆಗೆ ಸಹಕಾರ ನೀಡಲು ಒಪ್ಪಿವೆಯೆಂದು ಸದರಿ ಸಚಿವರು ಹೇಳಿದ್ದ ನೆನಪು ನಮ್ಮಲ್ಲಿನ್ನೂ ಹಸಿರಾಗಿಯೇ ಉಳಿದಿದೆ. ನೆನಪಿನಂಗಳಕ್ಕೆ ಮಾನ್ಯ ಸಚಿವ ಜೇಟ್ಲಿಯವರ ಇನ್ನೊಂದು ಭರವಸೆಯ ಹೇಳಿಕೆಯನ್ನು ಬಿಟ್ಟುಕೊಳ್ಳಲು ಅಡ್ಡಿಯಿಲ್ಲ. ಹೀಗೆಯೇ ಮುಂದುವರಿದರೆ ನೆನಪು ಕಹಿಯಾಗುವುದು ನಿಶ್ಚಿತ. ಹಾವು–ಮುಂಗಸಿ ಆಟವನ್ನು ಕಡೆಗೂ ತೋರಿಸದೆಯೇ ಹಾವಾಡಿಗನು ಬೇರೊಂದು ಬೀದಿಗೆ ಹೋಗಿಬಿಡುವಂತೆ ನಮ್ಮ ಸಚಿವರು ನಾಳೆ ಇನ್ನೇನೋ ಹೇಳಿಕೆ ನೀಡಿ ನಮ್ಮನ್ನು ರಂಜಿಸುತ್ತಾರೆ. ಆಗ "ಸುದಿನಗಳು" ನಮ್ಮ ಮುಂದೆ ಕಂಗೊಳಿಸುತ್ತವೆ. "ಮುಂದಿನ ಕತೆಯನ್ನು ಪರದೆಯ ಮೇಲೆ ನೋಡಿ ಆನಂದಿಸಿ" ಎಂದು ಟೂರಿಂಗ್ ಟಾಕೀಸುಗಳು ಸಿನಿಮಾದ ಜಾಹೀರಾತು ಪತ್ರಗಳನ್ನು ಹಂಚುತ್ತಿದ್ದುದು ಮನಸ್ಸಿಗೆ ಬಂತೆ?

✶ ✶ ✶

ಹಲವು ಸ್ಟೇಟ್ ಬ್ಯಾಂಕುಗಳನ್ನು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದಲ್ಲಿ ವಿಲೀನಗೊಳಿಸುವುದರಿಂದ "ಅಭಿವೃದ್ಧಿ"ಗಾಗಿ ಬಂಡವಾಳ ಹೂಡುವುದು ಸುಗಮವಾಗುತ್ತದೆಂಬ ಪೊಳ್ಳುಮಾತು ಈಗಾಗಲೆ ಒಂದು ವರ್ಷದಿಂದ ಕೇಳಿಬರುತ್ತಿದೆ. ಅದಾನಿಯನ್ನು ತಮ್ಮ ಜೊತೆ ಆಸ್ಟ್ರೇಲಿಯಾಕ್ಕೆ ಕರೆದುಕೊಂಡು ಹೋಗಿ ಅಲ್ಲೇ ಸಹಸ್ರಾರು ಕೋಟಿ ರೂಪಾಯಿಗಳ ಸಾಲವನ್ನು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದಿಂದ ನಮ್ಮ ಪ್ರಧಾನಿ ಕೊಡ ಮಾಡಿಸುವ ಔದಾರ್ಯ ಮೆರೆದಿದ್ದರು. ಇದೊಂದು ರೀತಿಯ "ಸ್ಪಾಟ್ ಫಿಕ್ಸಿಂಗ್" ಎನ್ನಬಹುದು. ಅದಾನಿಯಂತಹ ದೊಡ್ಡ ಕುಳಗಳು ಸಾಲಗಳನ್ನೆಲ್ಲಾ ತೀರಿಸಬೇಕೆಂಬ ನಿಯಮವೇನೂ ಇಲ್ಲ, ನೈತಿಕ ಒತ್ತಾಸೆಯೂ ಇಲ್ಲ. ಸಾಲಗಾರರಿಂದ ವಾಪಸ್ಸಾಗದ ಮೊತ್ತವು ಒಂದು ಲಕ್ಷ ಕೋಟಿಗೂ ಹೆಚ್ಚಾಗಿದೆ. ರೈತನದೋ ಕಮ್ಮಾರನದೋ ಸಾಲ ಬಾಕಿಯಿದ್ದರೆ ಬ್ಯಾಂಕುಗಳ ಜಪ್ತಿ ಮಾಡಿ ಹಣ ವಸೂಲು ಮಾಡುತ್ತವೆ. ಅವರನ್ನು ಬೀದಿಗೆ ತಳ್ಳಿದಂತೆ ಅದಾನಿಯಂಥವರನ್ನು ತಳ್ಳುವುದು ಮಹಾಪಾಪ. ಆದ್ದರಿಂದ ಸಾಲವನ್ನು ಹಿಂಪಡೆಯಲು ಒಂದು ಹೊಸ ಕ್ರಮವನ್ನು ಅನುಸರಿಸಲಾಗುತ್ತದಂತೆ. ಆ ಯೋಜನೆಯ ಜನಕನೂ ಅರುಣ್ ಜೇಟ್ಲಿಯವರೇ ಇರಬಹುದು. ಏನಿದು ಯೋಜನೆ? ಅದನ್ನು ಕಾರ್ಯಗತಗೊಳಿಸಲು ಎಷ್ಟು ಕೋಟಿ ಖರ್ಚಾಗುತ್ತದೆ, ಅದನ್ನು ಯಾರು ಭರಿಸುತ್ತಾರೆ ಎಂಬುದು ತಿಳಿದುಬಂದಿಲ್ಲ. ಯೋಜನೆ ಹೀಗಿದೆ: ನಮ್ಮ ದೇಶದಲ್ಲಿ ಸೆಂಟ್ರಲ್ ವಿಜಿಲೆನ್ಸ್ ಕಮಿಷನರ್ ಎಂಬುವರೊಬ್ಬರು ನೇಮಿಸಲ್ಪಟ್ಟಿರುತ್ತಾರೆ. ಹಾಗೆ ನೇಮಕಗೊಳ್ಳುವವರು ಸರ್ವೋಚ್ಚ ನ್ಯಾಯಾಧೀಶರಿಗೆ ಸಮಾನವಾದ ಸ್ಥಾನವನ್ನು ಪಡೆದಿರುತ್ತಾರೆ. ಅವರನ್ನು ಲಘುವಾಗಿ (ಇದಕ್ಕೆ ಎರಡು ಅರ್ಥಗಳುಂಟು!) "ಸಿವಿಸಿ" ಎನ್ನುತ್ತಾರೆ. ಈಗಿನ ಸಿವಿಸಿ ಪ್ರದೀಪ್ ಕುಮಾರ್ ಬ್ಯಾಂಕುಗಳಿಗೆ ನೇಣಾಗಿರುವ "ತೀರಿಲ್ಲದ ಸಾಲ"ಗಳನ್ನು "ಬಗೆಹರಿಸಲು ಸಹಾಯ ಮಾಡಲು" (ಟು ಹೆಲ್ಪ್ ಬ್ಯಾಂಕ್ಸ್ ಟು ಸೆಟಲ್) ನೇಮಿಸಲ್ಪಟ್ಟಿದ್ದಾರೆ. ಎಲ್ಲಾ ಸಾಲಗಳನ್ನೂ ಮರುಪಾವತಿಸಲು ಸಾಲಗಾರರನ್ನು ಅವರು ಒತ್ತಾಯಿಸಬೇಕೆಂಬ ನಿರೀಕ್ಷೆ ಇದ್ದಂತೆ ತೋರುವುದಿಲ್ಲ. ಚೌಕಾಶಿ ಮಾಡಿ ಹೇಗೋ "ಸಾಲವನ್ನು ಬಗೆಹರಿಸುವುದು" ಅವರ ಕೆಲಸ. ಎಷ್ಟು ಕೋಟಿ ಮೊತ್ತವನ್ನು ಮುಫತ್ತಾಗಿ ಬಿಟ್ಟುಕೊಡಬೇಕು, ಎಷ್ಟು ಬಡ್ಡಿಯನ್ನು ಮನ್ನಾ ಮಾಡಬೇಕು, ಎಂಬುದನ್ನೆಲ್ಲಾ "ಬಗೆಹರಿಸುವಿಕೆ" ಎನ್ನುತ್ತಾರೆ. ಇದು ಸಾಲಗಾರರಿಗೆ ಗೌರವ ತೋರಲು ಬಳಸುವ ಪರಿಭಾಷೆ. ರೈತ–ಕಮ್ಮಾರರನ್ನಾದರೆ "ಸಾಲ ಹಿಂದಿರುಗಿಸು, ಇಲ್ಲದಿದ್ದರೆ ಒದೆಯುತ್ತೇನೆ" ಎನ್ನಬಹುದು. ಮಹಾಮಹಿಮ ಬಂಡವಳಿಗರನ್ನು ಮರ್ಯಾದೆಯಿಂದ ಕಾಣಬೇಕು, ದಯವಿಟ್ಟು ಸಾಲದ ಸ್ವಲ್ಪ ಭಾಗವನ್ನು ಹಿಂದಿರುಗಿಸಿ ಎಂದು ಅವರ ಮುಂದೆ ಭಿಕ್ಷಾಪಾತ್ರೆ ಹಿಡಿಯಬೇಕು. ಇದು ಮುಕ್ತ ಆರ್ಥಿಕತೆಯ ಅನಿವಾರ್ಯ ಷರತ್ತು. ಈಗ ಅರ್ಥವಾಯಿತಲ್ಲ, "ಕಾನೂನಿನಡಿ ಎಲ್ಲರೂ ಸಮಾನರು" ಎಂಬುದರ ನಿಜಾರ್ಥ! ಬ್ಯಾಂಕುಗಳಿಗೆ ಬಾಕಿಯಿರುವ ಅಷ್ಟೂ ಮೊತ್ತವನ್ನು ಬಡ್ಡಿ ಸಮೇತ ಸಾಲಗಾರರಿಂದ ಪೀಕಿಸಿದರೆ ಮಾನ್ಯ ಪ್ರದೀಪ ಕುಮಾರ್ ಅವರಿಗೆ "ಪ್ರತಾಪ ಕುಮಾರ್" ಎಂಬ ಬಿರುದನ್ನು ವಿನಯದಿಂದ ನೀಡಿ ಕೃತಾರ್ಥರಾಗೋಣ.

✶ ✶ ✶

ಪ್ರಪಂಚಕ್ಕೆಲ್ಲಾ ನ್ಯಾಯ ದೊರಕಿಸಲು "ಅಂತರರಾಷ್ಟ್ರೀಯ ನ್ಯಾಯಾಲಯ"ವೊಂದಿದೆ. ಅದು ಹಾಲೆಂಡಿನಲ್ಲಿರುವ ದ ಹೇಗ್ ಎಂಬ ನಗರದಲ್ಲಿ ಪೀಠಸ್ಥವಾಗಿದೆ. ಆಫ್ರಿಕಾದ ಯಾವನೋ ರಾಜಕೀಯ ನಾಯಕ ಅದೆಷ್ಟೋ ಮಂದಿಯನ್ನು ಕೊಂದಿದ್ದರೆ ಅವನನ್ನು ಹಿಡಿದು ಶಿಕ್ಷಿಸುವ ಹಕ್ಕು ಈ ನ್ಯಾಯಾಲಯಕ್ಕಿದೆ. ಬೋಸ್ನಿಯಾ–ಸರ್ಬಿಯಾದಂತಹ ಪೂರ್ವ ಯೂರೋಪಿನ ದೇಶಗಳಿಗೂ ಇದನ್ನು ಅನ್ವಯಿಸಿರುವುದು ಇತಿಹಾಸ. ಅಮೆರಿಕಾದಂತಹ "ಬಲಿಷ್ಠ ಪ್ರಜಾಪ್ರಭುತ್ವಗಳು" ಈ ನ್ಯಾಯಾಲಯದ ಪರಿಧಿಗೆ ಸೇರುವುದಿಲ್ಲ, ಏಕೆಂದರೆ ಅವು ವಿಶ್ವಸಂಸ್ಥೆಯ ಸಂಬಂಧಪಟ್ಟ ದಸ್ತಾವೇಜಿಗೆ ಸಹಿ ಹಾಕುವುದಿಲ್ಲ. ಆದರೆ ದೂರು ಕೊಡಲು ಅವಕ್ಕೆ ಅಡ್ಡಿಯಿಲ್ಲ. ಬೇಕಾದಾಗ ಬೇರೆ ದೇಶಗಳಿಂದಲೋ ವ್ಯಕ್ತಿಗಳಿಂದಲೋ ದೂರು ಕೊಡಿಸುವ ಶಕ್ತಿ ಅವಕ್ಕಿವೆ. ಸದ್ದಾಂ ಹುಸೇನ್ ಸೇರಿದಂತೆ ಇರಾಕಿನ ಹದಿನಾರು ಲಕ್ಷ (ಹೌದು, ಹದಿನಾರು ಲಕ್ಷ) ನಾಗರಿಕರನ್ನು ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್ ಮತ್ತು ಬ್ರಿಟನ್ನಿನ ಪ್ರಧಾನಿ ಟೋನಿ ಬ್ಲೇರ್ ಕೊಂದಿದ್ದಾರೆ. ಬ್ರಿಟನ್ನಿನ ಒಂದು ಆಯೋಗವು ಇತ್ತೀಚೆಗೆ ಅದನ್ನು ದೃಢಪಡಿಸಿದೆ ಮತ್ತು ಬ್ಲೇರ್ ಬ್ರಿಟನ್ನಿನ ಕಾನೂನನ್ನು ಸರ್ವಥಾ ಉಲ್ಲಂಘಿಸಿದ್ದಾನೆ ಎಂದು ಹೇಳಿದೆ. ಅಮೆರಿಕಾ ಏನೇ ಮಾಡಿದರೂ ("ವಾಟೆವರ್") ಅದಕ್ಕೆ ತನ್ನ ಬೆಂಬಲ ಖಚಿತವೆಂದು ಬ್ರಿಟನ್ನಿನ ಸಂಸತ್ತನ್ನು ಕೇಳದೆಯೇ ಬ್ರಿಟನ್ನಿನ ಪರವಾಗಿ ಬ್ಲೇರ್ ಬುಷ್‌ಗೆ ಹೇಳಿದ್ದ. ಇದು ಅನುಚಿತವಾದ ಅಕ್ಷಮ್ಯ ಅಪರಾಧ. ಸದ್ದಾಂ ಇರಾಕಿನಲ್ಲಿ ಮಹತ್ತರ ನಾಶ ಉಂಟುಮಾಡಬಹುದಾದ ಶಸ್ತ್ರಾಸ್ತ್ರ ಸಂಗ್ರಹಿಸಿದ್ದಾನಾದ್ದರಿಂದ

ಆಕ್ರಮಣ ಅನಿವಾರ್ಯವೆಂದು ಹೇಳಲಾಯಿತು. ಅಲ್ಲಿ ಶೇಖರಗೊಂಡಿದ್ದುದು ಇಲಿ ಪ್ರಮಾಣದ ಆಯುಧಗಳು. ಇರಾಕಿನ ಸಂಪತ್ತು ಲೂಟಿಮಾಡುವುದು, ಪಶ್ಚಿಮ ಏಷ್ಯಾದಲ್ಲಿ ದೊಡ್ಡಸ್ತಿಕೆ ಬೆಳೆಸಿಕೊಳ್ಳುವುದು ಮೂಲ ಉದ್ದೇಶವಾಗಿತ್ತು. ಅದರ ಪರಿಣಾಮ ಇಂದಿನ ಬಾಧೆ, "ಇಸ್ಲಾಮಿಕ್ ಸ್ಟೇಟ್ ಆಫ್ ಇರಾಕ್ ಅಂಡ್ ಸಿರಿಯಾ"ದ ಉಗಮ. ಅಂತರರಾಷ್ಟ್ರೀಯ ನ್ಯಾಯಾಲಯವು ಬುಷ್ ಮತ್ತು ಬ್ಲೇರ್‌ರ ವಿಚಾರಣೆ ನಡೆಸಿ ಆಜೀವ ಕಾರಾಗೃಹವಾಸ ವಿಧಿಸಿದರೆ ಸ್ವಲ್ಪ ನ್ಯಾಯ ದೊರೆತಂತೆ, ಅಷ್ಟೆ. ಕೊಲ್ಲಲ್ಪಟ್ಟ ೧೬ ಲಕ್ಷ ಇರಾಕ್ ಪ್ರಜೆಗಳು, ಧ್ವಂಸಗೊಂಡ ೫೦೦೦ ವರ್ಷಗಳ ಹಿಂದಿನ ಸಾಂಸ್ಕೃತಿಕ ಚಿಹ್ನೆಗಳು ಮತ್ತೆ ಹಿಂದಿರುಗಿ ಬರಲಾಗುವುದಿಲ್ಲ. "ಮಾನವ ಹಕ್ಕುಗಳ ರಕ್ಷಣೆ"ಗಾಗಿ ಅಮೇರಿಕಾ ಲಕ್ಷಗಟ್ಟಲೆ ಜನರನ್ನು ಕೊಲ್ಲುತ್ತದೆ, ಆದರೆ ಇದೆಂತಹ ರಕ್ಷಣೆಯೆಂದು ವಿಶ್ವಸಂಸ್ಥೆಯ ಭದ್ರತಾ ಸಮಿತಿಯು ವಿಚಾರ ಮಾಡುವುದಿಲ್ಲ. ಅದು ಅಮೇರಿಕಾದ ದುಷ್ಟ ಪ್ರಾಬಲ್ಯ. ಹಿಂದೆ ಆರ್ಮಿಟೇಜ್ ಎಂಬೊಬ್ಬ ವಿದೇಶಾಂಗ ಉಪಸಚಿವನಿದ್ದ ಅಮೇರಿಕಾದಲ್ಲಿ. ಅವನು ಪಾಕಿಸ್ತಾನದ ಅಧ್ಯಕ್ಷ ಮುಷಾರಫ್‌ಗೆ ಬೆದರಿಕೆಯೊಡ್ಡಿದ್ದ: "ನಾವು ಹೇಳಿದಂತೆ ಮಾಡದಿದ್ದರೆ ನಿನ್ನ ದೇಶವು ಶಿಲಾಯುಗಕ್ಕೆ ಹಿಂದಿರುಗುವಂತೆ ಮಾಡುವಷ್ಟು ಬಾಂಬುಗಳನ್ನು ನಿಮ್ಮ ದೇಶದ ಮೇಲೆ ಹಾಕುತ್ತೇವೆ." ಜೈ ಪ್ರಜಾಪ್ರಭುತ್ವ, ಜೈ ಮಾನವ ಹಕ್ಕು!!




✶ ✶ ✶

ಕಾಶ್ಮೀರದಲ್ಲಿ ಅಶಾಂತಿಯ ವಾತಾವರಣ ಸೃಷ್ಟಿಯಾಗಿರುವುದರಿಂದ ಕೇಂದ್ರ ಗೃಹಸಚಿವ ಶ್ರೀ. ರಾಜನಾಥ ಸಿಂಗ್ ಅಮೇರಿಕಾ ಪ್ರವಾಸವನ್ನು ಮುಂದೂಡಿದ್ದಾರೆ. ಗೃಹಮಂತ್ರಿಗೆ ವಿದೇಶಗಳಲ್ಲಿ ಏನು ಚರ್ಚಾವಿಷಯಗಳಿರುತ್ತವೋ ಸರಿಯಾಗಿ ತಿಳಿಯುವುದಿಲ್ಲ. ಪ್ರಧಾನಿಯೇ ವಿದೇಶಾಂಗ ವ್ಯವಹಾರಗಳನ್ನು ನೋಡಿಕೊಳ್ಳುತ್ತಾರಾದ್ದರಿಂದ ವಿದೇಶಾಂಗ ಸಚಿವೆ ಶ್ರೀಮತಿ. ಸುಷ್ಮಾ ಸ್ವರಾಜ್ ಅವರಿಗೆ ಕೆಲಸದ ಹೊರೆ ಹಗುರಾಗಿದೆ. ಹೀಗಿರುವಾಗ ಗೃಹಮಂತ್ರಿಗೆ ವಾಷಿಂಗ್‌ಟನ್‌ನಲ್ಲಿ ಏನು ವಿಶೇಷ ಕೆಲಸ ಇದ್ದೀತು? ಹಿಂದೆ ಶ್ರೀ. ಲಾಲಕೃಷ್ಣ ಅಡ್ವಾನಿಯವರು ಅಮೇರಿಕಾಕ್ಕೆ ಹೋಗಿದ್ದಾಗ ಸಿಐಎ ಮತ್ತು ಎಫ್‌ಬಿಐ ಕಚೇರಿಗಳಿಗೆ ಹೋಗಿದ್ದರು. ಲ್ಯಾಂಗ್ಲೆಗೆ ಸಾಮಾನ್ಯವಾಗಿ ಬೇರೆ ದೇಶಗಳವರು ಹೋಗುವುದಿಲ್ಲ, ಆದರೆ ಅಡ್ವಾನಿಯವರು ಹೋಗಿದ್ದರು. ಕೆಲವು ಫೈಲ್‌ಗಳನ್ನು ನೋಡಲು ಅವರಿಗೆ ಅವಕಾಶ ಕಲ್ಪಿಸಿಕೊಟ್ಟಿದ್ದರಂತೆ. ಅಮೇರಿಕಾದ ಪೊಲೀಸ್, ಜೈಲು, ಶಿಕ್ಷಾ ವಿಧಾನ ಮುಂತಾದವನ್ನು ನೋಡಿಕೊಂಡು ಬಂದು ಸಿಂಗ್ ಅವರು ಭಾರತದಲ್ಲಿ ಅದರ ಪ್ರತಿರೂಪ ಹುಟ್ಟುಹಾಕುತ್ತಾರೆಂಬುದು ಒಂದು ಆತಂಕ. ಅಮೇರಿಕಾ ಹೇಳಿಕೊಳ್ಳುವುದು ತನ್ನದು ಮುಕ್ತ ಸ್ವಾತಂತ್ರ್ಯವಿರುವ ದೇಶವೆಂದು. ಯಾವ ಸ್ವಾತಂತ್ರ್ಯವನ್ನೂ ಚಲಾಯಿಸಹೋಗದಿದ್ದರೆ ನಾಗರಿಕರಿಗೆ ಅದು ಮುಕ್ತ; ಕಿಂಚಿತ್ತೇನಾದರೂ ಕ್ರಿಯಾಸ್ವರೂಪದ ವಿರೋಧ ಅಥವಾ ಪ್ರತಿಭಟನೆ ವ್ಯಕ್ತಪಡಿಸಿದರೆ ಅತಿಹೆಚ್ಚಿನ ಉಪಟಳಕ್ಕೆ ಸಿಲುಕಿಕೊಳ್ಳುವುದು ಖಚಿತ. ಅಮೇರಿಕಾಕ್ಕೆ ಇನ್ನೊಂದು ಹೆಸರು "ಕಾರಾಗೃಹ ದೇಶ" (ಕಾರ್ಸೆರಲ್ ಸ್ಟೇಟ್) ಎಂದು. ಒಂದು ಕ್ಷುಲ್ಲಕ ಘಟನೆಯಾದರೂ ಸಾಕು, ಜೈಲು ತೆರೆದುಕೊಳ್ಳುತ್ತದೆ. "ಕಾರಾಗೃಹಗಳ ಪ್ಲೇಗ್" ಇರುವ ದೇಶ ಅದೆಂದು ಕೆಲವು ವಿದ್ವಾಂಸರು ಹೇಳುತ್ತಾರೆ. ಸದ್ಯದಲ್ಲಿ ೨೨ ಲಕ್ಷಕ್ಕೂ ಹೆಚ್ಚು ಮಂದಿ ಜೈಲುಗಳಲ್ಲಿದ್ದಾರೆ. ಅಂದರೆ, ಐದರಲ್ಲಿ ಒಬ್ಬ ಜೈಲಿನಲ್ಲಿ! ಇನ್ನೊಂದು ವಿಶೇಷವಿದೆ: ೧೮ಕ್ಕೂ ಕಡಿಮೆ ವಯಸ್ಸಿನ ಮಕ್ಕಳನ್ನು ವಯಸ್ಕರೆಂದು ಪರಿಗಣಿಸಿ ಶಿಕ್ಷೆ ವಿಧಿಸುವುದು ಅಲ್ಲಿಯ ಪದ್ಧತಿ. ಮಾನವ ಹಕ್ಕು ಪ್ರತಿಪಾದಕರು ಇದನ್ನು ತೀವ್ರವಾಗಿ ಟೀಕಿಸಿದ್ದಾರೆ, ಆದರೆ ೧೦ ವರ್ಷದ ಹುಡುಗನನ್ನೂ ಯುವಕನೆಂದು ಜೈಲಿಗೆ ತಳ್ಳುತ್ತಾರೆ. ಅದೂ ೨೦-೩೦ ವರ್ಷಗಳ ದೀರ್ಘಾವಧಿಗೆ. ಅವರಿಗೆ ಪೆರೋಲ್ ಎಂಬುದೂ ಇಲ್ಲ. ಅಮೇರಿಕಾದ ನ್ಯಾಯಪದ್ಧತಿಯಲ್ಲಿ ಏಕಾಂತ ಜೈಲುವಾಸ ಬಹಳ ಹೆಚ್ಚಿನ ಪ್ರಮಾಣದಲ್ಲಿದೆ. ಅದರ ಪರಿಣಾಮವಾಗಿ ಹಾಗೆ ಶಿಕ್ಷೆಗೊಳಗಾದವರು ಮಾನಸಿಕ ರೋಗಿಗಳಾಗಿ ಹೊರಬರುತ್ತಾರೆ. ಬಲವಾದ ಭದ್ರತೆ ಇರುವ ಜೈಲುಗಳನ್ನು 'ಸೂಪರ್‌ಮ್ಯಾಕ್ಸ್' ಎನ್ನುತ್ತಾರೆ, ಅಲ್ಲಿ "ಪಟಿಂಗ" ಅಪರಾಧಿಗಳನ್ನಿರಿಸುತ್ತಾರೆ. ಅಂಥವರಿಗೆ ದಿನಕ್ಕೆ ಒಂದು ಗಂಟೆ ಮಾತ್ರ ಸೆಲ್‌ನಿಂದ ಹೊರಬರಲು ಅವಕಾಶವುಂಟು. ಅಪರಾಧಿಗಳು ಜನಾಂಗೀಯ ತಾರತಮ್ಯಕ್ಕೆ ಸಿಲುಕುವುದು ತೀರಾ ಸಾಮಾನ್ಯ. ಕೈದಿಗಳಲ್ಲಿ ಶೇ. ೧೯ ಲ್ಯಾಟಿನೋಗಳು (ಅಂದರೆ, ಮೆಕ್ಸಿಕೋ ಮುಂತಾದ ದೇಶಗಳಿಂದ ವಲಸೆ ಬಂದು ಪ್ರಜೆಗಳಾಗಿರುವವರು) ಇದ್ದಾರೆ. ಜನಸಂಖ್ಯೆಯಲ್ಲಿ ಅವರು ಶೇ. ೧೬ ಮಾತ್ರ. ಆಫ್ರಿಕನ್-ಅಮೇರಿಕನ್ ಎಂಬ ಕರಿಯರು ಜನಸಂಖ್ಯೆಯ ಶೇ. ೧೩ ಮಾತ್ರ. ಅವರಲ್ಲಿ ಶೇ. ೪೦ರಷ್ಟು ಮಂದಿ ಜೈಲುಗಳಲ್ಲಿದ್ದಾರೆ. ಕಕೇಶಿಯಾದವರು ಜನಸಂಖ್ಯೆಯ ಶೇ. ೬೪. ಅವರಲ್ಲಿ ಶೇ. ೩೯ ಜೈಲುಗಳಲ್ಲಿದ್ದಾರೆ. ಇವರೆಲ್ಲಾ ಅವಿದ್ಯಾವಂತರು, ಬಡವರು, ಬಹಳ ತೊಂದರೆಗಳ ಹಿನ್ನೆಲೆಯಿಂದ ಬಂದವರು. ಅವರು ಹಿಂಸಾಕಾರ್ಯವೆಸಗಿದವರಲ್ಲ, ಬಹುಮಟ್ಟಿಗೆ ಮಾದಕದ್ರವ್ಯಗಳ ಸಂಬಂಧದಲ್ಲಿ ಅಪರಾಧ ವೆಸಗಿದವರು. ಅಮೇರಿಕಾದ ನ್ಯಾಯಾಂಗ ವ್ಯವಸ್ಥೆ ಬಹಳ ದೊಡ್ಡಮಟ್ಟದ್ದು: ಅಷ್ಟೊಂದು ನ್ಯಾಯಾಲಯಗಳು, ವಕೀಲರು. ಆದರೆ ಅದು ಜನರ ಕೈಗೆಟುಕುವುದಿಲ್ಲ. ಕೇವಲ ಶೇ. ೨ರಷ್ಟು ಮೊಕದ್ದಮೆಗಳು ವಿಚಾರಣೆಯ ಹಂತ ತಲುಪುತ್ತವೆ. ಅಂದರೆ, ಶೇ. ೯೮ರಷ್ಟು ಆಪಾದಿತರಿಗೆ ವಕೀಲರನ್ನು ಹೊಂದುವ ಚೈತನ್ಯವಿಲ್ಲ; ಕೋರ್ಟ್ ಶುಲ್ಕ ಸಹ ಭರಿಸಲಾರರು. ಆದ್ದರಿಂದ ಜೈಲುಗಳಲ್ಲಿ ಕೊಳೆಯುತ್ತಾರೆ, ಇಲ್ಲವೆ ತಪ್ಪೆಸಗಿಲ್ಲದಿದ್ದರೂ ತಪ್ಪೊಪ್ಪಿಗೆ ಕೊಟ್ಟು ಕಡಿಮೆ ಶಿಕ್ಷೆಯ ಆಯ್ಕೆ ಮಾಡಿಕೊಳ್ಳುತ್ತಾರೆ. ಅಮೇರಿಕಾದಲ್ಲಿ ನೈಜ ನ್ಯಾಯವು ಒಂದು ಕ್ರೂರ ಪ್ರಹಸನವೆನಿಸಿರುವುದು ಇದರಿಂದ. ಒಮ್ಮೆ ಜೈಲಿಂದ ಹೊರಬಂದವರಿಗೆ 'ಅಪರಾಧದ ದಾಖಲೆ' ಆಜೀವಪರ್ಯಂತ ಅಂಟಿಕೊಂಡಿರುತ್ತದೆ. ಒಟ್ಟು ೩೧ ಕೋಟಿ ಪ್ರಜೆಗಳ ಪೈಕಿ ಆರೂವರೆ ಕೋಟಿಗೆ ಈ ದಾಖಲೆಯಿದೆ! ಅಂಥವರಿಗೆ ಕೇಂದ್ರ ಸರ್ಕಾರದ ಸೌಲಭ್ಯಗಳು ದೊರಕುವುದಿಲ್ಲ; ವಿದ್ಯಾರ್ಥಿಗಳಿಗೆ ಸಾಲ, ಸಬ್ಸಿಡಿ ಇರುವ ಮನೆ, ಸಮಾಜ ಕಲ್ಯಾಣ ಸೌಲಭ್ಯ, ಯಾವುದೂ ಇಲ್ಲ. ನೌಕರಿಯಂತೂ ದೂರದ ಕನಸು. ಅವರಿಗೆ ಪಾಸ್‌ಪೋರ್ಟ್ ಸಹ ನೀಡುವುದಿಲ್ಲ, ಕೆಲವು ರಾಜ್ಯಗಳಲ್ಲಿ ಮತದಾನದ ಹಕ್ಕೂ ಇಲ್ಲ. ಜೈಲಿನಲ್ಲಿ ಅಪರಾಧಿಯ ಸುಧಾರಣೆ ಎಳ್ಳಷ್ಟೂ ಆಗದು. ಜೈಲುಗಳ ಖಾಸಗೀಕರಣ ಅದಕ್ಕೊಂದು ಕಾರಣ. ಅವು ಲಾಭ ದೊರಕಿಸಿಕೊಡುವ ತಾಣಗಳು. ಇಂತಹ ಕೈದಿಗಳನ್ನು ಭಾರಿ ಉದ್ಯಮಿಗಳು ಅತ್ಯಂತ ಕಡಿಮೆ ಕೂಲಿಕೊಟ್ಟು ದುಡಿಸಿಕೊಳ್ಳುತ್ತಾರೆ. ಅವರು ಕೈದಿಗಳ ಸುಧಾರಣೆ ಮಾಡುತ್ತಾರೆಂಬ ಐತಿಹ್ಯವುಂಟು. ಆದರೆ ವಸ್ತುತಃ ಅದೇನೂ ನಡೆಯುವುದಿಲ್ಲ. ಅವರಿಗೆ ಕನಿಷ್ಠ ಕೂಲಿಯನ್ನೂ ಕೊಡುವುದಿಲ್ಲ. ದಿನಕ್ಕೆ ೫೦ ಸೆಂಟ್ (ಅರ್ಧ ಡಾಲರ್) ಕೊಟ್ಟು ವಿಮಾನ ಕಂಪನಿಯವರು ಕೂಲಿಯಾಳುಗಳನ್ನು ಪಡೆಯುತ್ತಾರೆ. ಅದನ್ನು ಪಾವತಿಸುವುದು ಅಪರಾಧಿಯು ಜೈಲಿನಿಂದ ಮುಕ್ತನಾದಾಗಲೇ! ಜೈಲಿನಿಂದ ಅವನೊಂದು ಫೋನ್ ಮಾಡಬೇಕಾದರೆ ನಿಮಿಷಕ್ಕೆ ಎರಡು ಡಾಲರ್ ಕೊಡಬೇಕು, ಆದರೆ ಅಮೇರಿಕಾದಲ್ಲಿ ಅಂತರರಾಷ್ಟ್ರೀಯ ಕಾಲ್‌ಗಳನ್ನು ಪುಕ್ಕಟೆಯಾಗಿ ಮಾಡಲು ಸಾಧ್ಯ. ಹೃದಯರಹಿತ ಮತ್ತು ತಾರತಮ್ಯಪೂರಿತ ಜೈಲು ವ್ಯವಸ್ಥೆಗೆ ಅಮೇರಿಕಾ ಪ್ರಸಿದ್ಧ. ನಮ್ಮ ಗೃಹಸಚಿವ ರಾಜನಾಥ ಸಿಂಗ್ ಅವರು ಇದೆಲ್ಲದರ ಅಧ್ಯಯನ ಮಾಡಿಬಂದು ನಮ್ಮ ಕಾರಾಗೃಹಗಳನ್ನು ಮತ್ತು ಕೈದಿಗಳನ್ನು ಹಾಗೆ ಹೀನಾಯವಾಗಿ ಮತ್ತು ಮೃಗೀಯವಾಗಿ "ಸುಧಾರಣೆ"ಗೊಳಿಸುತ್ತಾರೇನು? ನಮ್ಮ ದೇಶದ ಜೈಲುಗಳು ಹದಗೆಟ್ಟಿವೆ, ಆದರೆ ಅಮೇರಿಕಾದ ಜೈಲುಗಳ ಹುನ್ನಾರ ನಮ್ಮಲ್ಲಿಲ್ಲ. ಅದನ್ನೀಗ ತಂದು ಹೇರಿಕೊಳ್ಳುವುದು ಬೇಡ.

✶ ✶ ✶




### ✉ ಪ್ರಜಾತಂತ್ರ ವ್ಯವಸ್ಥೆಯಲ್ಲಿ ರಾಜವೈಭವದ ಮೆರವಣಿಗೆಯೇಕೆ ?

ಭಾರತದ ರಾಜಕಾರಣದಲ್ಲಿ ಅತಿ ಹೆಚ್ಚು ಚರ್ಚೆಗೊಳಗಾಗುವ ವಿಚಾರಗಳೆಂದರೆ ಭ್ರಷ್ಟಾಚಾರ ಮತ್ತು ಕುಟುಂಬ ರಾಜಕಾರಣ. ಈ ಎರಡರಲ್ಲಿ ಅನೈತಿಕ ರಾಜಕಾರಣಕ್ಕೆ ಮೂಲ ಯಾವುದು ಎಂಬ ಪ್ರಶ್ನೆ ಉದ್ಭವಿಸಿದಾಗ ಆಯ್ಕೆ ಮಾಡುವುದು ಕಷ್ಟವಾಗುತ್ತದೆ. ಏಕೆಂದರೆ ಎರಡು ವಿದ್ಯಮಾನಗಳೂ ಪರಂಪರಾನುಗತವಾಗಿ ಬಂದಿವೆ. ದೇಶದ ಆಡಳಿತ ವ್ಯವಸ್ಥೆಯಲ್ಲಿ ಬೇರೂರಿವೆ ಮತ್ತು ಪಕ್ಷಾತೀತವಾಗಿ ತನ್ನ ನೆಲೆ ಕಂಡುಕೊಂಡಿವೆ. ಈ ಎರಡೂ ವಿದ್ಯಮಾನಗಳು ದೇಶದ ರಾಜಕೀಯ ವ್ಯವಸ್ಥೆಯನ್ನು ಬುಡಮೇಲು ಮಾಡಿರುವುದೇ ಅಲ್ಲದೆ ಪ್ರಜಾತಂತ್ರ ಮೌಲ್ಯಗಳನ್ನು ನಾಶಪಡಿಸಿವೆ. ಅಷ್ಟೇ ಅಲ್ಲದೆ ಪರಸ್ಪರ ಪೂರಕವೂ ಆಗಿವೆ. ಬಂಡವಾಳ ವ್ಯವಸ್ಥೆಗೆ ಭ್ರಷ್ಟಾಚಾರ ಅಫೀಮಿನಂತೆ ಕಾರ್ಯ ನಿರ್ವಹಿಸುತ್ತದೆ. ಈ ಅಫೀಮನ್ನು ಸೇವಿಸಿ ಅಮಲು ಹೆಚ್ಚಾದ ನಂತರ ಕುಟುಂಬ ರಾಜಕಾರಣ ಅಮಲಿಗೆ ತನ್ನದೇ ಆದ ಚೌಕಟ್ಟು ಒದಗಿಸುತ್ತದೆ. ಭ್ರಷ್ಟತೆಯನ್ನು ತೊಡೆದು ಹಾಕಲು ಪಣತೊಟ್ಟು ನಿಂತಿರುವ ಪ್ರತಿರೋಧದ ಪ್ರಜಾತಂತ್ರದ ದನಿಗಳನ್ನು ಅಡಗಿಸಲು ಕುಟುಂಬ ರಾಜಕಾರಣದ ಪರಂಪರೆ ತನ್ನದೇ ಆದ ವಂಶವಾಹಿನಿಯನ್ನು ಹುಟ್ಟುಹಾಕುತ್ತದೆ. ಊಳಿಗಮಾನ್ಯ ವ್ಯವಸ್ಥೆಯ ಪಳೆಯುಳಿಕೆಗಳನ್ನು ಇಂದಿಗೂ ಉಳಿಸಿಕೊಂಡಿರುವ ಭಾರತೀಯ ಸಮಾಜದಲ್ಲಿ ಕುಟುಂಬ ರಾಜಕಾರಣ ಒಂದು ವೈರಸ್‌ನಂತೆ ಹರಡುತ್ತಿರುವುದು ಪ್ರಜಾತಂತ್ರ ವ್ಯವಸ್ಥೆಗೆ ಮಾರಕವಾಗಿ ಪರಿಣಮಿಸುತ್ತಿದೆ. ಕುಟುಂಬ ರಾಜಕಾರಣವನ್ನು ಕುರಿತು ಪ್ರತಿಯೊಂದು ರಾಜಕೀಯ ಪಕ್ಷವೂ ತನ್ನ ಪ್ರತಿರೋಧ, ಆಕ್ಷೇಪ ವ್ಯಕ್ತಪಡಿಸುತ್ತದೆ. ಆದರೆ ತನ್ನ ಗರ್ಭದಲ್ಲೇ ಹುದುಗಿರುವ ಕುಟುಂಬ ರಾಜಕಾರಣದ ಭ್ರೂಣಗಳನ್ನು ಗುರುತಿಸುವ ಧಾರ್ಷ್ಟ್ಯತೆ ತೋರುವುದಿಲ್ಲ.

ನಾಗರಿಕ ಸಮಾಜದಲ್ಲಿ ಭಾರತದ ರಾಜಕಾರಣವನ್ನು ಕಾಡುತ್ತಿರುವ ಕುಟುಂಬ ರಾಜಕಾರಣದ ಪರಂಪರೆಯ ಬಗ್ಗೆ ತೀವ್ರ ಅಸಮಾಧಾನ ಇರುವುದು ಸತ್ಯ. ಅನೇಕ ಸಂದರ್ಭಗಳಲ್ಲಿ ಕುಟುಂಬ ರಾಜಕಾರಣದ ಒಲವು ಹಲವು ರಾಜಕೀಯ ಪಕ್ಷಗಳಿಗೆ ಮುಳುವಾಗಿರುವುದೂ ಉಂಟು. ಕಾಂಗ್ರೆಸ್ ಪಕ್ಷ ದೇಶದ ರಾಜಕೀಯದಲ್ಲಿ ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಿರುವುದಕ್ಕೆ ಇದೂ ಒಂದು ಕಾರಣ. ಆದರೆ ಕುಟುಂಬ ರಾಜಕಾರಣ ಮತ್ತು ವಂಶ ಪಾರಂಪರ್ಯ ಆಡಳಿತ ಕಾಂಗ್ರೆಸ್ ಪಕ್ಷಕ್ಕೆ ಸೀಮಿತವಾಗಿಲ್ಲ. ಗ್ರಾಮಪಂಚಾಯತ್ ಮಟ್ಟದಿಂದ ರಾಷ್ಟ್ರಮಟ್ಟದವರೆಗೆ ಈ ಪ್ರವೃತ್ತಿ ಆಳವಾಗಿ ಬೇರೂರಿದೆ. ದೇಶದ ಅರ್ಥವ್ಯವಸ್ಥೆಯನ್ನು ಮಾತ್ರವೇ ಅಲ್ಲದೆ ಆಡಳಿತ ವ್ಯವಸ್ಥೆಯನ್ನೂ ತನ್ನ ಕಬಂಧ ಬಾಹುಗಳಿಂದ ಆವರಿಸಿರುವ ಬಂಡವಾಳ ವ್ಯವಸ್ಥೆ ಮತ್ತು ನವ ಉದಾರವಾದಿ ತತ್ವಗಳು ಕುಟುಂಬ ರಾಜಕಾರಣದ ಮುನ್ನಡೆಗೆ ಸುಭದ್ರ ನೆಲೆ ಒದಗಿಸುತ್ತಿವೆ.

ಈ ಪ್ರವೃತ್ತಿಯ ವಿರುದ್ಧ ಸೆಟೆದು ನಿಲ್ಲುವ ಕ್ರಾಂತಿಕಾರಿ ಚಿಂತನೆಗಳು ಮುಖ್ಯವಾಹಿನಿಯಲ್ಲಿ ಕಂಡು ಬಂದರೂ, ಜನಸಾಮಾನ್ಯರ ಪಾರಂಪರಿಕ ನಿಷ್ಠೆ ಮತ್ತು ಪ್ರಾಚೀನ ಮೌಲ್ಯಗಳ ಬಗ್ಗೆ ಇರುವ ಬದ್ಧತೆ ಈ ಚಿಂತನೆಗಳ ಮುನ್ನಡೆಗೆ ತೊಡಕಾಗಿ ಪರಿಣಮಿಸುತ್ತದೆ. ಈ ಸೂಕ್ಷ್ಮ ವಿದ್ಯಮಾನವನ್ನು ಕರ್ನಾಟಕದ ಪ್ರಸ್ತುತ ಸಂದರ್ಭದಲ್ಲಿ ಕಾಣಬಹುದು. ಮೈಸೂರಿನಲ್ಲಿ ನಡೆದ ಯದುವೀರ ಒಡೆಯರ್ ಅವರ ವಿವಾಹ ಸಂದರ್ಭದಲ್ಲಿ ನಮ್ಮ ಸಮಾಜದಲ್ಲಿ ಬೇರೂರಿರುವ ಪ್ರಾಚೀನ ಮೌಲ್ಯಗಳು ಮುನ್ನೆಲೆಗೆ ಬಂದಿರುವುದನ್ನೂ ಕಾಣಬಹುದು.




ಭಾರತ ಸ್ವತಂತ್ರ ದೇಶವಾಗಿ ೬೮ ವರ್ಷಗಳಾದರೂ, ಗಣತಂತ್ರವಾಗಿ ೬೬ ವರ್ಷಗಳಾದರೂ, ರಾಜಪ್ರಭುತ್ವದ ನೆಲೆಗಳು ಧ್ವಂಸಗೊಂಡು ಆರು ದಶಕಗಳಾದರೂ ನಮ್ಮ ಸಮಾಜದಲ್ಲಿ ರಾಜಪರಿವಾರದ ಬಗ್ಗೆ ಇರುವ ಆದರ ಸಮ್ಮಾನಗಳು ಅಚ್ಚರಿ ಮೂಡಿಸುತ್ತವೆ. ಮೈಸೂರಿನ ಒಡೆಯರ್ ಸಂತತಿ ಕೊನೆಗೊಂಡರೂ, ರಾಜ ಮನೆತನದ ಅಸ್ತಿತ್ವ ಪ್ರಜಾತಂತ್ರದ ನೆಲೆಯಲ್ಲಿ ಕೊನೆಗೊಂಡಿದ್ದರೂ, ರಾಜವಂಶಸ್ಥರ ಕೌಟುಂಬಿಕ ವಿದ್ಯಮಾನಗಳು ಸಾರ್ವಜನಿಕ ವಲಯದಲ್ಲಿ ಕೇವಲ ಆಸಕ್ತಿ ಹುಟ್ಟಿಸುವುದೇ ಅಲ್ಲದೆ, ಗೌರವ ಸಮ್ಮಾನಗಳನ್ನು ಸೃಷ್ಟಿಸುತ್ತಿರುವುದು ಈ ಬೌದ್ಧಿಕ ದಿವಾಳಿತನಕ್ಕೆ ಸಾಕ್ಷಿಯಾಗಿ ನಿಲ್ಲುತ್ತದೆ. ಪ್ರಜಾತಂತ್ರ ವ್ಯವಸ್ಥೆಯಲ್ಲಿ ಸಾರ್ವಭೌಮ ಪ್ರಜೆಗಳ ಸ್ವತ್ತು ಎಂದೇ ಪರಿಗಣಿಸಲಾಗುವ ಅರಮನೆ ನಿರ್ದಿಷ್ಟ ಸಂದರ್ಭಗಳಲ್ಲಿ ಗತಕಾಲದ ರಾಜ ಮನೆತನದ ಖಾಸಗಿ ದರ್ಬಾರ್ ಆಗಿ ಪರಿವರ್ತಿತವಾಗುತ್ತದೆ. ದಸರಾದಂತಹ ಜನಸಾಮಾನ್ಯರ ನಾಡ ಹಬ್ಬಗಳು ರಾಜವಂಶಸ್ಥರ ಹಿರಿಮೆಯನ್ನು ಜಗತ್ತಿಗೆ ಸಾರುವ ಸಾಂಸ್ಕೃತಿಕ ರಥಗಳಾಗುತ್ತವೆ. ಪ್ರಜೆಗಳೇ ಪ್ರಭುಗಳು ಎಂಬ ಮೌಲ್ಯವನ್ನು ಪ್ರತಿಪಾದಿಸುವ ಪ್ರಜಾತಂತ್ರ ವ್ಯವಸ್ಥೆಯಲ್ಲಿ ಪ್ರಜೆಗಳು ಪ್ರಭುಗಳಿಂದ ದೂರದಲ್ಲಿ ನಿಲ್ಲುವ ಸಂದರ್ಭವನ್ನು ಕಾಣುತ್ತಿರುವುದು ಚಾರಿತ್ರಿಕ ದುರಂತವಷ್ಟೇ ಅಲ್ಲ, ಬೌದ್ಧಿಕ ದಿವಾಳಿತನದ ಸಂಕೇತವೂ ಹೌದು.

ಮೈಸೂರು **ನಾ. ದಿವಾಕರ**

### ✉ ಮನಗೆದ್ದ ಸಂಚಿಕೆ

"ಹಿಂದೂ ರಾಷ್ಟ್ರ ಅಥವಾ ಯಾವುದೇ ರಾಷ್ಟ್ರದವರೆಂದು ಕರೆಯಲ್ಪಟ್ಟರೆ ಅವರೆಲ್ಲರೂ ಒಂದೇ ಮತದವರೆಂಬ ಅರ್ಥವಲ್ಲ" ಎಂದು ಹೇಳಿಕೆಯಿತ್ತ ಆನಂದಕುಮಾರ ಸ್ವಾಮಿಯ ಅಭಿಪ್ರಾಯಕ್ಕೆ ಒತ್ತುನೀಡಿ ಭಾರತದ ರಾಷ್ಟ್ರೀಯತೆಯ ಕುರಿತು ಗಂಭೀರ ಚರ್ಚೆಯ ಕುರಿತು ಪ್ರಕಟಗೊಂಡ ಕೃತಿಯ ವಿಮರ್ಶೆಯಾಗಿ ಮೂಡಿ ಬಂದ ಡಾ॥ ಪುರುಷೋತ್ತಮ ಬಿಳಿಮಲೆಯವರ ಸಚಿತ್ರ ಬರಹ ಆರಂಭದಲ್ಲಿಯೇ ಗಮನ ಸೆಳೆಯಿತು. (ಹೊಸತಿನ ಜೂನ್ ಸಂಚಿಕೆ). ಪ್ರೊ॥ ಕೆ. ಎನ್. ಪಣಿಕ್ಕರ್ ಅವರ ಮೂಲ ಬರಹವನ್ನು ಕನ್ನಡಕ್ಕೆ ಕೆ. ಎಸ್. ಪಾರ್ಥಸಾರಥಿಯವರು ಭಟ್ಟಿ ಇಳಿಸಿದ್ದಾರೆ. ಡಾ॥ ಬಿಳಿಮಲೆಯವರು ಈ ಕೃತಿಯನ್ನು ಆಮೂಲಾಗ್ರವಾಗಿ ಪರಿಶೀಲಿಸಿ ಓದುಗರ ಗಮನವನ್ನು ಸೆಳೆದಿದ್ದಾರೆ.

ಚಿತ್ರದುರ್ಗ ಎಂದೊಡನೆ ನಮ್ಮೆಲ್ಲರ ಗಮನ ಸೆಳೆಯುವುದು ಒನಕೆ ಓಬವ್ವನತ್ತ. ಈ ಸಂಚಿಕೆ ನೋಡಿದಾಗ ಓಬಮ್ಮನ ಹೆಸರು ಹಿಂದಕ್ಕೆ ತಳ್ಳಲ್ಪಟ್ಟು ಡಿ. ಎನ್. ರವಿಕುಮಾರ್ ಅವರು ನೀಡಿದ ಬಾಳೆಕಾಯಿ ಸಿದ್ದಪ್ಪನ ಗುಹೆ ನಮ್ಮ ಗಮನ ಸೆಳೆಯುತ್ತಿದೆಯೆಂದರೆ ಅಚ್ಚರಿಯಿಲ್ಲ. ನಾವಾರೂ ಕಂಡು ಕೇಳಿಯೇ ಇರದ ಕುಕ್ಕರಗಾಲಿನಲ್ಲಿ ಪ್ರವೇಶ ಮಾಡಬೇಕಾಗಿರುವ, ಅನಿವಾರ್ಯತೆಯನ್ನು ಹೊಂದಿದ ಗುಹೆ ಇದು. ಸುತ್ತಲೂ ಕಗ್ಗಲ್ಲಿನ ಕೋಟೆಯಂತಿರುವ ವಿಶಿಷ್ಟತೆಗೆ ಹೆಸರಾದ ಈ ಸ್ಥಳ ಪವಿತ್ರತೆ ಹೊಂದಿರುವಂತೆಯೇ ಪ್ರಾಣಿ ಪಕ್ಷಿಗಳಿಗೂ ತಾಣವಾಗಿದೆಯೆಂದು ತಿಳಿದು ಬರುತ್ತಿರುವುದರಿಂದ ಬಹಳಷ್ಟು ಜಾಗ್ರತೆಯಿಂದ ಈ ಸ್ಥಳಕ್ಕೆ ಒಮ್ಮೆಯಾದರೂ ಸಂದರ್ಶನ ನೀಡಬೇಕೆಂದು ಅಭಿಲಾಷೆ ಮೂಡಿದುದು ನಿಜ.

ಎಸ್. ಆರ್. ಭಟ್ ಅವರು ನೀಡಿದ 'ಕರ್ನಾಟಕದಲ್ಲಿ ಕಾರ್ಮಿಕ ಚಳವಳಿ ನಡೆದುಬಂದ ದಾರಿ' ಎಂಬ ಲೇಖನ ಎರಡೆರಡಾವರ್ತಿ ಓದಿಸಿಕೊಂಡುದಲ್ಲದೆ ಕಾರ್ಮಿಕ ಬಂಧುಗಳ ಈ ಕರ್ಮಕಾಂಡದ ಚರಿತ್ರೆಯ ಮುಂದುವರಿಯುವ ಭಾಗಕ್ಕಾಗಿ ಕಾತರಿಸುವ ಮನೋಭಾವಕ್ಕೆಡೆ ನೀಡಿತು. ಇದರೊಂದಿಗೆ ಸೇರಿಕೊಂಡ ಬೆಂಗಳೂರಿನ ಕಾರ್ಮಿಕ

ದಿನಾಚರಣೆಯ ಸಂದರ್ಭದಲ್ಲಿ ನಡೆದ "ಹುಚ್ಚು ಹೊಳೆಯಾಗಿ ಹರಿದುಬಂದ ಗಾರ್ಮೆಂಟ್ಸ್ ಮಹಿಳೆಯರ ಆಕ್ರೋಶ" ಎನ್ನುವದು. ಸರಸ್ವತಿ, ಪ್ರತಿಭಾ ಅವರ ಇನ್ನೊಂದು ಬರಹ ಕಾರ್ಮಿಕ ಬಂಧುಗಳ ಮನೆ ಮನೆಯೊಳಗೆ ಸಂಚರಿಸದಂತೆ ಮನನವಾದುದು ಅತಿಶಯೋಕ್ತಿಯ ಹೇಳಿಕೆಯಲ್ಲ. 'ತುಳು ಜಾನಪದದಲ್ಲೊಂದು ಕೆರೆಗೆ ಹಾರ' ಡಾ॥ ಪಾಲ್ತಾಡಿ ರಾಮಕೃಷ್ಣ ಆಚಾರ್ಯರವರ ಹಳ್ಳಿಯ ಪಾಡ್ದನಗಳಿಂದ ಹೆಕ್ಕಿ ತೆಗೆದು ಜೋಡಿಸಿದ ನಿಜ ಹಾರದ ಹಾಗೆ ತೋರಿಬಂದು ಕಾಪಿಡಬೇಕಾದ ಲೇಖನ ಅನ್ನಿಸಿಕೊಂಡಿತು.

ಸಂಪಾದಕೀಯ ಬರಹದಲ್ಲಿ 'ಕೊಳೆ'ಯನ್ನು ತಿಳಿನೀರಿನಿಂದ ತೊಳೆಯಬೇಕು ಎಂದು ಸೂಕ್ಷ್ಮರೀತಿಯಿಂದ ಮುಂದೆ ನೀವು ಹೇಳಲಿರುವ ಹೂರಣವನ್ನು ತೋರಣ ಕಟ್ಟಿ ತೋರಿಸಿಕೊಂಡಂತಹ ರೀತಿಗೆ ಮತ್ತೊಮ್ಮೆ ವಂದನೆ ಸಲ್ಲಿಸದೆ ಇರುವುದು ಹ್ಯಾಗೆ. ಕೊಳೆಯ ತೊಡಗಿದ ಭ್ರಷ್ಟಾಚಾರ ಎಂಬ ಸರ್ವತ್ರ ಹಬ್ಬಿ ಸಾಂಕ್ರಾಮಿಕ ರೋಗದಂತೆ ಹರಡುತ್ತಲೇ ಇರುವ ವಾಸ್ತವಿಕ ಪರಿಸ್ಥಿತಿಗೆ ಸರಿಪಡಿಸಿಯೇ ಸಿದ್ಧವೆಂದು ಅಬ್ಬರದ ಆಡಂಬರದಿಂದ ಬೊಬ್ಬೆ ಹೊಡೆಯುತ್ತಿರುವವರಿಗೆ ತೊಳೆಯಲು ಶುಭ್ರ ನೀರನ್ನು ಹುಡುಕುವ ವ್ಯವಧಾನವಾದರೂ ಎಲ್ಲಿ ಅಡಗಿದೆ. ಒಂದು ವೇಳೆ ಎಳೆದು ತರಲು ಯಾರಿದ್ದಾರೆ. ನುಂಗಪ್ಪನಿಗೆ ಇನ್ನೋರ್ವ ನುಂಗಪ್ಪನೇ ಸಾಕ್ಷಿ ಅಂದ ಹಾಗಿದೆ ಎಂದಿರಾ. ಸರಿ, ಸರಿಯಾಗಿಯೇ ಹೇಳಿದಿರಿ.

ಇಂತಹ ವಿಶಿಷ್ಟತೆಯ ಬರಹ ಸನ್ನಿವೇಶ ಸಂದರ್ಭಗಳನ್ನು ಅಕ್ಷರ ಮಾಧ್ಯಮದಿಂದ ಸಾಕ್ಷೀಕರಿಸುತ್ತಿರುವ ತಮ್ಮ ನಿಲುವಿಗಾಗಿಯೇ ಇರಬೇಕು. ಹೊಸತು ಹೊಸತನ್ನೇ ನೀಡುತ್ತಿದೆ ಎನ್ನುವ ಜನ ಜನಿತವಾದ ಮಾತು ಕೇಳಿಬರುತ್ತಿರುವುದು ತಮಗೆ ಮಗದೊಮ್ಮೆ ಅಭಿನಂದನೆಗಳು.

*ಕಾಸರಗೋಡು* — ***ಕೀರಿಕ್ಕಾಡು ವನಮಾಲಾ ಕೇಶವಭಟ್ಟ***

## ✉ ಅಂತರಂಗ ಜಾಗೃತಗೊಳಿಸುವ ಶಿಕ್ಷಣ ಬೇಕು

ಸಮಾಜಕ್ಕೆ ಎಂಥ ಶಿಕ್ಷಣ ಬೇಕು ಎಂಬುದನ್ನು ಕುರಿತು ಸ್ವಾಮಿ ವಿವೇಕಾನಂದರು ಹೇಳಿರುವ ಮಹತ್ವದ ಮಾತೊಂದಿದೆ : 'ಯಾವ ಶಿಕ್ಷಣದಿಂದ ನಾವು ಶೀಲವಂತರಾಗಬಲ್ಲೆವೋ ಮನಸ್ಸಿನ ಶಕ್ತಿ ದೃಢವಾಗಬಲ್ಲುದೋ, ಧೀಶಕ್ತಿ ವಿಕಾಸಗೊಳ್ಳಬಲ್ಲುದೋ ಹಾಗೂ ಯಾವ ಶಿಕ್ಷಣದಿಂದ ನಾವು ಸ್ವಾವಲಂಬಿಗಳಾಗಿ ಬದುಕಬಲ್ಲೆವೋ ಅಂತಹ ಶಿಕ್ಷಣ ನಮಗೆ ಬೇಕು.'

ನಾವು ಮುಖ್ಯವಾಗಿ ಗಮನಿಸಬೇಕಾದ ಅಂಶ ಎಂದರೆ ವಿವೇಕಾನಂದರು ಮೊದಲಿಗೆ ಹೇಳುವುದು ಶೀಲವಂತರಾಗುವ ಶಿಕ್ಷಣಬೇಕೆಂದು. ಇಂದಿನ ಶಿಕ್ಷಣದಲ್ಲಿ ದೊಡ್ಡ ಕೊರತೆ ಎಂದರೆ ಇದೇ. ವ್ಯಕ್ತಿಯಲ್ಲೆ ಸುಪ್ತವಾಗಿರುವ ಒಳ್ಳೆಯ ಗುಣವನ್ನು ಉದ್ದೀಪನಗೊಳಿಸುವತ್ತ ಇಂದಿನ ಶಿಕ್ಷಣವಾಗಲೀ, ಸಾಮಾಜಿಕ ಸಂದರ್ಭಗಳಾಗಲೀ, ಮನೆಯ ವಾತಾವರಣವಾಗಲೀ ಹೌದು ಎನ್ನುವಷ್ಟು ಪೂರಕವಾಗಿಲ್ಲ. ಶಿಕ್ಷಣ ಸಂಸ್ಥೆಗಳು ಹಣದ ದಂಧೆಯಲ್ಲಿ ನಿರತವಾಗಿದ್ದರೆ ಸಾಮಾಜಿಕ ವಾತಾವರಣ ಕಲುಷಿತವಾಗಿದೆ.

ತೊಂಬತ್ತರ ದಶಕದಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯಿತು. ನಾವು ಅದನ್ನು ನಡೆಸುವಾಗ ಒಬ್ಬ ಅನಕ್ಷರಸ್ಥ ರೈತನಿಂದ ಒಂದು ಪ್ರಶ್ನೆ ಎದುರಾಯಿತು. ಆತ ಕೇಳಿದ ಪ್ರಶ್ನೆ ಎಂದರೆ 'ಸ್ವಾಮಿ, ನಿಮ್ಮ ಎದೆ ಮುಟ್ಕಂಡೇಳಿ, ಈಗ ಭ್ರಷ್ಟಾಚಾರ ಆಯ್ತಾ ಇರಾದು ಅಕ್ಷರ ಕಲ್ತವರಿಂದಲೋ ಕಲೀದೆ ಇರೋರಿಂದಲೋ ?' ನಿಜ. ಅದು ಮಹತ್ವದ ಪ್ರಶ್ನೆ. ಹಣವೊಂದೆ ಪ್ರಧಾನವಾಗಿ ಅದು ಎಲ್ಲ ವಿಧದಲ್ಲಿಯೂ ತನ್ನ ಕಬಂಧ ಬಾಹುವನ್ನು ಚಾಚಿ ಬಾಚುತ್ತಿದೆ.

ಹಣವನ್ನು ಸೃಷ್ಟಿಸಿದ್ದು ಮನುಷ್ಯನೆ ಹೊರತು ಮನುಷ್ಯನನ್ನು ಹಣ ಸೃಷ್ಟಿಸಿಲ್ಲ ಎಂಬ ಸತ್ಯದ ಅರಿವು ಮನುಕುಲಕ್ಕೆ ಎಂದಿಗೆ ಬಂದೀತು ? ಆ ಅರಿವು ಬಂದ ಕ್ಷಣಾರ್ಧದಲ್ಲಿ ಮನುಷ್ಯನ ಹೃನ್ಮನಗಳಲ್ಲಿ ಆನಂದದ ಅಮೃತ ಹರಿದಾಡುತ್ತದೆ.

ಇಂದಿನ ಶಿಕ್ಷಣ ವಿದ್ಯಾರ್ಥಿಗಳ ಮನಸ್ಸನ್ನು ಗಟ್ಟಿಗೊಳಿಸುತ್ತಿಲ್ಲ. ಪ್ರತಿಯೊಂದು ಸಂದರ್ಭದಲ್ಲಿಯೂ ಅವರು ಪರಾವಲಂಬಿಗಳಾಗುತ್ತಿದ್ದಾರೆ. ಅವರ ಧೀಶಕ್ತಿ ವಿಕಾಸಗೊಳ್ಳುವ ಯಾವ ಲಕ್ಷಣಗಳೂ ಕಂಡುಬರುತ್ತಿಲ್ಲ. ಅವರಲ್ಲಿ ಒಂದು ಉದಾತ್ತ ಗುಣವೇ ಪ್ರಕಟವಾಗುತ್ತಿಲ್ಲ ಅವರ ಆತ್ಮಶಕ್ತಿಯನ್ನು ಜಾಗೃತಗೊಳಿಸುವಲ್ಲಿ ಇಂದಿನ ಶಿಕ್ಷಣ ಪೂರಕವಾಗಿಲ್ಲ. ಹಾಗಾಗಿ ಮೊದಲ ರ್‍ಯಾಂಕ್‌ನಲ್ಲಿ ಉತ್ತೀರ್ಣನಾಗಿ ಬಂದ ವಿದ್ಯಾರ್ಥಿಯೂ ಸ್ವಾವಲಂಬಿ ಜೀವನವನ್ನು ನಡೆಸುವ, ಸರಳತೆಯಿಂದ ಮೌಲಿಕವಾಗಿ ಬದುಕುವ ದೃಢ ಚಿತ್ತವನ್ನು ಹೊಂದದೆ ಪೋಷಕರ, ಅತ್ತೆಮಾವಂದಿರ, ಸನ್ನಿವೇಶ ಸಂದರ್ಭಗಳ ಕೈಗೊಂಬೆಯಾಗುತ್ತಿದ್ದಾನೆ. ಸ್ವಸಾಮರ್ಥ್ಯದಿಂದ ಉದ್ದೀಪಿತನಾಗಿ ಸರ್ವರ ಹಾಗೂ ಸರ್ವದರ ಹಿತರಕ್ಷಕನಾಗಿ ಸಂತೋಷ ಸಂಭ್ರಮದಿಂದ ಬದುಕನ್ನು ಸಾರ್ಥಕಗೊಳಿಸಿಕೊಳ್ಳುವ ಮನೋಧರ್ಮ ಅಮಾವಾಸ್ಯೆಯಂದು ಚಂದ್ರನನ್ನು ಹುಡುಕಿದಂತಾಗಿದೆ.

*ಹಾಸನ* — ***ಜ. ಹೊ. ನಾರಾಯಣಸ್ವಾಮಿ***

## ✉ ಭೂಸ್ವಾಧೀನ ಮಸೂದೆ : ಯೋಗೀನ ಯಾಮಾರಿಸುವ ಯತ್ನ

ಈ ಸಮಾಜದಲ್ಲಿ ಪ್ರತಿಯೊಬ್ಬ ನಾಗರಿಕನಿಗೂ ಜೀವಿಸುವ ಹಕ್ಕಿದೆ, ಸ್ವಾತಂತ್ರ್ಯವಿದೆ. ಆದರೆ ಈ ಭೂಸ್ವಾಧೀನ ಕಾಯ್ದೆಯ ಮೂಲಕ ರೈತನ ಈ ಹಕ್ಕನ್ನು ಕಿತ್ತುಕೊಳ್ಳುವ ಪ್ರಯತ್ನ ನಡೆಯುತ್ತಿದೆ. ಈ ಭೂಸ್ವಾಧೀನ ಕಾಯ್ದೆ ತಿದ್ದುಪಡಿಯಲ್ಲಿರುವ ರೈತ ವಿರೋಧಿ ಅಂಶಗಳು ಒಂದೆರಡಲ್ಲ ಬರೋಬ್ಬರಿ ಆರು ಅಂಶಗಳು. ೧೮೯೪ರ ಫೆಬ್ರವರಿ ೨ರಂದು ಬ್ರಿಟಿಷರು ತಂದ ಕಾಯ್ದೆಯನ್ನೇ ಇಂದು ತಿದ್ದುಪಡಿ ಮಾಡಿ ಹೊಸ ಕಾಯ್ದೆಯನ್ನಾಗಿ ಮಾಡಲಾಗುತ್ತಿದೆ. ರಸ್ತೆ, ರೈಲು ಮಾರ್ಗ, ಸಾರ್ವಜನಿಕರಿಗೆ ಅವಶ್ಯಕವೆನಿಸಿದ ಯೋಜನೆಗಳಿಗೆ ಸರ್ಕಾರಗಳು ಖಾಸಗಿ ಭೂಮಿಯನ್ನು ನಿರ್ದಿಷ್ಟ ಪರಿಹಾರ ನೀಡಿ ವಶಪಡಿಸಿಕೊಳ್ಳಬಹುದು. ಆದರೆ ಹೀಗೆ ಭೂಮಿ ಸ್ವಾಧೀನ ಪಡಿಸಿಕೊಳ್ಳುವಾಗ ಶೇಕಡಾ ೭೦ರಿಂದ ಶೇಕಡಾ ೮೦ರಷ್ಟು ಜನರ ಅನುಮತಿ ಕಡ್ಡಾಯವಾಗಿ ಬೇಕಿತ್ತು. ಇನ್ನು ಈ ಹೊಸ ಭೂಸ್ವಾಧೀನ ಕಾಯ್ದೆಯಿಂದ ಭೂಮಿಯ ಮಾಲೀಕರ ಸಮ್ಮತಿ ಕೂಡ ಬೇಕಿಲ್ಲ! ಜೊತೆಗೆ ಇದುವರೆಗೆ ಉದ್ಯಮ ಸ್ಥಾಪನೆಯಿಂದ ಸಾಮಾಜಿಕ ಪರಿಣಾಮಗಳ ಅಧ್ಯಯನ ಮಾಡಬೇಕಿತ್ತು. ಇದರಿಂದ ಜಮೀನು ಕಳೆದುಕೊಂಡವನಿಗೆ ಪುನರ್ವಸತಿ ಹಾಗೂ ಆರ್ಥಿಕ ಸಹಾಯಕ್ಕೆ ಅನುಕೂಲವಾಗುತ್ತಿತ್ತು. ಇನ್ನುಮುಂದೆ ಅದಕ್ಕೂ ಅವಕಾಶವಿಲ್ಲ. ಸಾಮಾಜಿಕ ಪರಿಣಾಮಗಳ ಅಧ್ಯಯನದ ಅವಶ್ಯಕತೆ ಇಲ್ಲ ಎಂದು ಈ ತಿದ್ದುಪಡಿ ಕಾಯ್ದೆಯಲ್ಲಿ ಹೇಳಲಾಗಿದೆ.

ದೇಶೀಯ ಹಿತಾಸಕ್ತಿಯ ಅಡಿಯಲ್ಲಿ ಮಾತ್ರ ಇಷ್ಟು ದಿನ ಭೂಮಿಯನ್ನು ವಶಪಡಿಸಿಕೊಳ್ಳಬಹುದಿತ್ತು. ಇನ್ನು ಅದರ ಪ್ರಮೇಯವೇ ಉದ್ಭವಿಸುವುದಿಲ್ಲ. ನೀರಾವರಿ, ಮಿಶ್ರಬೆಳೆ ಮುಂತಾದ ಕೃಷಿ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲು ಇನ್ನೂ ಮಿತಿಯಿಲ್ಲ. ಸರ್ಕಾರ ಇಷ್ಟು ದಿನ ಯಾವುದೇ ಯೋಜನೆಗೆ ರೈತರ ಭೂಮಿಯನ್ನು ವಶಕ್ಕೆ ಪಡೆದು ಅದನ್ನು ಕನಿಷ್ಠ ೫ ವರ್ಷ ಬಳಕೆ ಮಾಡಿಕೊಳ್ಳದೆ ಹೋದರೆ ಆ ಭೂಮಿಯನ್ನು ಮೂಲ ಮಾಲೀಕರಿಗೆ ಹಿಂದಿರುಗಿಸಲು ಅವಕಾಶವಿತ್ತು. ಇನ್ನುಮುಂದೆ ಈ ಹೊಸ ಭೂಸ್ವಾಧೀನ ಕಾಯ್ದೆಯಲ್ಲಿ ಅದಕ್ಕೆ ಅವಕಾಶವೇ ಇಲ್ಲ. ಯಾವುದೇ ಉದ್ದೇಶಕ್ಕೆ ಬಳಕೆಯಾಗದ ಭೂಮಿಯನ್ನು ಹಿಂದಿರುಗಿಸಲು ೫ ವರ್ಷ ಅಥವಾ ಅವುಗಳಲ್ಲಿ ಯಾವುದು ತಡವೋ ಆ ಸಮಯದಲ್ಲಿ ಭೂಮಿಯನ್ನು ಹಿಂದಿರುಗಿಸ ಬಹುದು. ಅಂದರೆ ಅದನ್ನು ಕೊಟ್ಟರೂ ಕೊಡಬಹುದು. ಅಥವಾ ಮತ್ತೊಂದು ಯೋಜನೆ ಬರುವವರೆಗೆ ಹಾಗೆಯೇ ಬಿಟ್ಟುಕೊಳ್ಳಬಹುದು. ಮೇಲಾಗಿ ಹಳೆಯ ಕಾಯ್ದೆಯನ್ವಯ ಸ್ವಾಧೀನಪಡಿಸಿಕೊಳ್ಳಲಾಗದೆ ನಿಂತಿರುವ ಯೋಜನೆಗಳನ್ನು ಹೊಸ ಕಾಯ್ದೆಯನ್ವಯ ಮರು ಜಾರಿಗೊಳಿಸಲು ಅನುಮತಿ ನೀಡಲು ಅವಕಾಶವಿದೆ. ಅಂದರೆ ಅಲ್ಲಿಗೆ ಒಮ್ಮೆ ರೈತನ ಕೈತಪ್ಪಿ ಹೋದ ಜಮೀನು ಮತ್ತೆ ಯಾವುದೇ ಕಾರಣಕ್ಕೂ ಹಿಂದಿರುಗದು. ಸರ್ಕಾರಿ ಅಧಿಕಾರಿಗಳು ಅಥವಾ ಇಲಾಖೆಯ ಮುಖ್ಯಸ್ಥರು ಕಾಯ್ದೆಯನ್ನು ಉಲ್ಲಂಘಿಸಿದರೆ ಅವರ ವಿರುದ್ಧ ಕ್ರಮ ಕೈಗೊಳ್ಳಲು ಇನ್ನು ಮುಂದೆ ಸರ್ಕಾರದ ಅನುಮತಿ ಬೇಕು. ಇಷ್ಟು ದಿನ ಇದರ ಅವಶ್ಯಕತೆ ಇರಲಿಲ್ಲ. ತಪ್ಪು ಮಾಡಿದವರ ವಿರುದ್ಧ ನೇರವಾಗಿ ರೈತರು ಕಾನೂನು ಸಮರ ನಡೆಸಲು ಅವಕಾಶವಿತ್ತು. ನ್ಯಾಯಾಧೀಶರು ಅಂಥವರಿಗೆ ಶಿಕ್ಷೆಯನ್ನೂ ವಿಧಿಸುತ್ತಿದ್ದರು. ಈಗ ಈ ಕಾಯ್ದೆಯಿಂದ ಇದ್ದ ಆ ಸ್ವಾತಂತ್ರ್ಯವನ್ನೂ ಕಿತ್ತುಕೊಳ್ಳಲಾಗಿದೆ. ರೈತ ಇನ್ನು ಬಾಯಿ ಕೂಡ ಬಿಡುವಂತಿಲ್ಲ. ಅಧಿಕಾರಿಗಳು ಮಾಡಿದ್ದೇ ಸರಿ ಎನ್ನುವ ಮತ್ತು ಸರ್ಕಾರಗಳು ಅದನ್ನು ಸಮರ್ಥಿಸಿಕೊಳ್ಳುವ ಅಸ್ತ್ರ ಸೃಷ್ಟಿಯಾಗುತ್ತದೆ!

*ಬೆಂಗಳೂರು* — ***ಸೌಮ್ಯಾ ಕೆ. ಆರ್.***

# ಕ್ಷ - ಕಿರಣ

- ಸಾನ್ವಿ ಪಿ.







ಸ್ವಾತಂತ್ರ್ಯೋತ್ಸವ








# ಕರ್ನಾಟಕದಲ್ಲಿ ಕಾರ್ಮಿಕ ಚಳವಳಿ ನಡೆದುಬಂದ ದಾರಿ

ಎಸ್. ಆರ್. ಭಟ್

## ರಾಜ್ಯದಲ್ಲಿ ಚಳವಳಿಯ ಎರಡನೇ ಹಂತ ೧೯೪೭-೫೬

ದಿವಂಗತ ಎಸ್. ರಾಮಚಂದ್ರ ಭಟ್ಟರು ನವಕರ್ನಾಟಕ ಪ್ರಕಾಶನ ಸಂಸ್ಥೆಯ ಸ್ಥಾಪಕರಲ್ಲೊಬ್ಬರು ಹಾಗೂ ಸ್ಥಾಪಕ ಕಾರ್ಯದರ್ಶಿ. ಸಂಸ್ಥೆಯಲ್ಲಿ ಹಲವಾರು ವರ್ಷಗಳು ಕಾರ್ಯ ನಿರ್ವಹಿಸಿ ಭದ್ರವಾದ ನೆಲೆ ಸೃಷ್ಟಿಸಿದವರು. ಕೆಲಕಾಲ 'ಕೆಂಬಾವುಟ' ಪತ್ರಿಕೆಯ ಸಂಪಾದಕರಾಗಿದ್ದ ಭಟ್ಟರು ಬೆಂಗಳೂರಿನಿಂದ ಪ್ರಕಟವಾದ ಸೈದ್ಧಾಂತಿಕ ಮಾಸಪತ್ರಿಕೆ 'ಅರುಣ'ದ ಸಂಪಾದಕರೂ ಆಗಿದ್ದರು. ಕನ್ನಡ, ಸಂಸ್ಕೃತ, ಇಂಗ್ಲಿಷಿನಲ್ಲಿ ಪ್ರಬುದ್ಧರಾಗಿದ್ದ ಅವರು ವಿದ್ವಾಂಸರು. ವೇದಾಧ್ಯಯನ ಮಾಡಿದ್ದರು. ಭಾರತದ ಪ್ರಾಚೀನ ಇತಿಹಾಸವನ್ನು ಚೆನ್ನಾಗಿ ಬಲ್ಲವರಾಗಿದ್ದರು. 'ಕುಮಾರವ್ಯಾಸ ಭಾರತ' ಕಂಠಪಾಠ ಮಾಡಿಕೊಂಡಿದ್ದರು, ಅಧ್ಯಯನ ಶೀಲರಾಗಿದ್ದ ಭಟ್ಟರು ಆಳವಾದ ವಿಶ್ಲೇಷಣೆಗೆ ಹೆಸರಾಗಿದ್ದರು.

೧೯೭೭ರ ಅಕ್ಟೋಬರ್ ತಿಂಗಳಲ್ಲಿ ಅವರು ಬರೆದ 'ಕರ್ನಾಟಕದಲ್ಲಿ ಕಾರ್ಮಿಕ ಚಳವಳಿ ನಡೆದುಬಂದ ದಾರಿ' ಪ್ರಕಟಿಸುತ್ತಿದ್ದೇವೆ.

*– ಸಂ.*

**ಆ**ಗಸ್ಟ್ ೧೫, ೧೯೪೭ರಂದು ಭಾರತೀಯರು ಬಹುಕಾಲದಿಂದ ಕಾಯುತ್ತಿದ್ದ "ಅದೃಷ್ಟ ಅವರನ್ನು ಸಂಧಿಸಿತು". ಸುಮಾರು ಎರಡು ಶತಮಾನಗಳ ಬ್ರಿಟಿಷ್ ದಾಸ್ಯದಿಂದ ವಿಮೋಚನೆಗೊಂಡು ಭಾರತ ಸ್ವತಂತ್ರವಾಯಿತು. ಆದರೆ, ಈ ಸ್ವಾತಂತ್ರ್ಯ ಸಾಗರದಲ್ಲಿ ದೇಶೀಯ ಸಂಸ್ಥಾನಗಳೆಂಬ ನಿರಂಕುಶಾಧಿಕಾರದ ಹಲವು ದ್ವೀಪಗಳಿದ್ದವು. ಇವುಗಳಲ್ಲಿ ಮೈಸೂರು ಸಂಸ್ಥಾನವೂ ಒಂದಾಗಿತ್ತೆಂದು ಬೇರೆ ಹೇಳಬೇಕಾಗಿಲ್ಲ. ಈ ದೇಶೀಯ ಸಂಸ್ಥಾನಗಳು ಆಗ ಸ್ವತಂತ್ರ ರಾಜ್ಯಗಳಾಗುವ ಕನಸು ಕಾಣುತ್ತಿದ್ದವು. ತಿರುವಾಂಕೂರಿನ ಮಹತ್ವಾಕಾಂಕ್ಷಿ ದಿವಾನ್ ಸರ್. ಸಿ. ಪಿ. ರಾಮಸ್ವಾಮಿ ಐಯ್ಯರ್ ಮತ್ತು ಹೈದರಾಬಾದಿನ ನಿಜಾಮ ಮೊದಲಾದ ಕೆಲವರು ತಮ್ಮ ಈ ಆಕಾಂಕ್ಷೆಯನ್ನು ಬಹಿರಂಗವಾಗಿಯೂ ವ್ಯಕ್ತಪಡಿಸಿದ್ದರು. ಆಗ ಮೈಸೂರಿನ ದಿವಾನರಾಗಿದ್ದ ಸರ್ ಆರ್ಕಾಟ್ ರಾಮಸ್ವಾಮಿ ಮೊದಲಿಯಾರರೂ ಇದಕ್ಕೆ ಹೊರತಾಗಿರಲಿಲ್ಲ. ಆದರೆ ದೇಶೀಯ ಸಂಸ್ಥಾನಗಳ ಜನತೆ, ಅದರಲ್ಲೂ ಮುಖ್ಯವಾಗಿ ಕಾರ್ಮಿಕರು ಮತ್ತು ರೈತರು, ಈ ಪಿತೂರಿಗಳನ್ನು ವಿರೋಧಿಸಿದರು. ತಾಯಿ ಭಾರತಿಯ ಮಂಗಳ ಮುಖದ ಮೇಲೆ ಮೂಡಿದ್ದ ಈ ಮೊಡವೆಗಳನ್ನು ಕೀಳಲು ಅವರು ಮುಂದಾದರು. ಹೈದರಾಬಾದ್ ಮತ್ತು ತಿರುವಾಂಕೂರುಗಳ ರೈತ–ಕಾರ್ಮಿಕರು ತಮ್ಮ ಆಳರಸರ ವಿರುದ್ಧ ದಂಗೆಯೆದ್ದರು. ಹೈದರಾಬಾದಿನಲ್ಲಿ ತೆಲಂಗಾಣ ಸಮರ ಪ್ರಾರಂಭವಾಯಿತು. ತಿರುವಾಂಕೂರಿನ ಪುನ್ನಪ್ರ ವಯಲಾರಿನಲ್ಲಿ ದಿವಾನರ ನಿರಂಕುಶ ಪ್ರಭುತ್ವದ ವಿರುದ್ಧ ಭೀಕರ ಕದನ ನಡೆಯಿತು.

**ಮೈಸೂರು ಸಮರ**

ಈ ಹಿನ್ನೆಲೆಯಲ್ಲಿ "ಜವಾಬ್ದಾರಿ ಸರಕಾರ"ಕ್ಕೋಸ್ಕರ ಮೈಸೂರಿನ ಜನ ಹೋರಾಟಕ್ಕಿಳಿದರು. ಸೆಪ್ಟೆಂಬರ್ ೧, ೧೯೪೭ರಂದು ಸಂಸ್ಥಾನದ ವಿದ್ಯಾರ್ಥಿಗಳು "ಆರ್ಕಾಟ್ ಬಾಯ್‌ಕಾಟ್" ಚಳವಳಿ ಹೂಡಿದರು. "ದಿವಾನರ ಆಡಳಿತ ಹೋಗಲಿ", "ಜವಾಬ್ದಾರಿ ಸರಕಾರ ಬರಲಿ" ಎಂಬ ಘೋಷಣೆಗಳು ಮೊಳಗಿದವು. ಮೈಸೂರಿನ ಕಾರ್ಮಿಕವರ್ಗವೂ ಈ ಹೋರಾಟದಲ್ಲಿ ಹಿಂದೆ ಬೀಳಲಿಲ್ಲ. ಸಂಸ್ಥಾನದ ಕಾರ್ಮಿಕರು, ಅದರಲ್ಲೂ ಮುಖ್ಯವಾಗಿ ಹತ್ತಿ ಗಿರಣಿ ಕಾರ್ಮಿಕರು, ಕಾರ್ಖಾನೆಗಳಿಂದ ಹೊರಬಂದು ಈ ಚಳವಳಿಯ ಮುಂಚೂಣಿಯಲ್ಲಿ ನಿಂತು, ಮೊದಲು ಕೇವಲ ವಿದ್ಯಾರ್ಥಿಗಳಿಂದಲೇ ಕೂಡಿದ್ದ ಆಂದೋಲನವನ್ನು ಜನಸಾಮಾನ್ಯರ ಹೋರಾಟವನ್ನಾಗಿ ಮಾರ್ಪಡಿಸಿದರು. ತರುವಾಯ ಮೈಸೂರು ಪ್ರದೇಶ ಕಾಂಗ್ರೆಸ್ ಪಕ್ಷವೂ ಹೋರಾಟಕ್ಕೆ ಧುಮುಕಿತು. ಇದೇ ಸಮಯದಲ್ಲಿ ಎಂ. ಎಸ್. ಕೃಷ್ಣನ್ ಮತ್ತು ಡಿ. ಎಸ್. ಶ್ರೀರಾಮುಲುರವರ ನೇತೃತ್ವದಲ್ಲಿ, ಸಂಸ್ಥಾನದ ಸುಮಾರು ೧೧,೦೦೦ ಮಂದಿ ರೈಲ್ವೇ ಕೆಲಸಗಾರರು ಈ ಚಳವಳಿಗೆ ಬೆಂಬಲ ನೀಡಿ ಮುಷ್ಕರ ಹೂಡಿದರು. ಸಂಸ್ಥಾನದಲ್ಲಿ ಸಾರಿಗೆ ವ್ಯವಸ್ಥೆ ಸಂಪೂರ್ಣ ಕುಸಿದು ಬಿತ್ತು. ಮರಿದಾಸ್





ಮೊದಲಾದ ಕೆಲವು ಕಾರ್ಮಿಕ ನಾಯಕರನ್ನು ಸರಕಾರ ಬಂಧಿಸಿತು. ಆದರೆ, ಚಳವಳಿಯನ್ನು ನಾಶ ಮಾಡಲು ದಿವಾನರು ನಡೆಸಿದ ದಬ್ಬಾಳಿಕೆ ವಿಫಲವಾಯಿತು. ಕರ್ನಾಟಕದ ಇತರ ಕಡೆಗಳಲ್ಲಿಯೂ ಕಾರ್ಮಿಕ ವರ್ಗ ಈ ಚಳವಳಿಗೆ ಬೆಂಬಲ ನೀಡಿತು. ಕೊನೆಗೆ ಅಕ್ಟೋಬರ್ ೨೪ರಂದು ಒಂದು ವಿಶೇಷ ಆಜ್ಞೆಯ ಮೂಲಕ ಜವಾಬ್ದಾರಿ ಸರಕಾರ ರಚನೆಗೆ ಒಪ್ಪಿಗೆ ನೀಡಲಾಯಿತು. ಕೆ. ಸಿ. ರೆಡ್ಡಿಯವರ ನಾಯಕತ್ವದಲ್ಲಿ ಒಂದು ಸಮ್ಮಿಶ್ರ ಸರಕಾರ ಅಧಿಕಾರಕ್ಕೆ ಬಂತು (ಐ. ಮರಿದಾಸ್ : "ಕೆಂಬಾವುಟ" ೨.೧೧.೧೯೭೫). ಈ ಚಳವಳಿ "ಮೈಸೂರು ಸಮರ"ವೆಂದು ಪ್ರಸಿದ್ಧಿ ಪಡೆದಿದೆ.

ಸ್ವಾತಂತ್ರ್ಯಾನಂತರ ಎ.ಐ.ಟಿ.ಯು.ಸಿ. ಒಡೆದು, ಕಾಂಗ್ರೆಸ್ಸಿನ ಐ.ಎನ್.ಟಿ.ಯು.ಸಿ. ಮತ್ತು ಸೋಷಲಿಸ್ಟರ ಎಚ್‌ಎಂಎಸ್‌ಗಳು ಹೇಗೆ ಹುಟ್ಟಿಕೊಂಡವೆಂಬುದನ್ನು ಹಿಂದೆಯೇ ಹೇಳಲಾಗಿದೆ. ಇದರ ಕಾವು ಕರ್ನಾಟಕಕ್ಕೂ ತಟ್ಟದಿರಲಿಲ್ಲ. ಪರಿಣಾಮವಾಗಿ, ಇಲ್ಲಿ ಕೂಡ ಈ ಅವಧಿಯಲ್ಲಿ ತೀವ್ರ ಟ್ರೇಡ್ ಯೂನಿಯನ್ ಸ್ಪರ್ಧೆ ಪ್ರಾರಂಭ ವಾಯಿತು. ಕಾಂಗ್ರೆಸ್ ಮುಂದಾಳ್ತನದಲ್ಲಿದ್ದ ಯೂನಿಯನ್ನುಗಳು ಐ.ಎನ್.ಟಿ.ಯು.ಸಿ. ಯನ್ನು ಸೇರಿದವು. ಸೋಷಲಿಸ್ಟರು ಕೆಲವು ಹೊಸ ಕಾರ್ಮಿಕ ವಿಭಾಗಗಳನ್ನು ಸಂಘಟಿಸಿ ಅನೇಕ ಹೊಸ ಯೂನಿಯನ್ನುಗಳನ್ನು ಸ್ಥಾಪಿಸಲಾರಂಭಿಸಿದರು. ಹೀಗೆ ಹೊಸದಾಗಿ ಮೂಡಿಬಂದ ರಾಜ್ಯದ ಸೋಷಲಿಸ್ಟ್ ಟ್ರೇಡ್ ಯೂನಿಯನ್ ನಾಯಕರಲ್ಲಿ ಮಂಗಳೂರಿನ ಡಾ॥ ಎ. ಸಂಜೀವನಾಥ್ ಮತ್ತು ಬೆಂಗಳೂರಿನ ಎಸ್. ವೆಂಕಟರಾಮ್ ಹಾಗೂ ಟಿ. ಐ. ಮಾಧವನ್ ಮೊದಲಾದವರು ಪ್ರಮುಖರು. ಇವರಲ್ಲಿ ಡಾ॥ ಸಂಜೀವನಾಥರು ಈಗ ಟ್ರೇಡ್ ಯೂನಿಯನ್ ರಂಗವನ್ನು ತೊರೆದಿದ್ದರೂ, ಸುಮಾರು ೧೯೪೫–೪೬ರಿಂದ ೧೯೫೬ರ ತನಕ ಮಂಗಳೂರಿನಲ್ಲಿ ಅವರು ಹಲವು ಚಿಕ್ಕಪುಟ್ಟ ಕಾರ್ಮಿಕ ವಿಭಾಗಗಳನ್ನು ಸಂಘಟಿಸಿ, ಎ.ಐ.ಟಿ.ಯು.ಸಿ.ಗೆ ಒಬ್ಬ ಪ್ರತಿಸ್ಪರ್ಧಿಯಾಗಿದ್ದರು. ಇವರೊಂದಿಗೆ ಎ. ಬಾಲಪ್ಪ, ಸಿ. ಗೋವಿಂದನ್, ಎಂ. ಮೋಹನ್ ಶೆಟ್ಟಿ ಮೊದಲಾದವರೂ ಇದ್ದರು.

ರಾಜ್ಯದ ಪ್ರಮುಖ ಐ.ಎನ್.ಟಿ.ಯು.ಸಿ. ನಾಯಕರಾದ ಡಿ. ವೆಂಕಟೇಶ್, ಮಾಜಿ ಸಚಿವ ಕೆ. ಶ್ರೀರಾಮುಲು, ಎನ್. ಕೇಶವ, ಈಗಿನ ಸಚಿವ ಅಜೀಜ್ ಶೇಟ್ ಮೊದಲಾದವರು ಪ್ರಸಿದ್ಧಿಗೆ ಬಂದುದು ಕೂಡ ಈ ಅವಧಿಯಲ್ಲೇ.

**ಸರಕಾರದ ಗದಾ ಪ್ರಹಾರ**

ಈ ಟ್ರೇಡ್ ಯೂನಿಯನ್ ಸ್ಪರ್ಧೆಗೆ ಸರಕಾರವೂ ಪ್ರೋತ್ಸಾಹ ನೀಡಿತು. ಐ.ಎನ್.ಟಿ.ಯು.ಸಿ. ಯೂನಿಯನ್ನುಗಳಿಗೆ ಹೆಚ್ಚಿನ ಅನುಕೂಲತೆಗಳು ದೊರೆತವು. ಇದಲ್ಲದೆ, ೧೯೪೮ರಲ್ಲಿ ಕಮ್ಯೂನಿಸ್ಟ್ ಪಕ್ಷದ ಮೇಲೆ ಕೇಂದ್ರ ಸರಕಾರ ಗದಾಪ್ರಹಾರ ಮಾಡಿತು. ನೂರಾರು ಮಂದಿ ಕಮ್ಯೂನಿಸ್ಟ್ ಟ್ರೇಡ್ ಯೂನಿಯನ್ ನಾಯಕರನ್ನು ದೇಶಾದ್ಯಂತ ಬಂಧಿಸಲಾಯಿತು. ಕರ್ನಾಟಕದಲ್ಲಿ ಕೂಡ ಟ್ರೇಡ್ ಯೂನಿಯನ್ ರಂಗದಲ್ಲಿ ದುಡಿಯುತ್ತಿದ್ದ ಅನೇಕ ನಾಯಕರು ಮತ್ತು ಕಾರ್ಯಕರ್ತರು ಬಂಧಿಸಲ್ಪಟ್ಟರು. ಮಂಗಳೂರಿನಲ್ಲಿ ಬಿ. ಲಿಂಗಪ್ಪ ಸುವರ್ಣ, ಶಾಂತಾರಾಮ ಪೈ, ಕಕ್ಕಿಲ್ಲಾಯ, ಹೊಳ್ಳ, ಕೃಷ್ಣಶೆಟ್ಟಿ, ಮೋನಪ್ಪ ಶೆಟ್ಟಿ ಮೊದಲಾದ ಪ್ರಮುಖ ನಾಯಕರು, ಕೆಲ ಕಾಲ ಭೂಗತರಾಗಿದ್ದರೂ ಕೊನೆಗೆ ಪೊಲೀಸ್ ಬಲೆಗೆ ಸಿಲುಕಿದರು. ಮೈಸೂರಿನಲ್ಲಿ ಎನ್. ಸಿ. ರಣನವರೆ, ಮರಿದಾಸ್, ಎ. ಎನ್. ಸಿಂಗ್, ಎಂ. ಎಸ್. ರಾಮರಾವ್, ವೈ. ಆರ್. ಸತ್ಯ, ನರಸಿಂಹನ್, ಸೋಮಸುಂದರ ಶರ್ಮ, ಡಿ. ಎಸ್. ಶ್ರೀರಾಮುಲು, ಮೊನ್ನಯ್ಯ, ಡಿ. ಆರ್. ಕೃಷ್ಣಮೂರ್ತಿ ಮುಂತಾದವರಿಗೂ ಇದೇ ಗತಿ ಒದಗಿತು. ಆದರೆ, ಅನೇಕ ಮಧ್ಯಮ ಕಾರ್ಯಕರ್ತರು ಮತ್ತು ಕೃಷ್ಣನ್, ಸೋನ್ಸ್ ಮೊದಲಾದ ಒಂದಿಬ್ಬರು ನಾಯಕರು ಕೊನೆ ತನಕ ಭೂಗತರಾಗಿಯೇ ಉಳಿದು, ಈ ದಬ್ಬಾಳಿಕೆಯಿಂದ ಟ್ರೇಡ್ ಯೂನಿಯನ್ ಚಳವಳಿ ಸಂಪೂರ್ಣ ನಶಿಸದಂತೆ ನೋಡಿಕೊಂಡರು.

ಭೂಗತರಾಗಿದ್ದ ಈ ಕಾರ್ಯಕರ್ತರಿಗೆ ರಕ್ಷಣೆ ನೀಡಿದ ಬಡ ಕಾರ್ಮಿಕ ಕುಟುಂಬಗಳು ಅಂದು ತೋರಿಸಿದ ಧೈರ್ಯ ಮತ್ತು ನಿಷ್ಠೆ ಅಸಾಮಾನ್ಯ. ಅಂದಿನ ದಬ್ಬಾಳಿಕೆ ಅಷ್ಟೊಂದು ಕಠಿಣವಾಗಿತ್ತು. ಟ್ರೇಡ್ ಯೂನಿಯನ್ ಆಫೀಸುಗಳ ಮತ್ತು ಕಾರ್ಮಿಕ ಕುಟುಂಬಗಳ ಮೇಲೆ ಆಗಾಗ ಅನಿರೀಕ್ಷಿತ ಪೊಲೀಸ್ ದಾಳಿಗಳು ಹಾಗೂ ಕೈಗೆ ಸಿಕ್ಕಿದ ಕಾರ್ಯಕರ್ತರ ಮೇಲೆ ಚಿತ್ರಹಿಂಸಾ ಪ್ರಯೋಗಗಳು ಅಂದು ತೀರ ಸಾಮಾನ್ಯವಾಗಿದ್ದವು. ಮಂಗಳೂರಿನಲ್ಲಿ ಹೊಳ್ಳರನ್ನು ಬಿಡಿಸಿದ ಮಂಜೇಶ್ವರ ಘಟನೆಯ ನಂತರವಂತೂ ದಬ್ಬಾಳಿಕೆ ಮಿತಿಮೀರಿತು. ಅನೇಕ ಹಂಚಿನ ಕಾರ್ಮಿಕರ ಕುಟುಂಬಗಳಿದ್ದ ಬೋಳಾರದ ಮುಳಿಹಿತ್ಲು ಎಂಬ ನಿವೇಶನವನ್ನೇ ಪೊಲೀಸರು ಪುಡಿ ಪುಡಿ ಮಾಡಿದರು.

**ಅಯಶಸ್ವೀ ಮುಷ್ಕರಗಳು**

ಈ ಅವಧಿಯಲ್ಲಿ ಸೋಷಲಿಸ್ಟ್ ಪಕ್ಷದ ದಿವಂಗತ ಡಿ'ಮೆಲ್ಲೋರವರ ನೇತೃತ್ವದಲ್ಲಿ (ಅವರಾಗ ಮುಂಬಯಿಯಿಂದ ಗಡೀಪಾರು ಮಾಡಲ್ಪಟ್ಟು ಮಂಗಳೂರಿನಲ್ಲಿದ್ದರು) ಮಂಗಳೂರಿನಲ್ಲಿ ಮೋಟಾರ್ ಕೆಲಸಗಾರರ ಸಂಘಟನೆಯೊಂದು ಹುಟ್ಟಿತು. ಈಗಿನ ಕೇಂದ್ರ ಕೈಗಾರಿಕಾ ಸಚಿವ ಜಾರ್ಜ್ ಫರ್ನಾಂಡಿಸ್‌ರವರು ಟ್ರೇಡ್ ಯೂನಿಯನ್ ಚಳವಳಿಯಲ್ಲಿ ತಮ್ಮ ಪ್ರಥಮ ಶಿಕ್ಷಣ ಪಡೆದುದು ಈ ಯೂನಿಯನ್ನಿನಲ್ಲಿ, ಡಿ'ಮೆಲ್ಲೋರವರ ಶಿಷ್ಯರಾಗಿ. ೧೯೫೦ರಲ್ಲಿ ಈ ಸಂಘ ಮೋಟಾರ್ ಕೆಲಸಗಾರರ ಮುಷ್ಕರಕ್ಕೆ ಕರೆ ನೀಡಿತು. ಡಿ'ಮೆಲ್ಲೋರವರು ತಕ್ಷಣ ಬಂಧಿಸಲ್ಪಟ್ಟರು. ಆಗ ದಿವಂಗತ ಗಣೇಶ ಶೆಟ್ಟರ ಅಧ್ಯಕ್ಷತೆಯಲ್ಲಿ ಲಾರಿ ಚಾಲಕರ ಇನ್ನೊಂದು ಸ್ವತಂತ್ರ ಸಂಘವೂ ಮಂಗಳೂರಿನಲ್ಲಿ ಅಸ್ತಿತ್ವದಲ್ಲಿತ್ತು. ಇದರಲ್ಲಿ ಒಂದಿಬ್ಬರು ಮಂದಿ ಕಮ್ಯೂನಿಸ್ಟ್ ಕಾರ್ಯಕರ್ತರೂ ಇದ್ದರು. ಈ ಸಂದರ್ಭದಲ್ಲಿ ಡಿ'ಮೆಲ್ಲೋರವರ ಬಂಧನದಿಂದ ನಾಯಕಹೀನರಾಗಿದ್ದ ಮೋಟಾರ್ ಕೆಲಸಗಾರರಿಗೆ ಈ ಯೂನಿಯನ್ ಪೂರ್ಣ ಬೆಂಬಲ ನೀಡಿ, ಮುಷ್ಕರದ ನೇತೃತ್ವ ವಹಿಸಿತು. ಒಂದು ವಾರದ ಕಾಲ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮೋಟಾರು ಮತ್ತು ಲಾರಿ ಸಂಚಾರ ಸಂಪೂರ್ಣ ಸ್ತಬ್ಧವಾಯಿತು. ಆದರೆ, ಅಂದಿನ ಪರಿಸ್ಥಿತಿಯಲ್ಲಿ ಮುಷ್ಕರವನ್ನು ಮತ್ತೂ ಮುಂದುವರಿಸಲು ಕಷ್ಟವಾದುದರಿಂದ, ಒಂದು ವಾರದ ನಂತರ ಸಂಧಾನದ ಮೂಲಕ ಮುಷ್ಕರವನ್ನು ಹಿಂದೆಗೆಯಲಾಯಿತು.

೧೯೫೦ರಲ್ಲಿ ಬೆಂಗಳೂರಿನ ಎಚ್.ಎ.ಎಲ್.ನಲ್ಲಿ ಕೂಡ ಒಂದು ಮುಷ್ಕರ ನಡೆಯಿತು. ಆಗ ಎಚ್.ಎ.ಎಲ್. ಯೂನಿಯನ್ ಕಾರ್ಯದರ್ಶಿಗಳಾಗಿದ್ದ ಎಂ. ಬಿ. ಸಿಂಗ್‌ರವರನ್ನು ಕೆಲಸದಿಂದ ವಜಾ ಮಾಡಿದುದನ್ನು ಪ್ರತಿಭಟಿಸಿ ಮತ್ತು ಬೋನಸ್ ಬೇಡಿಕೆಯನ್ನಿಟ್ಟು ಈ ಮುಷ್ಕರವನ್ನು ಹೂಡಲಾಗಿತ್ತು. ಈ ಮುಷ್ಕರದಲ್ಲಿ ಯೂನಿಯನ್ನಿನ ಕಮ್ಯೂನಿಸ್ಟ್ ಕಾರ್ಯಕರ್ತರು ಶಕ್ತಿಮೀರಿ ದುಡಿದಿದ್ದರೂ, ಕಂಪೆನಿ ದಬ್ಬಾಳಿಕೆಯಿಂದ ಮುಷ್ಕರ ಮುರಿದುಹೋಗಿ, ಯೂನಿಯನ್ನೇ ಕೊನೆಗೆ ಕಂಪೆನಿಯ ಕೈಗೊಂಬೆ ಯೂನಿಯನ್ನಾಗಿ ಪರಿವರ್ತನೆ ಹೊಂದಿತು.

**ಪುನರ್ಸಂಘಟನೆಯ ಕಾಲ**

೧೯೫೨ರ ಮೊದಲ ಸಾರ್ವತ್ರಿಕ ಚುನಾವಣೆಗಳಿಗೆ ಪೂರ್ವಭಾವಿಯಾಗಿ, ೧೯೫೧ರ ಅಂತ್ಯದಲ್ಲಿ ಕಮ್ಯೂನಿಸ್ಟ್ ಪಕ್ಷದ ಮೇಲಿನ ನಿರ್ಬಂಧಗಳನ್ನು ಸರಕಾರ ಹಿಂದೆಗೆಯಿತು. ಬಂಧಿತ ಕಮ್ಯೂನಿಸ್ಟ್ ಮತ್ತು ಕಾರ್ಮಿಕ ನಾಯಕರೆಲ್ಲ ಬಿಡುಗಡೆಯಾದರು. ಇದರಿಂದಾಗಿ, ಸ್ಥಗಿತವಾಗಿದ್ದ ಟ್ರೇಡ್ ಯೂನಿಯನ್ ಚಳವಳಿ ಪುನಃ ಚಿಗುರಿತು. ಹಲವು ಹೊಸ ಟ್ರೇಡ್ ಯೂನಿಯನ್ನುಗಳು ಸ್ಥಾಪನೆಯಾದವು. ಮುರಿದ ಯೂನಿಯನ್ನುಗಳು ಪುನರ್‌ಸಂಘಟಿಸಲ್ಪಟ್ಟವು. ಹೊಸ ಹೋರಾಟಗಳು ಆರಂಭವಾದವು. ೧೯೫೨ರ ಏಪ್ರಿಲ್‌ನಲ್ಲಿ ಮಂಗಳೂರಿನ ಬಂದರ ಕೆಲಸಗಾರರು ಕೂಲಿ ದರದ ಏರಿಕೆಗೋಸ್ಕರ ಮುಷ್ಕರ ಹೂಡಿದರು. ಆದರೆ, ಸುಮಾರು ೨೫ ದಿನಗಳ ಕಾಲ ಈ ಮುಷ್ಕರ ಯಶಸ್ವಿಯಾಗಿ ನಡೆದರೂ, ಬಂದರ ಕೆಲಸ ಹರಡಿದ್ದ ಸ್ಥಳದ ವೈಶಾಲ್ಯ, ಕೆಲಸದಲ್ಲಿ ನೈಪುಣ್ಯದ ಅನವಶ್ಯಕತೆ ಮತ್ತು ಹೊರಗಿನಿಂದ ಕೂಲಿಯಾಳುಗಳನ್ನು ಸುಲಭವಾಗಿ ತರುವ ಸಾಧ್ಯತೆ – ಇವೇ ಮುಂತಾದ ಕೆಲವು ವಿಶಿಷ್ಟ ಕಾರಣಗಳಿಂದಾಗಿ ಮುಷ್ಕರ ಕೊನೆಗೆ ಸೋಲಿನಲ್ಲಿ ಪರ್ಯವಸಾನವಾಯಿತು. ೧೯೫೩ರಲ್ಲಿ ಗೇರುಬೀಜ ಕಾರ್ಮಿಕರು ಒಂದು ದೊಡ್ಡ ಸತ್ಯಾಗ್ರಹ ಚಳವಳಿ ನಡೆಸಿದರು. ಇದರ ಅಂಗವಾಗಿ ಪದಂಗಡಿಯಲ್ಲಿರುವ ಮಲ್ಯ ಎಂಡ್ ಸನ್ಸ್ ಗೇರುಬೀಜ ಕಾರ್ಖಾನೆಯ ಮುಂದೆ ಸ್ತ್ರೀ ಕಾರ್ಮಿಕರು ಮೊದಲು ತಂಡ ತಂಡವಾಗಿ ಸರದಿ ಪ್ರಕಾರದ ಅನ್ನ ಸತ್ಯಾಗ್ರಹ ಹೂಡಿದರು. ಈ ಹೋರಾಟದ ಕೊನೆಯ ಹಂತವಾಗಿ ಕಂಪೆನಿಯ ಡೊಂಗರಕೇರಿ ಕಾರ್ಖಾನೆಯ ಮುಂದೆ ಶಾಂತಾರಾಮ ಪೈಯವರು ಅನಿರ್ದಿಷ್ಟ ಉಪವಾಸ ಕೈಗೊಂಡರು. ಪೈಯವರ ಅನ್ನ ಸತ್ಯಾಗ್ರಹ ಒಂದು ವಾರ ದಾಟಿದ ಮೇಲೆ ಈ ವಿವಾದ ಪರಿಹಾರವಾಯಿತು. ಇದೇ ವರ್ಷ ಹಂಚಿನ ಕಾರ್ಮಿಕರ ಒಂದು ಮುಷ್ಕರವೂ ನಡೆಯಿತು.

ಈ ಮುಷ್ಕರದ ಕಾಲದಲ್ಲಿ ಅದನ್ನು ಮುರಿಯುವ ಸಲುವಾಗಿ ಹಂಚಿನ ಕೆಲಸಗಾರರ ಸಂಘದ ಅಧ್ಯಕ್ಷ ಕೃಷ್ಣ ಶೆಟ್ಟಿ, ಆಗ ಅದರ ಕಾರ್ಯದರ್ಶಿಗಳಾಗಿದ್ದ ಬಿ. ಕೊರಗಪ್ಪ ರೈ ಹಾಗೂ ಶಾಂತಾರಾಮ ಪೈ, ವಾಮನ ಕೊಡಿಯಾಲ್ ಬೈಲ್, ಸಿಂಪ್ಸನ್ ಸೋನ್ಸ್ ಮೊದಲಾದ ಏಳೆಂಟು ನಾಯಕರು ಮತ್ತು ಕಾರ್ಯಕರ್ತರ ಮೇಲೆ ಲೋಕನಾಥ ಶೆಟ್ಟಿ ಎಂಬುವರೊಬ್ಬರ ಮೇಲೆ ಕೊಲೆಯ ಸುಳ್ಳು ಆರೋಪ ಹೊರಿಸಲ್ಪಟ್ಟು, ಅವರನ್ನು ಬಂಧಿಸಲಾಗಿತ್ತು. ಮಾಲೀಕರ ಮತ್ತು ಪೊಲೀಸರ ಈ ತಂತ್ರ ತತ್ಕಾಲಕ್ಕೆ ಸಫಲವಾದರೂ, ನಂತರ ನಡೆದ ವಿಚಾರಣೆಯಲ್ಲಿ ಮೊಕದ್ದಮೆ ನಿರಾಧಾರವಾದುದೆಂದು ಆರೋಪಿಗಳನ್ನೆಲ್ಲ ಬಿಡುಗಡೆ ಮಾಡಲಾಯಿತು. ಈ ಖಟ್ಲೆಯಲ್ಲಿ ಆರೋಪಿಗಳ ಪರವಾಗಿ ವಾದಿಸಿದ ವಕೀಲರ ಪೈಕಿ ಈಗಿನ ಸುಪ್ರೀಂ ಕೋರ್ಟು ನ್ಯಾಯಾಧೀಶ ವಿ. ಆರ್. ಕೃಷ್ಣ ಅಯ್ಯರ್ ಅವರೂ ಒಬ್ಬರಾಗಿದ್ದರು.

**ಹೊಸ ಯೂನಿಯನ್ನುಗಳು**

ಬೆಂಗಳೂರಿನಲ್ಲಿಯೂ ಈ ಅವಧಿಯಲ್ಲಿ ಟ್ರೇಡ್ ಯೂನಿಯನ್ ಚಳವಳಿ ಮುನ್ನಡೆಯಿತು. ೧೯೫೧ರಲ್ಲಿ ಮುತ್ತುಸ್ವಾಮಿ ಅಯ್ಯರ್‌ರವರ ಅಧ್ಯಕ್ಷತೆಯಲ್ಲಿ ಎಚ್.ಎ.ಎಲ್. ಯೂನಿಯನ್ ಪುನರ್‌ಸಂಘಟಿಸಲ್ಪಟ್ಟು, ೧೯೫೪ರಲ್ಲಿ ಯೂನಿಯನ್ನಿಗೆ ನಡೆದ ಚುನಾವಣೆಗಳಲ್ಲಿ ಹೊರಗಿನವರಿಗೆ ಕಾದಿರಿಸಲಾಗಿದ್ದ ಸ್ಥಾನಗಳಿಗೆ ಸ್ಪರ್ಧಿಸಿದ್ದ ಆನಂದನ್ ನಂಬಿಯಾರ್, ಎಂ. ಸಿ. ನರಸಿಂಹನ್ ಮತ್ತು ಎಂ. ಎಸ್. ಕೃಷ್ಣನ್ ಈ ಮೂವರು ಎ.ಐ.ಟಿ.ಯು.ಸಿ. ಅಭ್ಯರ್ಥಿಗಳೂ ವಿಜಯ ಹೊಂದಿದರು. ಐ.ಎನ್.ಟಿ.ಯು.ಸಿ.ಯ ನಾಲ್ವರು ಅಭ್ಯರ್ಥಿಗಳೂ ಸೋತರು.

ಕಾವ್ಯಲೋಕ

# ಕಣ್ಣ ಕಡಲು

ನನಗೀಗ ಖಾತ್ರಿಯಾಗುತ್ತಿದೆ
ನಿನ್ನಿಂದ ದೂರ ಉಳಿದುಬಿಡುವದು
ಅಥವಾ ಎದೆಯೊಳಿರಿಸಿಕೊಂಡೂ
ನೋವ ನಟಿಸುವದು

ದಟ್ಟವಿದ್ದ ನಿನ್ನ ಮುಖ ಭಾವ
ನುಡಿ ಚಿತ್ರ
ಈಗೀಗ ಎಲ್ಲ ಅಸ್ಪಷ್ಟ !
ಬೇಕಂತಲೇ ಹಾಗೆ ಮಬ್ಬಾಗುತ್ತಿರಬಹುದು
ಕಣ್ಣ ಕನ್ನಡಿ

ಪ್ರತಿ ರಾತ್ರಿಯೂ ಈಗ
ಎಲ್ಲ ರಾತ್ರಿಗಳಂತಲ್ಲ ಸಖಿ; ಅವು
ಸಾವು ನಡೆಸುವ ತಾಲೀಮು !

ನಯವಾಗಿ ಕಣ್ಣೀರು ಒರೆಸಲೆಂದು
ಎಲ್ಲಿಂದಲೋ ತಂದ ಹಕ್ಕಿಯ ಗರಿಯೊಂದು
ಮುರುಟಿ ಅಳುತ್ತಿದೆ
ನಿನ್ನ ಕನಸುಗಳ ಗೆಜ್ಜೆ ಕಟ್ಟಿ
ಹಗಲಿರುಳು ಕುಣಿದು ದಣಿದಿದ್ದೇನೆ
ಸಖಿ

ಬದುಕಿಡೀ ನಿನ್ನ ನೆನಪಿನಮೃತವ ಕುಡಿದು
ಮತ್ತೆ ಹುಟ್ಟಿದ್ದೇನೆ ಮರುಬೆಳಗಿನಂತೆ

ನಿನ್ನ ನೆನಪುಗಳಿಗೆ ಮರಳುವದೆಂದರೆ
ಬೇರೇನಿಲ್ಲ ಸಖಿ
ಮತ್ತೆ ಮತ್ತೆ ಮಗುವಾಗುತ್ತ ಹೋಗುವದು !

ನೆನಪು ಕಣ್ಣೆವೆ ತುಂಬಿದಷ್ಟೂ ತುಳುಕುವ
ಕಂಬನಿಯ ಅರ್ಥೈಸುವ ಬಗೆ ಹೇಗೆ?
ಕೊಳಲ ತಿದಿಯೊತ್ತುವ ಕೊರಳ ಸೆರೆಯಲ್ಲೂ
ಈಗ ನಿರ್ದಯಿ ಕಾಲ ಸೋಗು ಹಾಕಿ ಕೂತಿರುವಾಗ
ಜೀವಮಿಡಿತದ ಹಾಡ ನುಡಿಸುವ ಬಗೆ ಹೇಳು
ಸಖಿ
ಪುಟ್ಟ ಮಗುವ ನಗು, ಪುಟಿವ ಕೇಕೆಗಳಲ್ಲೂ
ಹಾವು ಬುಸುಗುಡುವ ಸದ್ದು

ಮುರಳಿಯ ಗಾನವೂ ಕಿವಿಗೆ
ಚೀತ್ಕಾರವಾಗಿ ಕೇಳಿಸುತ್ತಿರುವ ಈ ಹೊತ್ತು
ನಿದ್ದೆ ಬಿಟ್ಟು ಎದ್ದಿದ್ದೇನೆ
ಸಖಿ
ಈ ಕಣ್ಣ ಕಡಲ ದಾಟಿಸು...

**ಪ್ರವೀಣಕುಮಾರ ದೈವಜ್ಞಾಚಾರ್ಯ**
ಶಿಕ್ಷಕರು, ನಂ. ೪೧೫–ಎ/೧೧, ೧೦ನೇ ವಾರ್ಡ್
ಮಹಾವೀರ ನಗರ, ಅಂಚೆ : ಹೂವಿನಹಡಗಲಿ – ೫೮೩ ೨೧೯, ಬಳ್ಳಾರಿ ಜಿಲ್ಲೆ



ನಾಲ್ಕನೇ ಸ್ಥಾನಕ್ಕೆ ಸೋಷಲಿಸ್ಟ್ ಪಕ್ಷದಿಂದ ಸ್ಪರ್ಧಿಸಿದ್ದ ಕಣ್ಣನ್ ಮತ್ತು ಸಿ. ಜಿ. ಕೆ. ರೆಡ್ಡಿಯವರ ಪೈಕಿ, ರೆಡ್ಡಿಯವರೊಬ್ಬರು ಗೆದ್ದರು. ೧೯೫೧–೫೨ರಲ್ಲಿ ಎ. ಎನ್. ಸಿಂಗ್‌ರವರು ಐ.ಟಿ.ಐ. ಕಾರ್ಮಿಕರನ್ನು ಸಂಘಟಿಸಿದರು. ಇದೇ ವರ್ಷ, ಕೃಷ್ಣನ್ ಮತ್ತು ಮರಿದಾಸ್‌ರವರ ನೇತೃತ್ವದಲ್ಲಿ ಯಶವಂತಪುರದಲ್ಲಿ ಪ್ಲೈವುಡ್ ಕೆಲಸಗಾರರ ಸಂಘ ಅಸ್ತಿತ್ವಕ್ಕೆ ಬಂತು. ಈ ಸಂಘಟನೆ ಅಂದಿನಿಂದ ಇಂದಿಗೂ ಅಚಲವಾಗಿ ಕಮ್ಯೂನಿಸ್ಟ್ ನೇತೃತ್ವದಲ್ಲಿಯೇ ನಿಂತಿದೆ. ಆದರೆ ಐಟಿಐ ಯೂನಿಯನ್ನಿನ ನಾಯಕತ್ವ ಮಾತ್ರ ಕೆಲ ಸಮಯದ ನಂತರ ಕಣ್ಣನ್‌ರವರ ಕೈಗೆ ಹಸ್ತಾಂತರವಾಗಿ, ಈಗ ಮೈಕೆಲ್ ಫರ್ನಾಂಡಿಸರಿಗೆ ಹೋಗಿದೆ. ೧೯೫೧ರಲ್ಲಿ ಎಂ. ಎಸ್. ರಾಮರಾಯರ ಅಧ್ಯಕ್ಷತೆಯಲ್ಲಿ ಬೆಂಗಳೂರು ಎಂಜಿನಿಯರಿಂಗ್ ಕೆಲಸಗಾರರ ಒಂದು ಸಂಘವೂ ರಚಿಸಲ್ಪಟ್ಟಿತು.

**ಸಿಲ್ಕ್ ಕಾರ್ಮಿಕರು**

ಈ ಅವಧಿಯಲ್ಲಿ ಸ್ಥಾಪನೆಯಾದ ಇನ್ನೊಂದು ಪ್ರಬಲ ಕಾರ್ಮಿಕ ಸಂಘಟನೆ ಬೆಂಗಳೂರು ಸಿಲ್ಕ್ ಕಾರ್ಮಿಕರ ಸಂಘ. ಬೆಂಗಳೂರಿನಲ್ಲಿ ಆಗ ಸುಮಾರು ೧೦೦–೧೫೦ ದೊಡ್ಡ ಮತ್ತು ಸಣ್ಣ ಸಿಲ್ಕ್ ಬಟ್ಟೆ ಕಾರ್ಖಾನೆಗಳಿದ್ದವು. ಅತ್ಯಂತ ಶೋಷಿತ ವಿಭಾಗಕ್ಕೆ ಸೇರಿದ್ದ ಈ ಕಾರ್ಮಿಕರನ್ನು ಸಂಘಟಿಸಲು ಕೆ. ಎಲ್. ರಾಮಕೃಷ್ಣರಾವ್ ಎಂಬುವರೊಬ್ಬರು ೧೯೫೦ಕ್ಕೆ ಹಿಂದೆಯೇ ಪ್ರಯತ್ನಿಸಿದ್ದರು. ಆದರೆ, ಮಾಲೀಕರ ಗೂಂಡಾಗಿರಿಯಿಂದಾಗಿ ಆ ಯೂನಿಯನ್ ಮುರಿದುಬಿತ್ತು. ೧೯೫೧–೫೨ರಲ್ಲಿ ಕಮ್ಯೂನಿಸ್ಟ್ ಕಾರ್ಯಕರ್ತರು ಈ ಕಾರ್ಮಿಕರನ್ನು ಪುನಃ ಸಂಘಟಿಸತೊಡಗಿದರು. ೧೯೫೧ರಲ್ಲಿ ಶ್ರೀನಿವಾಸ ಸಿಲ್ಕ್ ಮಿಲ್ ಲೇಬರ್ ಅಸೋಸಿಯೇಷನ್ ಮೊದಲು ಸ್ಥಾಪಿಸಲ್ಪಟ್ಟಿತು. ೧೯೫೪ರಲ್ಲಿ ಅಂದಿನ ಅತಿ ದೊಡ್ಡ ಸಿಲ್ಕ್ ಕಾರ್ಖಾನೆಯಾಗಿದ್ದ ಅರಸಪ್ಪ ಕಾರ್ಖಾನೆಯ ಕಾರ್ಮಿಕರು ಯೂನಿಯನ್ ಸೇರಿದ ಮೇಲೆ ಈ ಸಂಘಟನೆ ಬಲವಾಗಿ ಬೆಳೆದು "ಬೆಂಗಳೂರು ಜಿಲ್ಲಾ ಸಿಲ್ಕ್ ಕಾರ್ಮಿಕರ ಸಂಘ"ವಾಗಿ ಪರಿವರ್ತಿಸಲ್ಪಟ್ಟಿತು. ಎಂ. ಎಸ್. ಕೃಷ್ಣನ್‌ರವರು ಈ ಸಂಘದ ಅಧ್ಯಕ್ಷರಾಗಿಯೂ, ಈಗಿನ ಮಾರ್ಕ್ಸಿಸ್ಟ್ ನಾಯಕ ಎಸ್. ಸೂರ್ಯನಾರಾಯಣ ರಾಯರು ಇದರ ಉಪಾಧ್ಯಕ್ಷರಾಗಿಯೂ ಇದ್ದರು. ಇಂದು ಕಮ್ಯೂನಿಸ್ಟ್ ಪಕ್ಷದ ಬೆಂಗಳೂರು ಜಿಲ್ಲಾ ಮಂಡಲಿ ಕಾರ್ಯದರ್ಶಿಗಳಾಗಿರುವ ಎಂ. ಸಿ. ವೆಂಕಟರಾಮುರವರೂ ಈ ಯೂನಿಯನ್ನಿನಲ್ಲೇ ತಮ್ಮ ರಾಜಕೀಯ ತರಬೇತಿ ಪಡೆದಿದ್ದರು. ಅವರು ಮೊದಲು ಸ್ಥಾಪಿತವಾಗಿದ್ದ ಶ್ರೀನಿವಾಸ ಯೂನಿಯನ್ನಿನ ಖಜಾಂಚಿಗಳಾಗಿದ್ದರು. ಸಿಲ್ಕ್ ಕಾರ್ಮಿಕರ ಈ ಸಂಘ ಹುಟ್ಟಿನಿಂದಲೇ ಹೋರಾಟಗಳಲ್ಲಿ ಬೆಳೆದು, ಹೋರಾಟಗಳಲ್ಲೇ ತಾತ್ಕಾಲಿಕವಾಗಿ ಅಂತ್ಯಗೊಂಡು, ೧೯೬೭ರಲ್ಲಿ ವೆಂಕಟರಾಮುರವರ ಪ್ರಯತ್ನಗಳಿಂದ ಪುನಃ ಚಿಗುರಿದ ಒಂದು ಸಂಘಟನೆ.

**ಧೀರ ಸಮರ**

ಈ ಯೂನಿಯನ್ನಿನ ನೇತೃತ್ವದಲ್ಲಿ ಅರಸಪ್ಪ ಕಾರ್ಖಾನೆಯ ಕಾರ್ಮಿಕರು ೧೯೫೫ರಲ್ಲಿ ೨೪ ದಿನಗಳ ಸಾಮೂಹಿಕ ಸತ್ಯಾಗ್ರಹ ನಡೆಸಿದರು. ಅದೇ ವರ್ಷ ಶ್ರೀನಿವಾಸ ಸಿಲ್ಕ್ ಮಿಲ್ಲಿನಲ್ಲಿಯೂ ೧೩೦ ಕಾರ್ಮಿಕರನ್ನು ವಜಾ ಮಾಡಿದುದರ ವಿರುದ್ಧ ಇನ್ನೊಂದು ದೊಡ್ಡ ಹೋರಾಟ ನಡೆಯಿತು. ೧೯೫೬ರಲ್ಲಿ ಸಿಲ್ಕ್ ಮಾಲೀಕರು ಕೆಲವು ಕಾರ್ಖಾನೆಗಳನ್ನು ಕಾನೂನುಬಾಹಿರವಾಗಿ ಮುಚ್ಚಲು ಪ್ರಯತ್ನಿಸಿದರು. ಇದರ ವಿರುದ್ಧ ಜೂನ್ ೧, ೧೯೫೬ರಂದು ವಿಧಾನಸೌಧದ ಮುಂದೆ ಧರಣಿ ಸತ್ಯಾಗ್ರಹ ನಡೆಸಲು ನಿರ್ಧರಿಸಲಾಯಿತು. ೧ನೇ ತಾರೀಕಿನಂದು ಮಧ್ಯಾಹ್ನ ೩ ಗಂಟೆಗೆ ಸಂಘದ ಆಫೀಸಿನಿಂದ ದೊಡ್ಡ ಮೆರವಣಿಗೆ ಹೊರಟಿತು. ಇದರಲ್ಲಿ ನೂರಾರು ಮಂದಿ ಮಹಿಳಾ ಕಾರ್ಮಿಕರೂ ಇದ್ದರು. ಆದರೆ ಮೆರವಣಿಗೆ ಕೆ. ಆರ್. ಸರ್ಕಲಿಗೆ ತಲಪುವಷ್ಟರಲ್ಲಿ ಪೊಲೀಸರು ಅದನ್ನು ಅಡ್ಡಗಟ್ಟಿ ಲಾಠಿಚಾರ್ಜ್ ಮಾಡಿದರು. ಕೃಷ್ಣನ್, ಸೂರ್ಯನಾರಾಯಣ ರಾವ್ ಮುಂತಾದ ನಾಯಕರ ಸಮೇತ ೮೦ ಮಂದಿಗೆ ಗಾಯವಾಯಿತು. ತರುವಾಯ ಮಹಿಳಾ ಕಾರ್ಮಿಕರ ಸಮೇತ ಕೆಲವು ಪ್ರಮುಖ ಕಾರ್ಯಕರ್ತರ ಅನ್ನ ಸತ್ಯಾಗ್ರಹದ ರೂಪದಲ್ಲಿ ಈ ಹೋರಾಟ ಮುಂದುವರಿದು, ೨೦.೬.೧೯೫೬ರಂದು ೧೫,೦೦೦ ಕಾರ್ಮಿಕರ ಬೃಹತ್ ಮತಪ್ರದರ್ಶನದಲ್ಲಿ ಯಶಸ್ವಿಯಾಗಿ ಮುಕ್ತಾಯವಾಯಿತು. ಈ ಪ್ರದರ್ಶನದಲ್ಲಿ ನಗರದ ಎಲ್ಲ ಹತ್ತಿ ಬಟ್ಟೆ ಗಿರಣಿಗಳ ಕಾರ್ಮಿಕರೂ ಭಾಗವಹಿಸಿದ್ದರು.

**ಇತರ ಹೋರಾಟಗಳು**

೧೯೫೨ರಲ್ಲಿ ಕೆ.ಜಿ.ಎಫ್.ನಲ್ಲಿ ಇನ್ನೊಂದು ವಿಧದ ಹೋರಾಟ ನಡೆಯಿತು. ಅದು ಚುನಾವಣೆಗಳ ಕಾಲ. ವಾಸನ್‌ರವರು ಕಮ್ಯೂನಿಸ್ಟ್ ಅಭ್ಯರ್ಥಿಯಾಗಿ ಕೆ.ಜಿ.ಎಫ್. ಕ್ಷೇತ್ರದಿಂದ ಸ್ಪರ್ಧಿಸಿದ್ದರು. ಆದುದರಿಂದ ಅವರ ಚುನಾವಣಾ ಕೆಲಸಕ್ಕೆ ತಡೆಯುಂಟುಮಾಡುವ ಉದ್ದೇಶದಿಂದ ಕೆಲವು ಯೂನಿಯನ್ ಕಾರ್ಯಕರ್ತರ ಮೇಲೆ ಗಣಿಯಲ್ಲಿ ಬೆಂಕಿ ಇಟ್ಟ ಸುಳ್ಳು ಆಪಾದನೆ ಹೊರಿಸಿ ಕ್ರಿಮಿನಲ್ ಮೊಕದ್ದಮೆ ಹೂಡಲಾಯಿತು. ಆದರೆ ವಿಚಾರಣೆಯಲ್ಲಿ ಕೇಸು ಬಿದ್ದುಹೋಯಿತು. ಈ ಪ್ರಕರಣದಲ್ಲಿ ಆರೋಪಿಗಳ ಪರವಾಗಿ ಬೆಂಗಳೂರಿನ ಪ್ರಸಿದ್ಧ ಪುರೋಗಾಮೀ ವಕೀಲರಾದ ಸಿ. ಬಿ. ಮೋಟಯ್ಯನವರು ವಾದಿಸಿದ್ದರು.

ಹೀಗೆ ಬೆಳೆಯುತ್ತಿದ್ದ ಈ ಟ್ರೇಡ್ ಯೂನಿಯನ್ ಚಳವಳಿಗೆ ಒಂದು ಕೇಂದ್ರೀಕೃತ ಸಂಘಟನಾ ಸ್ವರೂಪ ಕೊಡುವ ಉದ್ದೇಶದಿಂದ ೧೯೫೩ರಲ್ಲಿ ಮೈಸೂರು ಪ್ರದೇಶ ಟ್ರೇಡ್ ಯೂನಿಯನ್ ಕಾಂಗ್ರೆಸ್ ಸ್ಥಾಪಿಸಲ್ಪಟ್ಟಿತು.

ಇದೇ ಕಾಲಾವಧಿಯಲ್ಲಿ ಅಂದರೆ, ೧೯೫೫ರಲ್ಲಿ ಹುಬ್ಬಳ್ಳಿಯ ಹೋಟೆಲ್ ಕೆಲಸಗಾರರು ಎ. ಜೆ. ಮುಧೋಳರ ನಾಯಕತ್ವದಲ್ಲಿ ೬೦ ದಿನಗಳ ದೀರ್ಘ ಮುಷ್ಕರ ನಡೆಸಿ, ತಮ್ಮ ಕೆಲವು ಕೇಳಿಕೆಗಳನ್ನು ಪಡೆಯುವುದರಲ್ಲಿ ಯಶಸ್ವಿಯಾದರು.

**ಏಕೀಕರಣ ಚಳವಳಿ**

ಈ ಕಾಲಾವಧಿ, ಕರ್ನಾಟಕದ ಏಕೀಕರಣಕ್ಕೆ ಚಳವಳಿ ನಡೆಯುತ್ತಿದ್ದ ಸಮಯವೂ ಆಗಿತ್ತು. ಕರ್ನಾಟಕದ ಕಾರ್ಮಿಕವರ್ಗ ಈ ಚಳವಳಿಯಲ್ಲಿಯೂ ಒಂದು ಮುಖ್ಯ ಪಾತ್ರ ವಹಿಸಿತ್ತು. ಮೈಸೂರು ಪ್ರದೇಶ ಕಾಂಗ್ರೆಸ್ಸಿನ ನಾಯಕರೇ ಆಗ ಏಕೀಕರಣದ ಬಗ್ಗೆ ಹಿಂದೆ ಮುಂದೆ ನೋಡುತ್ತಿದ್ದರು. ಆದಕಾರಣ ೧೯೫೩ರಲ್ಲಿ ಹುಬ್ಬಳ್ಳಿಯಲ್ಲಿ ನಡೆದ ಪ್ರದೇಶ ಕಾಂಗ್ರೆಸ್ ಸಮ್ಮೇಳನದ ಮುಂದೆ ಏಕೀಕರಣವನ್ನು ಒತ್ತಾಯಿಸಿ ಹುಬ್ಬಳ್ಳಿಯ ಕಾರ್ಮಿಕರು ಬಹಳ ದೊಡ್ಡ ಪ್ರದರ್ಶನ ಏರ್ಪಡಿಸಿದರು. ಇದನ್ನು ಸಂಘಟಿಸಿದ ಶ್ರೇಯಸ್ಸು ಮುಧೋಳರಿಗೆ ಸಲ್ಲಬೇಕು. ಪ್ರದರ್ಶನಕಾರರ ವಿರುದ್ಧ ಪೊಲೀಸರು ಲಾಠಿಚಾರ್ಜು ಮತ್ತು ಗೋಳಿಬಾರು ಮಾಡಿದುದರ ಪರಿಣಾಮವಾಗಿ ನೂರಾರು ಮಂದಿ ಗಾಯಗೊಂಡರು. ಕರ್ನಾಟಕ ಏಕೀಕರಣದ ಇತಿಹಾಸದಲ್ಲಿ ನಡೆದ ಚರಿತ್ರಾರ್ಹ ಘಟನೆಗಳಲ್ಲಿ ಇದೊಂದು. ಏಕೀಕರಣದ ಪರವಾಗಿ ಇಂತಹ ಕಾರ್ಮಿಕ ಪ್ರದರ್ಶನಗಳು ರಾಜ್ಯದ ಇತರ ಅನೇಕ ಕಡೆಗಳಲ್ಲೂ ನಡೆದವು.

ಏಕೀಕರಣಕ್ಕೆ ಪೂರ್ವಭಾವಿಯಾಗಿ ಅಕ್ಟೋಬರ್ ೧೯೫೬ರಲ್ಲಿ ಎ.ಐ.ಟಿ.ಯು.ಸಿ.ಗೆ ಸೇರಿದ ಕರ್ನಾಟಕದ ಎಲ್ಲ ಟ್ರೇಡ್ ಯೂನಿಯನ್ ಪ್ರತಿನಿಧಿಗಳ ಸಮ್ಮೇಳನವೊಂದು ಕೆ.ಜಿ.ಎಫ್.ನಲ್ಲಿ ನಡೆದು, ಕರ್ನಾಟಕ ಪ್ರದೇಶ ಟ್ರೇಡ್ ಯೂನಿಯನ್ ಕಾಂಗ್ರೆಸ್ ಸ್ಥಾಪಿಸಲ್ಪಟ್ಟಿತು. ಎಂ. ಸಿ. ನರಸಿಂಹನ್‌ರವರು ಇದರ ಮೊದಲ ಅಧ್ಯಕ್ಷರಾಗಿಯೂ, ಕೃಷ್ಣನ್‌ರವರು ಕಾರ್ಯದರ್ಶಿಯಾಗಿಯೂ ಆರಿಸಲ್ಪಟ್ಟರು.

*(ಮುಂದುವರಿಯುವುದು)*

ರಿಸರ್ವ್ ಬ್ಯಾಂಕ್ ಗವರ್ನರ್ ಹುದ್ದೆಯಲ್ಲಿ ಇನ್ನು ಮುಂದುವರಿಯದಿರಲು ರಘುರಾಮ್ ರಾಜನ್ ನಿರ್ಧರಿಸಿದ್ದಾರೆ. ಅವರ ಸ್ಥಾನ ಭರ್ತಿ ಮಾಡಲು ಹುಡುಕಾಟ ಪ್ರಾರಂಭವಾಗಿದೆ. ಮೋದಿ ಸರಕಾರ ಅಧಿಕಾರಕ್ಕೆ ಬಂದಾಗಿನಿಂದ ರಾಜನ್ ಒಂದು ಬಗೆಯ ಇರಸುಮುರಸು ಅನುಭವಿಸುತ್ತಲೇ ಇದ್ದಾರೆ. ನಮ್ಮ ದೇಶದ ಹಾಗೂ ವಿದೇಶಗಳ ಬಂಡವಾಳಶಾಹಿಗಳಿಗೆ ಪ್ರಿಯರಾಗಿರುವ ಈ ವ್ಯಕ್ತಿ ಪೂರ್ತಿಯಾಗಿ ಜನಪರವೇನಲ್ಲ. ಆದರೆ ಬ್ಯಾಂಕ್‌ನ ಸ್ವಾಯತ್ತತೆ ಎತ್ತಿ ಹಿಡಿಯುವ, ತನ್ನ ನಿರ್ಧಾರಗಳಿಗೆ ಬದ್ಧನಾಗಿರುವ ವ್ಯಕ್ತಿ. ಮೋದಿ ಸರಕಾರದ ನೀತಿಗಳಿಗೂ ಅವರ ನಿಲುವುಗಳಿಗೂ ಸಾಮ್ಯತೆ ಇರಲಿಲ್ಲ. ಮತ್ತೆ ಸ್ವತಂತ್ರವಾಗಿ ಆಲೋಚಿಸಿ, ನಿರ್ಧಾರ ಕೈಗೊಳ್ಳುವಂಥವರು ಭಾಜಪ ಸರಕಾರಕ್ಕೆ ಬೇಕೂ ಇಲ್ಲ. ಹೇಳಿದಂತೆ ಕೇಳುವವರು ಬೇಕು. ರಾಜನ್ ಹುದ್ದೆಯಲ್ಲಿ ಮುಂದುವರಿಯದಂತೆ ಮಾಡಿದ್ದು ಕೂಡ ಭಾಜಪ ರಾಜ್ಯಸಭಾ ಸದಸ್ಯ, ಆರೆಸ್ಸೆಸ್‌ನ ಸುಬ್ರಮಣ್ಯನ್ ಸ್ವಾಮಿ. ಈತನನ್ನು ಎತ್ತಿಕಟ್ಟಿದ್ದೂ ಮೋದಿ ಸರಕಾರವೆ ಎನ್ನುವುದರಲ್ಲಿ ಅನುಮಾನ ಇಲ್ಲ. ರಾಜನ್ ಹೇಳಿಕೇಳಿ ಐ.ಎಂ.ಎಫ್., ವರ್ಲ್ಡ್ ಬ್ಯಾಂಕ್‌ಗಳಲ್ಲಿ ತರಬೇತು ಪಡೆದಿರುವ ಅರ್ಥಶಾಸ್ತ್ರಿ ಹಾಗೂ ಷಿಕಾಗೋ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕ. ಮತ್ತೆ ಅಧ್ಯಾಪನಾವೃತ್ತಿಗೆ ಮರಳಲು ನಿರ್ಧರಿಸಿದ್ದಾರೆ. ಇವರನ್ನು ಕರೆತಂದವರು ಮಾಜಿ ಪ್ರಧಾನಿ ಮನಮೋಹನ ಸಿಂಗ್. – ಸಂ.



# ರಘುರಾಮ್ ರಾಜನ್ ನಮ್ಮ ಉದ್ಯಮಪತಿಗಳ ಮನ ಗೆದ್ದವರು

**ಕೆ. ಎಸ್. ಪಾರ್ಥಸಾರಥಿ**

ರಿಸರ್ವ್ ಬ್ಯಾಂಕ್ ಹಣಕಾಸು ನೀತಿಯನ್ನು ನಿರ್ವಹಿಸಿದರೆ, ಸರ್ಕಾರ ಆರ್ಥಿಕ ನೀತಿಯನ್ನು ನಿರೂಪಿಸುತ್ತದೆ. ಇವೆರಡನ್ನು ಒಬ್ಬರೇ ಮಾಡಿದರೆ ಪರಿಸ್ಥಿತಿ ಹದಗೆಟ್ಟು ಹೋಗುತ್ತದೆ. ಆರ್ಥಿಕ ನೀತಿ ಚುನಾವಣೆ, ಮತದಾರರಿಗೆ ನೀಡುವ ವಾಗ್ದಾನಗಳು, ಉದ್ಯಮ ವಾಣಿಜ್ಯ ಕ್ಷೇತ್ರಗಳಿಗೆ ನೀಡುವ ಬೆಂಬಲ, ಕುಮ್ಮಕ್ಕು, ಮುಂತಾದುವುಗಳನ್ನು ಕುರಿತದ್ದು. ಅಲ್ಲಿ ಪ್ರಜಾಪ್ರಭುತ್ವದ, ಚುನಾವಣೆಯ ರಾಜೀಕಬೂಲಿಯ ರಾಜಕೀಯ ಕೆಲಸ ಮಾಡುತ್ತದೆ. ಅದು ಅನೇಕ ವೇಳೆ ಆರ್ಥಿಕ ನೀತಿಯಾಗಿ ಎಡವುತ್ತದೆ; ಕುಂಟುತ್ತದೆ, ಹಾದಿಗೆಡಿಸುತ್ತದೆ. ಪ್ರಧಾನಿ, ವಿತ್ತ ಮಂತ್ರಿ ಇತರ ಆರ್ಥಿಕ ವಿಚಾರಗಳ ಮಂತ್ರಿಗಳು, ಶಾಸನಸಭೆಯನ್ನು ವಿಶ್ವಾಸಕ್ಕೆ ತೆಗೆದುಕೊಂಡು ನೀತಿ ರೂಪಿಸಬೇಕು. ಇಲ್ಲಿಯ ಪಾತ್ರವಹಿಸುವವರು ರಾಷ್ಟ್ರದ ದೂರದೃಷ್ಟಿಯ ಹಿತವನ್ನು ಸತತ ಗಮನಿಸುವ ಮುತ್ಸದ್ದಿಗಳಾಗಿರಬೇಕು. ಹಾಗಾಗದಿದ್ದಾಗ ಆರ್ಥಿಕ ನೀತಿ ಒತ್ತಾಯಗಳಿಗೆ ಮಣಿಯುತ್ತ, ಭ್ರಷ್ಟಾಚಾರಕ್ಕೆ ಒಳಗಾಗುತ್ತದೆ. ಎಲ್ಲ ಸಮೂಹಗಳ ಹಿತಾಸಕ್ತಿ ಮಾರ್ಗದ ನೀತಿಯಾಗದೆ ನಾಡನ್ನು ಕಾಡಿಸುತ್ತದೆ. ಇದೇ ಜನ ಸ್ವಜನ ಪಕ್ಷಪಾತಿಗಳಾಗಿ ರಾಷ್ಟ್ರದ ಹಿತವನ್ನೇ ಚೆಕ್ಕಾಸಿಗೆ ಮಾರಿ ಅನರ್ಥ ಉಂಟುಮಾಡುವವರು ಅಂಥ ಸಮಯದಲ್ಲಿ ದಾರಿ ತಪ್ಪಿರುವುದನ್ನು ಟೀಕಿಸಿ, ಸರಿಯಾದ ದಾರಿಗೆ ಎಳೆಯುವ ಹಲವು ಚಿಂತಕ, ಮುತ್ಸದ್ದಿ ಸಮೂಹ ನಮ್ಮ ಸುತ್ತಮುತ್ತ ಇಲ್ಲದಿದ್ದರೆ, ಕೆಲವರು ಮಾಡಿದ ಸ್ವಾರ್ಥಪರ ಪ್ರಮಾದಗಳು ರಾಷ್ಟ್ರದ ವ್ಯವಸ್ಥೆಗೆ ಅಪಾರ ಅನರ್ಥ ಉಂಟುಮಾಡಿ, ಜನರ ಜೀವನ ದುರ್ಭರವಾಗುತ್ತದೆ. ಆ ಜನ ಮುಂದಿನ ಚುನಾವಣೆಯಲ್ಲಿ ಸೋಲುತ್ತಾರೆಂಬುದು ಒಂದು ಸಣ್ಣ ಸಮಾಧಾನ ಆದರೆ ಅವರಿಂದಾದ ಆಘಾತವನ್ನು ಸರಿಪಡಿಸಲು ಹಲವು ದಶಕಗಳೇ ಬೇಕಾಗಬಹುದು. ಇದು ಸರ್ಕಾರದ ಕ್ಷೇತ್ರಕ್ಕೆ ಸಂಬಂಧಿಸಿದ ಆರ್ಥಿಕ ನೀತಿಯ ವಿಷಯ.

ರಿಸರ್ವ್ ಬ್ಯಾಂಕ್ ಮಾಡುವುದು ಹಣಕಾಸು ನೀತಿ ಮೊದಲಿಗೆ ಎಷ್ಟು ನೋಟುಗಳನ್ನು ಅಚ್ಚು ಹಾಕಿ ಚಲಾವಣೆಗೆ ಬಿಡಬೇಕು ಎನ್ನುವುದು ಮುಖ್ಯವಾದುದು ಚಲಾವಣೆಯಲ್ಲಿರುವ ಹಣದ ರಾಶಿ ಒಂದು ಆರ್ಥಿಕ ಸಂದರ್ಭದಲ್ಲಿ ಹೆಚ್ಚು ಎನಿಸಿದರೆ ಅದರ ಸ್ವಲ್ಪ ಭಾಗವನ್ನು ಹಿಂದೆ ಸೆಳೆದುಕೊಳ್ಳುವುದು, ಹಾಗೇ ಸಾಲದೆಂದಾದರೆ ಇನ್ನಷ್ಟು ಅಚ್ಚುಹಾಕಿಸಿ ಚಲಾವಣೆಗೆ ಬಿಡುವುದು ಈ ಸಂಸ್ಥೆಯ ಹೊಣೆ. ಅರ್ಥವ್ಯವಸ್ಥೆಯ ಆರೋಗ್ಯ ಹೇಗಿದೆ ಅನ್ನುವುದನ್ನು ಸೂಚಿಸುವ ಹಲವಾರು ಅಂಕಿ ಅಂಶಗಳನ್ನು ಸಂಗ್ರಹಿಸುವುದು, ಕಾಲಕಾಲಕ್ಕೆ ಅವುಗಳನ್ನು ವಿಶ್ಲೇಷಿಸಿ ಪ್ರಕಟಿಸುವುದು ಭಾರತ ಸರ್ಕಾರದ ಸಂಖ್ಯಾಶಾಸ್ತ್ರ ವಿಭಾಗದ ಕೆಲಸ. ಇದು ತನ್ನ ಕೆಲಸವನ್ನು ತುಂಬ ವಸ್ತುನಿಷ್ಠವಾಗಿ ಯಾವುದೇ ಪೂರ್ವಗ್ರಹವಿಲ್ಲದೆ ಸಮರ್ಥವಾಗಿ ನಿರ್ವಹಿಸಬೇಕು. ಹಣದುಬ್ಬರ, ಬೆಲೆ ಏರಿಕೆ, ಬಳಕೆದಾರರ ಬೆಲೆ, ಸಗಟು, ಚಿಲ್ಲರೆ ಮಾರಾಟದ ಬೆಲೆಗಳು, ಅವುಗಳು ಏರುತ್ತಿವೆಯೇ ಇಳಿಯುತ್ತಿವೆಯೇ ಎನ್ನುವುದನ್ನು ಹೊರಗೆಡಹುವ ರೀತಿ ಪ್ರಕಟಿಸುವ ಗುರುತರ ಜವಾಬ್ದಾರಿ. ಬೆಲೆ ತುಂಬ ಏರಿ, ಜನಜೀವನಕ್ಕೆ ಹಿಂಸೆಯಾಗಿರುವಾಗ ಸರ್ಕಾರ ಆ ವಾಸ್ತವವನ್ನು ಮುಚ್ಚಿ, ಎಲ್ಲ ಸರಿಯಾಗಿದೆ ಎನ್ನುವಂತೆ, ಅಂಕಿ ಅಂಶಗಳನ್ನು ತಿದ್ದಿ, ಸರ್ಕಾರಕ್ಕೆ ಇಷ್ಟವಾಗುವಂತೆ ಪ್ರಕಟಿಸಿದರೆ ಹೇಗೆ ? ಈ ಸಂಸ್ಥೆಯ ಸ್ವಾಯತ್ತತೆಯನ್ನು ಕಾಪಾಡುವ ಹೊಣೆಗಾರಿಕೆಯೂ ಸರ್ಕಾರದ್ದೇ. ಅಂಕಿ ಅಂಶಗಳನ್ನು ಒಂದು ನಿರ್ದಿಷ್ಟ ವರ್ಷದ ತಳಹದಿಯ ಆಧಾರದ ಮೇಲೆ ಹೋಲಿಸಿ – ೨೦೦೦ ವರ್ಷ ಇದ್ದ ಬೆಲೆಗಿಂತ ಕಡಿಮೆ – ಹೆಚ್ಚು ಎನ್ನುವ ರೀತಿ ಪ್ರಕಟಿಸುವಾಗ – ೨೦೦೦ ವರ್ಷದ ಲೆಕ್ಕದಲ್ಲಿ ಇಂದು ಶೇ. ೪೦ ಹೆಚ್ಚಿದೆ ಎಂದರೆ ಒಂದು ಅರ್ಥ. ೨೦೧೫ರ ಅಂದರೆ ಕಳೆದ ವರ್ಷಕ್ಕೆ ಹೋಲಿಸಿದರೆ ಇಷ್ಟು ಅನ್ನುವುದು ಇನ್ನೊಂದು

ಅರ್ಥವಾಗುತ್ತದೆ. ಈಗಷ್ಟೆ ಇಂದಿನ ಸರ್ಕಾರ ಧಾರಣೆವಾಸಿ ನಿಯಂತ್ರಣದಲ್ಲಿದೆ, ಕುಸಿಯುತ್ತಿದೆ, ರಿಸರ್ವ್ ಬ್ಯಾಂಕ್ ಬಡ್ಡಿದರ ಇಳಿಸದೆ ಆರ್ಥಿಕ ವ್ಯವಸ್ಥೆಗೆ ಕೆಡುಕಾಗಿದೆ ಅಂತ ಕೂಗಾಡಿದರು. ಆದರೆ ನಮಗೆಲ್ಲ ಅನುಭವವಾಗಿದೆ. ಕಳೆದ ಹಲವು ತಿಂಗಳಿಂದ ಧಾರಣೆವಾಸಿ ಜಿಗಿಯುತ್ತಿದೆ. ಅದೇ ಸಮಯ ಸಾಧಾರಣ ಜನತೆಗೆ ದೊರೆಯುವ ಬಡ್ಡಿ ತೀರ ಕಡಿಮೆ. ಶೇ. ೭.೨೦ ಈಗ – ಆಗಿ, ಬೆಲೆ ವಾಸಿ ಶೇ. ೬ಕ್ಕೆ ಆಗಲೇ ಹಿಗ್ಗಿ, ಕೊಡಿಟ್ಟ ಹಣ ಬೆಲೆ ಕಳೆದುಕೊಳ್ಳುತ್ತಿದೆ. ರಘುರಾಮ್ ರಾಜನ್ ಅವರು ಮೊನ್ನೆ ಎನ್‌ಡಿ ಟಿವಿಯಲ್ಲಿ ಮಾತನಾಡುತ್ತಾ ಬೆಲೆ ಇತ್ಯಾದಿ ೪ ಇರುವಾಗ, ಬಡ್ಡಿದರ ೬ ಸಾಕಷ್ಟು ಸಹಾಯಕ ಅಲ್ಲವೇ ಎಂದಿದ್ದರು. ಆದರೆ ಇಷ್ಟುಬೇಗ ಅವರ ಮಾತು ತಪ್ಪಾಗುತ್ತದೆ ಅಂತ ಅವರೇ ನಿರೀಕ್ಷಿಸಿರಲಿಲ್ಲವೇನೋ. ರಾಜನ್ ಅವರು ರಾಜಕೀಯ ವ್ಯಕ್ತಿಯಲ್ಲ. ಗಾಬರಿಪಡಿಸುವುದು ಖುಷಿಪಡಿಸುವುದು ಅವರ ಕೆಲಸ ಅಲ್ಲ. ಅವರು ಬಡ್ಡಿದರ ಇನ್ನಷ್ಟು ಕೆಳಕ್ಕೆ ಇಳಿಸದೇ ಒಳ್ಳೆಯ ಕೆಲಸ ಮಾಡಿದ್ದಾರೆ ಅಂತ ಜೈಟ್ಲಿ ಅಲ್ಲಿ ಇಲ್ಲಿ ಪಿಸುಗುಟ್ಟುತ್ತಿರಬಹುದು, ಈಗ. ಅಷ್ಟಕ್ಕೂ ಜೈಟ್ಲಿ ಅರ್ಥಶಾಸ್ತ್ರಿ ಅಲ್ಲ, ಲಾಯರು. ಎನ್‌ಡಿಎ ಸರ್ಕಾರದಲ್ಲಿ ಆರ್ಥಿಕ ತಿಳಿವಿರುವವರೇ ಇಲ್ಲ. ಅರವಿಂದ ಪಾಣಿಗ್ರಾಹಿ ಅಂತರರಾಷ್ಟ್ರೀಯವಾಗಿ ಹೆಸರಾದವರೇನೂ ಅಲ್ಲ. ಖಾಸಗಿಕ್ಷೇತ್ರ ಹಿತರಕ್ಷಕ ಅಂತ ಅವರ ಕೀರ್ತಿ. ಬಡ್ಡಿದರ ಎಷ್ಟು ಎನ್ನುವುದು ಹಣದುಬ್ಬರ, ಬೆಲೆ ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆ. ಹಣದುಬ್ಬರ ಅಂದರೆ ಹೆಚ್ಚು ಹಣ ಚಲಾವಣೆಯಲ್ಲಿದೆ, ಅಗತ್ಯಕ್ಕಿಂತ ಹೆಚ್ಚು, ಸರಕುಗಳು ಕಡಿಮೆ ಇವೆ ಅಂತ ಅರ್ಥ. ಅದೇ ಸರಕಿನ ಸರಬರಾಜು ಹೆಚ್ಚಾದರೆ ಅವು ಬೆಲೆ ಕಳೆದುಕೊಳ್ಳುವುದು ಇದೇ ಕಾರಣದಿಂದ. ಅಂಥ ಸಂದರ್ಭಗಳಲ್ಲಿ ಚಲಾವಣೆಯಲ್ಲಿರುವ ನಗದನ್ನು ಹೆಚ್ಚು ಕಡಿಮೆ ಮಾಡುವ ಕೆಲಸ ರಿಸರ್ವ್ ಬ್ಯಾಂಕ್ ಮಾಡುತ್ತೆ. ಸರ್ಕಾರ ತನ್ನ ರಾಜಕೀಯ ಅಗತ್ಯಕ್ಕೆ ಅಂತ ಈ ತೀರ್ಮಾನವನ್ನು ಪ್ರಭಾವಿಸುವಂತಿಲ್ಲ. ಎರಡು ವರ್ಷದಿಂದ ರಾಜನ್ ಬಡ್ಡಿದರವನ್ನು ಸ್ವಲ್ಪ ಸ್ವಲ್ಪವಾಗಿ ಕಡಿಮೆ ಮಾಡಿ, ಈಗ ಶೇ. ೬ಕ್ಕೆ ನಿಲ್ಲಿಸಿದ್ದಾರೆ. ಅಂದರೆ ಇದು ರಿಸರ್ವ್ ಬ್ಯಾಂಕ್ ತನ್ನಿಂದ ನಗದು ಪಡೆಯುವ ಬ್ಯಾಂಕುಗಳಿಗೆ ವಿಧಿಸುವ ಬಡ್ಡಿ. ಬ್ಯಾಂಕುಗಳು ತಾವು ಪಡೆಯುವ ಠೇವಣಿಗೆ ಬಡ್ಡಿ ಕೊಡಬೇಕು. ಅವು ಸಾಲ ನೀಡಬೇಕು, ಸಾಲ ತೆಗೆದುಕೊಳ್ಳುವವರು ಇರಬೇಕು; ಅವರಿಂದ ಸಂಪಾದಿಸಿದ ಬಡ್ಡಿಯ ಆದಾಯದಿಂದ ರಿಸರ್ವ್ ಬ್ಯಾಂಕ್‌ಗೂ, ಠೇವಣಿದಾರರಿಗೂ ಬಡ್ಡಿ ನೀಡಬೇಕು, ತನ್ನದೇ ನಿರ್ವಹಣೆ ಮಾಡಿಕೊಳ್ಳಬೇಕು. ಸಾಲ ಕೊಂಡವರು ಹಣ ಹಿಂದಿರುಗಿಸದೇ ಹೋದರೆ ? ಅದಕ್ಕೆ ಕಾರಣಗಳು ಹಲವು. ವ್ಯಾಪಾರದಲ್ಲಿ ನಷ್ಟ, ಅನಿರೀಕ್ಷಿತ ಬದಲಾವಣೆಗಳು, ಬೇಡಿಕೆ ಪೂರೈಕೆಯ ಸರಪಣಿಯಲ್ಲಿ ಏರುಪೇರು ಮುಂತಾದವು. ಆದರೆ ಕೆಲ ಕಿಡಿಗೇಡಿ ಸಾಲಗಾರರು ಉದ್ದೇಶಪೂರ್ವಕವಾಗಿ ಮೋಸಮಾಡಿ, ಉದ್ಯಮ ಹಾಳುಮಾಡಿ, ಹಣ ವಾಪಸ್ಸು ಕೊಡದೆ ಹೋಗುವುದೂ ಉಂಟು. ಬ್ಯಾಂಕಿನ ನಿರ್ವಾಹಕರಿಗೆ ಹಲವು ತಲೆನೋವುಗಳು ಸಾಲಗಾರನ ಸಾಮರ್ಥ್ಯ ಸರಿಯಾಗಿ ತಿಳಿಯಲಿಲ್ಲ ಮುಂತಾಗಿ. ಆದರೆ ಸಾಲದ ತೀರ್ಮಾನಗಳ ಮೇಲೆ ರಾಜಕೀಯ ಪ್ರಭಾವ ಒತ್ತಡ ಬಂದು, ಕೆಟ್ಟ ಸಾಲಗಳು ಉಂಟಾದರೆ ಯಾರು ಹೊಣೆ ? ಈಗ ನಾಡಿನ ಮುಂದೆ ಇರುವ ದೊಡ್ಡ ತಲೆನೋವು ಎನ್‌ಪಿಎ – ನಾನ್ ಪರ್‌ಫಾರ್ಮಿಂಗ್ ಅಸೆಟ್ಸ್ – ಅಂದರೆ ಹೂಡಿಕೆ ಆಗಿದೆ, ಆದರೆ ಉತ್ಪಾದನೆ ಇಲ್ಲ, ವ್ಯಾಪಾರ ಇಲ್ಲ, ಸಾಲ ಹಿಂದಿರುಗಿಸಲು ಆಗಲಿಲ್ಲ; ಬಡ್ಡಿ ತೆರಲಾಗಿಲ್ಲ, ಅನುತ್ಪಾದಕ ಘಟಕಗಳು. ಈ ಲೆಕ್ಕದಲ್ಲಿ ಬ್ಯಾಂಕುಗಳಿಗೆ ಹಿಂದಿರುಗದ ಸಾಲದ ಹೊರೆಯೇ ೫–೬ ಲಕ್ಷ ಕೋಟಿ ಆದರೆ, ಬ್ಯಾಂಕುಗಳು ಠೇವಣಿಗೆ ಬಡ್ಡಿ ಕೊಡುವುದು ಹೇಗೆ ? ವಾಯ್ದೆ ಮುಗಿದ ಠೇವಣಿ ಹಿಂದಿರುಗಿಸುವುದು ಇದನ್ನು ಕುರಿತೆ, ಮತ್ತೊಮ್ಮೆ ವಿಸ್ತಾರವಾಗಿ ವಿವೇಚಿಸೋಣ.

ಈ ಸಂದರ್ಭದಲ್ಲಿ ರಾಜನ್ ಒಂದು ಹೇಳಿಕೆ ನೀಡಿದರು. ಹೇಳಿಕೆಯೂ ಅಲ್ಲ. ಯಾವುದೋ ಸಮಾವೇಶದಲ್ಲಿ ಒಬ್ಬ ಪ್ರಾಧ್ಯಾಪಕನಂತೆ – ಮುತ್ಸದ್ದಿಯಂತೆ ಹೇಳಿದ್ದು; ಸಾಲವನ್ನು ಹಿಂದಿರುಗಿಸದ ಉದ್ಯಮಿ, ಸಾರ್ವಜನಿಕವಾಗಿ ಐಷಾರಾಮದಿಂದ ಪ್ರದರ್ಶನ ಮಾಡುತ್ತ ಮೆರೆಯುವ ದೃಶ್ಯ ತುಂಬ ಹೀನಾಯ ಅಂದರು. ಆ ಮದ್ಯದ ವ್ಯಾಪಾರಿಯ ಸುತ್ತ ಹತ್ತಾರು ಸುರಸುಂದರಿಯರು ಅರೆಬೆತ್ತಲೆ ನಿಂತೇ ಟಿವಿಗಳಲ್ಲಿ ಕಾಣಿಸಿಕೊಳ್ಳುವ ಈ ವ್ಯಕ್ತಿಯ ಬಗ್ಗೆ ಅಸಹ್ಯ ಯಾರಿಗೆ ತಾನೆ ಉಂಟಾಗುವುದಿಲ್ಲ ? ಬ್ಯಾಂಕಿನ ಸಾಲ ಹಿಂದಿರುಗಿಸದೇ, ೧೫ ಮಹಡಿ ಸ್ವಂತ ವಾಸಕ್ಕೆ ಮನೆ ಕಟ್ಟಿಕೊಂಡು, ಬಿಸಿಲು ಮಚ್ಚಿನ ಮೇಲೆ ಹೆಲಿಕಾಪ್ಟರ್‌ನಲ್ಲಿ ಬಂದಿಳಿಯುವ ಶ್ರೀಮಂತನಿಗೆ ಆ ಭವ್ಯ ಭವನದ ಸುತ್ತ ಹಾದಿಯಲ್ಲಿ ಬಿದ್ದಿರುವ ಬಡವರ ಗೋಳು ಕಣ್ಣಿಗೆ ಹೇಗೆ ಬೀಳುತ್ತದೆ ? ವೃದ್ಧಾಪ್ಯಕ್ಕೆ ಸಹಾಯವಾಗಲೆಂದು ಉಳಿತಾಯ ಮಾಡಿ, ಬ್ಯಾಂಕಿನ ಬಡ್ಡಿಯಿಂದಲೇ ಬದುಕಿರುವ ಪಿಂಚಣಿದಾರರ ಗೋಳು ಅವರಿಗೇನು ತಿಳಿಯುತ್ತದೆ. ಸಾಲಗಾರನ ಕೃಷಿ ಭೂಮಿಯನ್ನು ವಶಪಡಿಸಿಕೊಳ್ಳಲು ಹೋದರೆ ಅದನ್ನು ಆಗಲೇ ಪರಭಾರೆ ಮಾಡಿ, ವಿದೇಶಕ್ಕೆ ಓಡಿದವನ ಬಗ್ಗೆ ನಾನೇಕೆ ಮರ್ಯಾದೆ ಉಳಿಸಿಕೊಳ್ಳಬೇಕು ? ಹೀಗೆಂದಮಾತ್ರಕ್ಕೆ ನಾನು ಉದ್ಯಮಿಗಳ ವಿರೋಧಿ ಹೇಗೆ ಆಗುತ್ತೇನೆ ? ಅದು ಸುಸುಸ್ವಾಮಿಯ ಹಾರ್ವರ್ಡ್ ಅರ್ಥಶಾಸ್ತ್ರಿಗೆ ಮಾತ್ರ ತಿಳಿಯುವುದೇ ಇಲ್ಲವೇನೊ !

ವಾಸ್ತವವೇನು ? ಕಳೆದ ಈ ಮೂರು ವರ್ಷ ನಮ್ಮ ಆರ್ಥಿಕ ವ್ಯವಸ್ಥೆ ಒಂದೇ ಸಮನೆ ಹಿಂದೆ ಸರಿಯುತ್ತಿದೆ. ಜಿಡಿಪಿ ವಿಷಯ ಅಲ್ಲ. ರಫ್ತು, ಆಮದು ಎರಡೂ ಅಪಾರ ಕುಸಿದಿದೆ. ಉದ್ಯೋಗ ನಿರ್ಮಾಣವೇ ಇಲ್ಲ; ಅಪಾರ ಸಂಖ್ಯೆಯ ನಿರುದ್ಯೋಗ ವಾಗಿದೆ. ಅದೇ ಸಮಯ ಹಿಂದೆ ಇದ್ದ ಖಾತರಿ ಉದ್ಯೋಗಗಳ ಬಹುಪಾಲು ಕೆಲಸಗಳು ಅರೆಕಾಲಿಕ ಉದ್ಯೋಗಗಳಾಗಿ ಅದೇ ಕೆಲಸ ಮಾಡುತ್ತಿವೆ. ಅಂದರೆ ಕಡಿಮೆ ವೇತನ, ಕಡಿಮೆ ಕೂಲಿ, ಹೆಚ್ಚು ಲಾಭವಾಗಿದೆಯೇ ವಿನಾ ಹೆಚ್ಚು ಉತ್ಪಾದನೆ, ಹೆಚ್ಚು ಉದ್ಯೋಗವೇನೂ ಆಗಿಲ್ಲ. ಬ್ಯಾಂಕಿಗೆ ಸಾಲ ಹಿಂದಿರುಗಿಸದೆ ಬಡ್ಡಿ ಕೊಡದೆ, ತೆರಿಗೆ ಕೊಡದೆ ಅದು ಖಾಸಗಿಯ "ಗ್ರೋತ್" ಬೆಳವಣಿಗೆ ಆದಾಗ ಜಿಡಿಪಿ ಕ್ಯಾನ್ಸರ್‌ನಂತೆ ಉಬ್ಬುತ್ತಿದೆ. ಇದು ಆರೋಗ್ಯಕರ ಬೆಳವಣಿಗೆ ಅಲ್ಲ, ಆತಂಕಕಾರಿ ಅಂತ ಗವರ್ನರ್ ಹೇಳಿದರೆ ಆತ ದೇಶ ವಿರೋಧಿಯೇ ? ಮಾನ್‌ಸೂನ್ ಮಳೆ ಅತ್ಯಧಿಕ, ಇಂಥ ದಿನವೇ ಬರುತ್ತದೆ ಅಂತ ಸಂಬಂಧಪಟ್ಟ ಇಲಾಖೆ ಹೇಳಿತು. ಈ ಕಾರಣ ಈ ಸಾರಿ ಆರ್ಥಿಕತೆಯ ಬೆಳವಣಿಗೆ ಅಪಾರವಾಗಿ ಹೆಚ್ಚುತ್ತೆ ಅಂದರು, ಕೃಷಿಕ್ಷೇತ್ರ ಶೇ. ೪ರಷ್ಟು ಬೆಳೆಯುತ್ತೆ ಅಂದರು. ಆದರೆ ಅವರು ನಿಗದಿಪಡಿಸಿದ ೨೦ ದಿನವಾದರೂ ಮಾನ್‌ಸೂನ್ ಬರಲಿಲ್ಲ. ಈಗ ಖಾಸಗಿ ಹವಾಮಾನ ಮುನ್ನೋಟ ನೀಡುವ ವ್ಯಾಪಾರಿ ಕಂಪನಿಗಳು ಇವೆ. ಅವುಗಳು ವರ್ತಕರಿಗೆ ವಾಸ್ತವಾಂಶ ತಿಳಿಸಿದ್ದು, ಅವರು ಈಗಾಗಲೇ ಬೆಲೆ ಏರಿಸಿದ್ದಾರೆ. ಕಾಳಸಂತೆ ಪ್ರಾರಂಭವಾಗಿದೆ. ಹಾಗೆಯೇ ಜಿಡಿಪಿಯ ಸಂಖ್ಯೆಯ ಮೇಲೂ ಅಗತ್ಯವಿದ್ದಂತೆ ಆಟವಾಡಬಹುದು. ಈಗ ಹೀಗೆ ಆಗುತ್ತಿದೆ ಎನ್ನುವ ಗುಮಾನಿ ರಾಷ್ಟ್ರೀಯವಾಗಿ, ಅಂತರರಾಷ್ಟ್ರೀಯವಾಗಿ ಪ್ರಕಟವಾಗಿದೆ, ಹೌದು, ಭಾರತದ ಬೆಳವಣಿಗೆಯ ದರ ಶೇ. ೭ ಸುಮಾರು ಅಂದಾಗ ಅದು ಹೆಚ್ಚಾಗಿ ಕಾಣುವುದು ಮಿಕ್ಕ ದೇಶಗಳ ಬೆಳವಣಿಗೆ ಕುಂಠಿತವಾಗಿರುವುದು, ಹಾಗೂ ಅವು ವಾಸ್ತವಾಂಶಕ್ಕೆ ದೂರವಲ್ಲದ ಸಂಖ್ಯೆಗಳನ್ನು ಪ್ರಕಟಿಸಿರುವುದರಿಂದ. ಹೀಗಾಗಿ ಸ್ವಾಯತ್ತ ಪರಿಣತರು ನಮ್ಮ ಬೆಳವಣಿಗೆಯದರ ಶೇ. ೪ ಸುಮಾರು ಎನ್ನುತ್ತಾರೆ. ಮನಮೋಹನ ಸಿಂಗ್, ಚಿದಂಬರಂ ಇಂದ ಆರಂಭಿಸಿ ಮೋದಿ, ಜೈಟ್ಲಿಯವರೆಗೆ ರಿಸರ್ವ್ ಬ್ಯಾಂಕ್‌ನ ಸ್ವಾಯತ್ತತೆಯನ್ನು ಹಾಳುಗೆಡಹುವ ನಿರಂತರ ಪ್ರಯತ್ನ ನಡೆಯುತ್ತಿದೆ. ಈಗ ಅದರಲ್ಲಿ ಸ್ವಲ್ಪ ಸಫಲರೂ ಆಗಿದ್ದಾರೆ. ಖಾಸಗೀ ಕ್ಷೇತ್ರದ ಪರಿಣತರು ಮತ್ತು ಸರ್ಕಾರದ ಇಲಾಖೆಯ ಪರಿಣತರನ್ನು ಬಡ್ಡಿದರ ತೀರ್ಮಾನ ಸಮಿತಿಗೆ ಸೇರಿಸಲಾಗಿದೆ. ಚರ್ಚೆ ಆಗಿದೆ. ಆದರೆ, ಗವರ್ನರ್ ಅವರದೇ ಅಂತಿಮ ತೀರ್ಮಾನ ಅಂತ ಹೇಳಲಾಗಿದೆ. ಇನ್ನು ಈ ಕುರಿತ ನೀತಿಗಳು ಸಮಾಧಾನಕರವಾಗಿರುವಂತೆ ಇದೆ. ಬರುವ ತಿಂಗಳು ಬಡ್ಡಿ ಇಳಿಸುವುದನ್ನು ಉದ್ಯಮಿಗಳೇ ಒಪ್ಪುವುದಿಲ್ಲ. ವಾಸ್ತವ ವೆಂದರೆ ನಮ್ಮ ಖಾಸಗೀ ಕ್ಷೇತ್ರ ರಘುರಾಮ್ ರಾಜನ್ ಅವರ ನಿರ್ವಹಣೆಯನ್ನು ಮೆಚ್ಚಿಕೊಂಡಿದ್ದಾರೆ. ಆ ಕ್ಷೇತ್ರದವರದ್ದೇ ಮುಂದೆ ಯಾರು ಗವರ್ನರ್ ಎನ್ನುವುದರ ಬಗ್ಗೆ ನಿರ್ಣಾಯಕ ತೀರ್ಮಾನ. ಮೋದಿಗೆ ಬೆಂಬಲವಾಗಿರುವ ಖಾಸಗೀ ಕ್ಷೇತ್ರವೇ ಈ ಕುರಿತು ಅವರಿಗೆ ತಿಳುವಳಿಕೆ ನೀಡುತ್ತಾರೆ. ಖಾಸಗೀಕ್ಷೇತ್ರ ಅಂದರೆ ಮಲ್ಯ ಅಲ್ಲ. ಆ ಕ್ಷೇತ್ರದ ಬಹುಪಾಲು ಜನ ಸಮರ್ಥರಿದ್ದಾರೆ. ನಾವು ಸಮಾಜವಾದೀ ಅರ್ಥವ್ಯವಸ್ಥೆಯ ಪ್ರತಿಪಾದಕ ರಾಗಿದ್ದೂ, ರಿಸರ್ವ್ ಬ್ಯಾಂಕಿನ ಸ್ವಾಯತ್ತತೆಯನ್ನು ಬಯಸುವವರಾಗಿ, ಖಾಸಗೀ ಅರ್ಥವ್ಯವಸ್ಥೆಯ ಪರಿಣತ ಅರ್ಥಶಾಸ್ತ್ರ ರಘುರಾಮ್ ರಾಜನ್ ಅವರನ್ನು ಈ ಕುರಿತು ಬೆಂಬಲಿಸುವುದಕ್ಕೆ ಇದೇ ಕಾರಣ. ಸ್ವಾಯತ್ತ ಸಂಸ್ಥೆಗಳೆಲ್ಲ ಸ್ವಾಯತ್ತತೆ ಕಳೆದು ಕೊಂಡು, ಸಂಘಪರಿವಾರದ ಅನರ್ಹ ಅಶಿಕ್ಷಿತರು ಆವರಿಸಿಕೊಳ್ಳುತ್ತಿರುವಾಗ, ರಿಸರ್ವ್ ಬ್ಯಾಂಕನ್ನಾದರೂ ನಾಡಿನ ಅರ್ಥವ್ಯವಸ್ಥೆ ರಕ್ಷಿಸಿಕೊಳ್ಳದಿದ್ದರೆ ಅದರ ವ್ಯವಸ್ಥೆಗೇ ಅದು ಕಂಟಕವಾಗುತ್ತದೆ. ಅದೇ ಕಾರಣ ನಾಡಿನ ಎಲ್ಲ ಛೇಂಬರ್ ಆಫ್ ಕಾಮರ್ಸ್‌ಗಳಲ್ಲು ರಘುರಾಮ್ ರಾಜನ್ ಅವರನ್ನು ಪುನಃ ಪುನಃ ಕರೆದು ಉಪನ್ಯಾಸ ಮಾಡಿಸಿಕೊಳ್ಳುತ್ತಿದ್ದಾರೆ.

ರಾಜನ್ ಸೆಪ್ಟೆಂಬರ್‌ನಲ್ಲಿ ಹೋಗುತ್ತಾರೆ. ಅವರ ಜಾಗಕ್ಕೆ ಮೋದಿ–ಜೈಟ್ಲಿ 'ಎಸ್‌ಮ್ಯಾನ್' ಬರುತ್ತಾರೆ ಎನ್ನುವುದು ಖಚಿತ.

**ಕೆ. ಎಸ್. ಪಾರ್ಥಸಾರಥಿ**
ನಂ. ೧೧೦೫, 'ಪೂರ್ವ ಏಟ್ರಿಯ ಪ್ಲಾಟೀನ', ಅಶ್ವಥ್‌ನಗರ
ಆರ್.ಎಂ.ವಿ. ಬಡಾವಣೆ, ಬೆಂಗಳೂರು – ೫೬೦ ೦೯೪

# ನಾನು ವಿಜ್ಞಾನವನ್ನು ಕಲಿತ ಬಗ್ಗೆ

**ಚಿ**ಕ್ಕವನಿದ್ದಾಗ ಗಣಿತಕ್ಕೆ ಸಂಬಂಧಿಸಿದಂತೆ ನನ್ನ ಅನುಭವ ಹೇಗಿತ್ತು ಎನ್ನುವುದನ್ನು ಹೇಳುತ್ತೇನೆ. ಅದೇನೆಂದರೆ ಯಾವುದೇ ವೃತ್ತವನ್ನು ತೆಗೆದುಕೊಂಡರೂ, ಅದರ ಪರಿಧಿ ಮತ್ತು ವ್ಯಾಸದ ನಡುವಿನ ಅನುಪಾತ ಒಂದೇ ಆಗಿರುತ್ತದೆ. ಈ ಸಂಗತಿ ಸಾಕಷ್ಟು ಸ್ಪಷ್ಟವಾಗಿತ್ತು. ಆದರೆ ಈ ಅನುಪಾತಕ್ಕೆ ಒಂದು ಅದ್ಭುತವಾದ ಗುಣವಿತ್ತು. ಅದು ಒಂದು ವಿಶೇಷವಾದ ಅಂಕಿಯಾಗಿತ್ತು. ಆ ಸಂಖ್ಯೆ ಪೈ. ಈ ಅಂಕಿಯಲ್ಲಿನ ಒಂದು ನಿಗೂಢ ಅಂಶ ನನಗೆ ಹರೆಯದಲ್ಲಿ ಮನವರಿಕೆಯಾಗಿರಲಿಲ್ಲ. ಆದರೆ ಅದು ಒಂದು ವಿಶೇಷ ಸಂಗತಿಯಾಗಿತ್ತು. ಹಾಗಾಗಿ, ನಾನು ಎಲ್ಲೆಡೆ ಪೈಗಾಗಿ ಹುಡುಕತೊಡಗಿದೆ.

ನಾನು ಶಾಲೆಯಲ್ಲಿ ಭಿನ್ನರಾಶಿಯನ್ನು ದಶಮಾಂಶವಾಗಿ ಪರಿವರ್ತಿಸುವುದನ್ನು ಕಲಿಯುತ್ತಿದ್ದ ಸಮಯದಲ್ಲಿ ೩ ೧/೮ = ೩.೧೨೫ ಎಂದು ಬರೆದು, = π, ಒಂದು ವೃತ್ತದ ಪರಿಧಿ ಮತ್ತು ವ್ಯಾಸದ ನಡುವಿನ ಅನುಪಾತ ಎಂದು ಬರೆದೆ. ಶಿಕ್ಷಕರು ಅದನ್ನು ೩.೧೪೧೬ ಎಂದು ತಿದ್ದಿದರು. ಆ ಅಂಕಿಯ ವಿಸ್ಮಯ ಗುಣ ಮತ್ತು ಕೌತುಕವನ್ನುಂಟುಮಾಡುವ ವಿಷಯ ನನಗೆ ಮುಖ್ಯವಾಗಿತ್ತೇ ಹೊರತು, ಆ ಅಂಕಿ ಏನು ಎಂಬುದಾಗಿರಲಿಲ್ಲ.

ಹೀಗೇ ಒಂದು ದಿನ ಯಾವುದೋ ಪುಸ್ತಕದಲ್ಲಿ ಸೂತ್ರಗಳನ್ನು ಪರಿಶೀಲಿಸುತ್ತಿದ್ದಾಗ, ಅನುರಣಕ ಸರ್ಕಿಟ್‌ನ ಆವರ್ತನಕ್ಕೆ ಸಂಬಂಧಿಸಿದ ಸೂತ್ರವೊಂದು ನನ್ನ ಗಮನಕ್ಕೆ ಬಂತು. ಅದು F = ½ $\pi LC$ ಎಂದಿತ್ತು. ಇಲ್ಲಿ $L$ ಎನ್ನುವುದು ವೃತ್ತಾಕಾರದ ಸುರಳಿಯ ಇಂಡಕ್ಟೆನ್ಸ್ ಮತ್ತು $C$ ಎನ್ನುವುದು ಕ್ಯಪಾಸಿಟೆನ್ಸ್ ಆಗಿತ್ತೇ ? ನೀವು ನಗಬಹುದು. ಆದರೆ ಈ ವಿಷಯವನ್ನು ನಾನು ಗಂಭೀರವಾಗಿ ತೆಗೆದುಕೊಂಡಿದ್ದೆ. π ಎನ್ನುವುದು ವೃತ್ತಗಳಿಗೆ ಸಂಬಂಧಿಸಿದ ವಿಷಯ. ಹಾಗೂ ಇಲ್ಲಿ ಒಂದು ವಿದ್ಯುತ್ ಸರ್ಕಿಟ್‌ನಲ್ಲಿ πಯನ್ನು ಕಾಣಬಹುದಿತ್ತು. ಹಾಗಾದರೆ ವೃತ್ತವೆಲ್ಲಿ ? ಈ ವಿಷಯದ ಬಗ್ಗೆ ಆಸ್ಥೆ ಇದ್ದುದರಿಂದ ಅದಕ್ಕಾಗಿ ನಾನು ಹುಡುಕಿ ಅದರದೇ ಚಿಂತನೆಯಲ್ಲಿ ತೊಡಗಿದಾಗ ನನ್ನ ಅರಿವಿಗೆ ಬಂದದ್ದು, ಹೌದು, ಕಾಯ್ಲ್‌ಗಳು ವೃತ್ತಾಕಾರದಲ್ಲಿದೆ ಎಂಬುದು. ಸುಮಾರು ಆರು ತಿಂಗಳ ನಂತರ ಇನ್ನೊಂದು ಪುಸ್ತಕದಲ್ಲಿ ವೃತ್ತಾಕಾರದ ಮತ್ತು ಚೌಕಾಕಾರದ ಕಾಯ್ಲ್‌ಗಳಲ್ಲಿನ ಇಂಡಕ್ಟೆನ್ಸ್ ಬಗ್ಗೆ ಮಾಹಿತಿಯನ್ನು ಕಂಡೆ ಹಾಗೂ ಆ ಸೂತ್ರಗಳಲ್ಲೂ πನ ಪ್ರಸ್ತಾಪವಿತ್ತು. ನಾನು ಅದರ ಬಗ್ಗೆ ಚಿಂತನೆಗೆ ಪ್ರಾರಂಭಿಸಿದೆ ಮತ್ತು π ಎನ್ನುವುದು ಆ ವೃತ್ತಾಕಾರದ ಕಾಯ್ಲ್‌ಗಳಿಂದ ಬಂದದ್ದಲ್ಲ ಎಂದು ಗೋಚರವಾಯಿತು. ಈಗ ನನಗೆ ಅದರ ಬಗ್ಗೆ ಹೆಚ್ಚಿನ ಅರಿವಿದೆ. ಆದರೆ ನನ್ನ ಅಂತರಾಳದಲ್ಲಿ ಆ ವೃತ್ತ ಎಲ್ಲಿದೆ, ಆ π ಎಲ್ಲಿಂದ ಬರುತ್ತದೆ ಎನ್ನುವುದು ಪ್ರಶ್ನೆಯಾಗಿಯೇ ಉಳಿದಿದೆ.

ನಾನು ಬಹಳ ಚಿಕ್ಕವನಾಗಿದ್ದಾಗ ತಳ್ಳುಗಾಡಿಯೊಂದನ್ನು ಎಳೆಯುತ್ತಿದ್ದೆ. ಅದರಲ್ಲೊಂದು ಚೆಂಡಿತ್ತು ಹಾಗೂ ಒಂದು ವಿಷಯ ನನ್ನ ಗಮನಕ್ಕೆ ಬಂತು. ಹಾಗಾಗಿ ನನ್ನ ತಂದೆಯಲ್ಲಿಗೆ ಓಡಿ ಹೋಗಿ ಕೇಳಿದೆ, 'ನಾನು ತಳ್ಳುಗಾಡಿಯನ್ನು ಎಳೆದಾಗ ಚೆಂಡು ಹಿಂದಕ್ಕೆ ಉರುಳುತ್ತದೆ ಮತ್ತು ತಳ್ಳುಗಾಡಿಯೊಂದಿಗೆ ಓಡುತ್ತಿದ್ದು ನಿಂತಾಗ ಅದು ಮುಂದಕ್ಕೆ ಉರುಳುತ್ತದೆ. ಯಾಕೆ ?' ಎಂದು.

ಅವರು ಹೇಳಿದರು, 'ಅದು ಯಾರಿಗೂ ತಿಳಿದಿಲ್ಲ. ಆದರೆ, ಸಾಧಾರಣವಾಗಿ ಎಲ್ಲ ಸಂದರ್ಭದಲ್ಲೂ ಅದು ಹೀಗೆಯೇ ಆಗುತ್ತದೆ. ಯಾವುದು ಚಲಿಸುತ್ತಿರುತ್ತದೋ ಅದು ನಿರಂತರವಾಗಿ ಚಲಿಸುತ್ತದೆ. ಯಾವುದು ಸ್ಥಿರವಾಗಿರುತ್ತದೋ ಅದು ಅದೇ ಸ್ಥಿತಿಯಲ್ಲಿರಲು ಪ್ರಯತ್ನಿಸುತ್ತದೆ. ನೀನು ಸ್ಥಿರವಾಗಿದ್ದವನು ಚಲಿಸಲು ಪ್ರಾರಂಭಿಸಿದಾಗ ಚೆಂಡು ಹಿಂದಕ್ಕೆ ಉರುಳುವುದಿಲ್ಲ ಎಂಬುದು ಗಮನವಿಟ್ಟು ನೋಡಿದಾಗ ತಿಳಿಯುತ್ತದೆ. ಅದು ಸ್ವಲ್ಪ ಮುಂದಕ್ಕೆ ಚಲಿಸುತ್ತದೆ, ಆದರೆ ತಳ್ಳುಗಾಡಿಯಷ್ಟು ವೇಗವಾಗಿ ಅಲ್ಲ, ಅದನ್ನು ಜಡತ್ವ ಎನ್ನುತ್ತಾರೆ.' ನಾನು ಅದನ್ನು ಪರಿಶೀಲಿಸಲು ಹಿಂದಿರುಗಿ ಹೋದೆ. ನಿಶ್ಚಯವಾಗಿಯೂ ಚೆಂಡು ಹಿಂದಕ್ಕೆ ಉರುಳುತ್ತಿರಲಿಲ್ಲ.

ನಾವು ರಜೆಯ ದಿನಗಳಲ್ಲಿ ಕ್ಯಾಟ್‌ಸ್ಕಿಲ್ ಪರ್ವತಗಳಿಗೆ ಹೋಗುತ್ತಿದ್ದೆವು. ಆ ಸಮಯದಲ್ಲಿ ಪ್ರಕೃತಿಗೆ ಸಂಬಂಧಿಸಿದಂತೆ ಹಾಗೂ ಇನ್ನೂ ಇತರ ಹಲವು ವಿಷಯಗಳ ಬಗ್ಗೆ ನಾವು ತಿಳಿದುಕೊಳ್ಳುತ್ತಿದ್ದೆವು. ನನ್ನ ಕೆಲವು ಗೆಳೆಯರಿಗೆ ನಮ್ಮೊಂದಿಗೆ ಬರುವ ಆಸೆಯಿತ್ತು ಹಾಗೂ ನಮ್ಮ ತಂದೆ ಅವರನ್ನು ಕರೆದುಕೊಂಡು ಹೋಗಲಿ ಎನ್ನುವ ನಿಟ್ಟಿನಲ್ಲಿ ಪ್ರಯತ್ನವನ್ನೂ ಅವರು ಮಾಡಿದರು. ನನ್ನ ತಂದೆಗೆ ಅಷ್ಟಾಗಿ ಆಸಕ್ತಿ ತೋರಲಿಲ್ಲ. ಏಕೆಂದರೆ ಅವರ ಪ್ರಕಾರ ನಾನು ಅವರೆಲ್ಲರಿಗಿಂತ ಮುಂದಿದ್ದೆ. ಹಾಗಾಗಿ ನಾವಿಬ್ಬರೇ ಕಾಡುಗಳಲ್ಲಿ ತಿರುಗಾಡಲು ಹೋಗುತ್ತಿದ್ದೆವು.

ಪ್ರಥಮ ಹಂತದ ಕಲಿಕೆಯಲ್ಲಿರುವ ಮಕ್ಕಳ ಶಿಕ್ಷಕರಾಗಿರುವ ನಿಮ್ಮಲ್ಲಿ ಸ್ಫೂರ್ತಿಯನ್ನು ತುಂಬಲು ಪ್ರಯತ್ನಿಸುತ್ತಿದ್ದೇನೆ. ಏಕೆಂದರೆ ನಿಮ್ಮನ್ನು ಮುನ್ನಡೆಸುತ್ತಿರುವ ಪರಿಣತರು ನಿಮ್ಮ ದಾರಿ ತಪ್ಪಿಸುತ್ತಿರಬಹುದು, ಹಾಗಾಗಿ ನೀವು, ಸ್ವಾಭಾವಿಕ ಬುದ್ಧಿಮತ್ತೆ ಹಾಗೂ ಲೋಕಜ್ಞಾನದ ಬಗ್ಗೆ ವಿಶ್ವಾಸ ಮತ್ತು ಭರವಸೆಯನ್ನು ಇಟ್ಟುಕೊಳ್ಳಬೇಕಾಗಿದೆ.

**ಮೂಲ : ರಿಚರ್ಡ್ ಫೈನ್‌ಮನ್**
**ಕನ್ನಡಕ್ಕೆ : ಸುಮನಾ ಡಿ.**

ಒಂದು ವಸ್ತುವಿನ ಹೆಸರಿಗೂ ಹಾಗೂ ಅದರಲ್ಲಿ ಅಡಕವಾಗಿರುವ ವಸ್ತು ವಿಶೇಷಕ್ಕೂ ವ್ಯತ್ಯಾಸವಿದೆ.

ಪದಗಳು – ಇವುಗಳನ್ನು ಕಲಿಯುವ ಅಗತ್ಯವಿರುವುದರಿಂದ ಇಲ್ಲಿ ನಾನು ಪದಗಳು ಮತ್ತು ವ್ಯಾಖ್ಯಾನಗಳ ಬಗ್ಗೆ ಮಾತನಾಡಲು ಇಷ್ಟಪಡುತ್ತೇನೆ. ಇದು ವಿಜ್ಞಾನವಲ್ಲ. ವಿಜ್ಞಾನವಲ್ಲದ ಕಾರಣ ಪದಗಳನ್ನು ಕಲಿಯಬೇಕಾಗಿಲ್ಲ ಎಂಬರ್ಥವಲ್ಲ. ಸೆಂಟಿಗ್ರೇಡನ್ನು ಫ್ಯಾರನ್‌ಹೀಟ್‌ಗೆ ಹೇಗೆ ಪರಿವರ್ತಿಸುವುದು ಎನ್ನುವುದು ವಿಜ್ಞಾನ ಎಂದು ಹೇಳಲಾಗದಿದ್ದರೂ ಅದರ ಬಗ್ಗೆ ತಿಳುವಳಿಕೆ ಅಗತ್ಯ. ಅಂತೆಯೇ, ಚಿತ್ರಕಲೆಯ ಬಗ್ಗೆ ಮಾತನಾಡುವಾಗ ಒಂದು ೩ಬಿ ಪೆನ್ಸಿಲ್ ೨ಎಚ್‌ಗಿಂತ ಮೃದುವಾಗಿರುತ್ತದೆ ಎನ್ನುವುದು ಕಲೆ ಎನ್ನಿಸಿಕೊಳ್ಳದಿದ್ದರೂ, ಒಬ್ಬ ಕಲಾಶಿಕ್ಷಕ ಇದರ ಬಗ್ಗೆ ತಿಳುವಳಿಕೆ ನೀಡಬಾರದು ಎಂದಾಗಲೀ ಅಥವಾ ಒಬ್ಬ ಚಿತ್ರಕಾರ ಅದರ ತಿಳುವಳಿಕೆ ಇಲ್ಲದಿದ್ದರೂ ಯಾವುದೇ ತೊಂದರೆಯಿಲ್ಲದೆ ನಿಭಾಯಿಸಬಲ್ಲ ಎಂದಾಗಲೀ ಇದರ ಅರ್ಥವಲ್ಲ. (ನಿಜಾರ್ಥದಲ್ಲಿ, ಇದನ್ನು ಬಳಸುವುದರ ಮೂಲಕ ಇದರ ವ್ಯತ್ಯಾಸವನ್ನು ತಿಳಿಯ ಬಹುದು. ಆದರೆ ಅನೇಕ ಬಾರಿ ಈ ವೈಜ್ಞಾನಿಕ ವಿಧಾನವನ್ನು ಒಬ್ಬ ಕಲಾಶಿಕ್ಷಕ ಮನವರಿಕೆ ಮಾಡುವುದರ ಬಗ್ಗೆ ಯೋಚಿಸುವುದೇ ಇಲ್ಲ).

ಪರಸ್ಪರ ಮಾತನಾಡಲು ಪದಗಳ ಅಗತ್ಯವಿದೆ. ಅದು ಹಾಗಿರಲಿ. ನಾವು ಯಾವಾಗ ವಿಜ್ಞಾನವನ್ನು ಬೋಧಿಸುತ್ತಿದ್ದೇವೆ ಮತ್ತು ಯಾವಾಗ ವಿಜ್ಞಾನದ ಸಾಧನಗಳನ್ನು (ಇಲ್ಲಿ ಪದಗಳು) ಬೋಧಿಸುತ್ತಿದ್ದೇವೆ ಎನ್ನುವುದರ ಬಗ್ಗೆ ತಿಳುವಳಿಕೆ ಇರುವುದು ಮತ್ತು ಅವೆರಡರ ನಡುವಿನ ವ್ಯತ್ಯಾಸವನ್ನು ಗಮನಿಸುವುದು ಒಳ್ಳೆಯದು.

ವಿಜ್ಞಾನ ಏನು ಎನ್ನುವುದರ ಬಗ್ಗೆ ಹೇಳುವವರಿದ್ದಾರೆ ಎಂಬ ಯೋಚನೆ ನನಗೆ ಮೊದಲಿಗೆ ಬಂತು. ಭೌತಶಾಸ್ತ್ರ, ರಸಾಯನಶಾಸ್ತ್ರ, ಜೀವಶಾಸ್ತ್ರದ ಬಗ್ಗೆ – ಆದರೆ ಅದು ಹಾಗಿರಲಿಲ್ಲ. ಅದರ ಉತ್ತರ ನನಗೆ ಶಿಕ್ಷಕರ ಕೈಪಿಡಿಯಲ್ಲಿ ಕಂಡುಬಂದಿತು. 'ಶಕ್ತಿಯು ಚಲನೆಯನ್ನು ಉಂಟುಮಾಡುತ್ತದೆ' ಎನ್ನುವುದು ಉತ್ತರವಾಗಿತ್ತು.

ಶಕ್ತಿ ಎನ್ನುವುದು ಗ್ರಹಿಕೆಗೆ ಸುಲಭವಾಗಿ ಸಿಗದ ವಿಷಯ. ಅದನ್ನು ಸೂಕ್ತವಾಗಿ ಅರ್ಥೈಸಿಕೊಳ್ಳುವುದು ಕಷ್ಟದ ಕೆಲಸ. ಅದನ್ನು ಸರಿಯಾದ ರೀತಿಯಲ್ಲಿ ಗ್ರಹಿಸಿಕೊಂಡು ಸೂಕ್ತವಾಗಿ ಬಳಸಿಕೊಳ್ಳುವ ಮೂಲಕ ತರ್ಕಬದ್ಧವಾದ ಒಂದು ಹಂತವನ್ನು ತಲುಪುವುದು ಸುಲಭದ ಕೆಲಸವಲ್ಲ, ಅದೂ ಒಂದನೆಯ ತರಗತಿಯ ಹಂತದಲ್ಲಿ. ಸೂಕ್ತವಾಗಿ ಹೇಳಬಹುದಾದರೆ 'ಚಲನೆಗೆ ಕಾರಣ ದೇವರು', 'ಚಲನೆಗೆ ಕಾರಣ ಒಂದು ಚೈತನ್ಯ' ಅಥವಾ 'ಚಲನಶೀಲತೆಯೇ ಚಲನೆಗೆ ಕಾರಣ' ಎಂದು ಹೇಳಬಹುದು.

ಒಂದು ವಸ್ತು ಚಲಿಸುತ್ತದೆ ಎಂದಾಗ ಅದರಲ್ಲಿ ಶಕ್ತಿಯ ಅಂಶ ಇದೆ ಎಂದು ಹೇಳಬಹುದೇ ಹೊರತು ಶಕ್ತಿಯ ಕಾರಣದಿಂದ ಅದು ಚಲಿಸುತ್ತದೆ ಎಂದಲ್ಲ. ಇವೆರಡರಲ್ಲಿ ಬಹಳ ಸೂಕ್ಷ್ಮವಾದ ವ್ಯತ್ಯಾಸವಿದೆ. ಜಡತೆಯ ಪ್ರಮೇಯದಲ್ಲೂ ಇದು ಅನ್ವಯಿಸುತ್ತದೆ.

ಈ ವ್ಯತ್ಯಾಸವನ್ನು ಮತ್ತಷ್ಟು ಸ್ಪಷ್ಟವಾಗಿ ತೋರಿಸುವುದಾದರೆ, ನೀವು ಒಂದು ಮಗುವನ್ನು 'ಆ ನಾಯಿ ಏಕೆ ಚಲಿಸುತ್ತದೆ?' ಎಂದು ಕೇಳಿದರೆ, ಒಬ್ಬ ಸಾಮಾನ್ಯ ಮನುಷ್ಯ ಏನು ಉತ್ತರ ಕೊಡಬಹುದು ಎಂಬುದನ್ನು ಗಮನದಲ್ಲಿಡಬೇಕಾಗುತ್ತದೆ. ಆಟಿಕೆಗೆ ಕೀಲಿ ಕೈ ಕೊಟ್ಟ ನಂತರದಲ್ಲಿ, ತನ್ನ ಸಹಜ ಸ್ಥಿತಿಗೆ ಮರಳುವ ಪ್ರಕ್ರಿಯೆಯಲ್ಲಿ ಸ್ಪ್ರಿಂಗ್ ಗೇರನ್ನು ನೂಕಿದ್ದು ಚಲನೆಗೆ ಕಾರಣ ಎಂಬುದು ಉತ್ತರವಾಗಿರುತ್ತದೆ. ಪ್ರಶ್ನೆ ಸೂಕ್ತವಾಗಿದೆ ಯಾದರೂ, ಉತ್ತರವು ಶಕ್ತಿಯ ಅರ್ಥವನ್ನು ಮಾತ್ರ ತಿಳಿಸುತ್ತದೆಯೇ ಹೊರತು ಉಳಿದಂತೆ ಮತ್ಯಾವ ವಿಷಯವನ್ನೂ ತಿಳಿಸುವುದಿಲ್ಲ. ಹಾಗಾಗಿ ಇದು ಸಮಂಜಸವಲ್ಲ. ವಿದ್ಯಾರ್ಥಿಯೊಬ್ಬ, 'ಚಲನೆಗೆ ಶಕ್ತಿಯು ಕಾರಣವಲ್ಲ' ಎಂದು ಹೇಳಿದ ಎಂದು ಭಾವಿಸೋಣ. ಆಗ ಈ ಚರ್ಚೆಯ ಜಾಡು ಏನಾಗಬಹುದು ?



ಆಟದ ಸಾಮಾನಿನ ಬಿಡಿಭಾಗಗಳನ್ನು ಬಿಚ್ಚಿ, ಅದು ಹೇಗೆ ಕೆಲಸ ಮಾಡುತ್ತದೆಯೆಂದು ನೋಡಿ, ಗ್ರಹಿಸಿ, ಆಟಿಕೆಯ ಬಿಡಿಭಾಗಗಳ ಜೋಡಣೆಯ ಬಗ್ಗೆ, ಅದನ್ನು ರೂಪುಗೊಳಿಸಿದವರ ಬುದ್ಧಿವಂತಿಕೆಯ ಬಗ್ಗೆ ಹಾಗೂ ಇನ್ನಿತರ ವಿಷಯಗಳ ಬಗ್ಗೆ ತಿಳಿದುಕೊಳ್ಳಿ.

ವಿಜ್ಞಾನವನ್ನು ಪರಿಚರಿಯಿಸುವುದಕ್ಕೆ ಇದಕ್ಕಿಂತ ಉತ್ತಮ ವಿಧಾನವಿದೆಯೇ !

ನಾವು ಒಂದು ವಿಚಾರವನ್ನು ಪರಿಚಯಿಸಿದೆವೋ ಅಥವಾ ಕೇವಲ ಅರ್ಥವಿವರಣೆಯನ್ನು ನೀಡಿದೆವೋ ಎಂದು ಕಂಡುಕೊಳ್ಳುವ ಬಗೆಯನ್ನು ಕೊನೆಗೂ ನಾನು ಕಂಡುಕೊಂಡೆ.

ಅದನ್ನು ಈ ರೀತಿ ಪರೀಕ್ಷಿಸಬಹುದು: 'ನೀವು ಹೊಸತಾಗಿ ಕಲಿತ ಪದವನ್ನು ಬಳಸದೆ ನಿಮಗೆ ತಿಳಿದ ರೀತಿಯಲ್ಲಿ ನೀವು ಈಗ ಕಲಿತದ್ದನ್ನು ವಿವರಿಸಲು ಪ್ರಯತ್ನಿಸಿ' ಎಂದು ಹೇಳಿ. "ಶಕ್ತಿ" ಎಂಬ ಪದವನ್ನು ಬಳಸದೆ 'ಆಟಿಕೆಯ ಚಲನೆಯ ಬಗ್ಗೆ ನಿಮಗೆ ತಿಳಿದಿರುವುದನ್ನು ಹೇಳಿ' ಎಂದು ಹೇಳಿ – ಇದು ಸಾಧ್ಯವಾಗುವುದಿಲ್ಲ ಎಂದಾದರೆ ನೀವು ವೈಜ್ಞಾನಿಕವಾದದ್ದನ್ನೇನೂ ಕಲಿತಿಲ್ಲ ಎಂದಾಯಿತು. ಅದು ಹಾಗಿರಲಿ, ತಕ್ಷಣದಲ್ಲಿ ನಿಮಗೆ ವಿಜ್ಞಾನದ ಬಗ್ಗೆ ಏನನ್ನೂ ಕಲಿಯುವ ಇಚ್ಛೆ ಇಲ್ಲದಿರಬಹುದು. ಅರ್ಥವಿವರಣೆಯನ್ನು ಕಲಿಯುವ ಅಗತ್ಯವಿದೆ ಯಾದರೂ ಮೊದಮೊದಲು ಅದರತ್ತ ಹೊರಳುವುದು ಹಾನಿಕಾರಕವಾಗಬಹುದು.

ಪ್ರಾರಂಭದಲ್ಲಿ ಯಾವುದೇ ಪ್ರಶ್ನೆಗೆ ಉತ್ತರವಾಗಿ ಒಂದು ಸೂತ್ರವನ್ನು ಉರು ಹೊಡೆಯುವುದು ಸೂಕ್ತವಲ್ಲ. ಆ ಪುಸ್ತಕದಲ್ಲಿ ಈ ರೀತಿಯದು ಇನ್ನೂ ಹಲವಾರು ಇವೆ. 'ಅದು ಬೀಳುವುದು ಗುರುತ್ವಾಕರ್ಷಣೆಯಿಂದ', 'ನಿಮ್ಮ ಚಪ್ಪಲಿಯ ತಳಭಾಗ ಘರ್ಷಣೆಯ ಕಾರಣ ಸವೆಯುತ್ತದೆ' ಇತ್ಯಾದಿ. 'ರಸ್ತೆಯಲ್ಲಿನ ಬದಿಗೆ ಹಾಕಿದ ಕಲ್ಲಿಗೆ ತಗುಲಿದಾಗ ಕಲ್ಲಿನ ಉರುಟು ಮೇಲ್ಮೈಗೆ ಸಿಕ್ಕಿ ಚಪ್ಪಲಿಯ ಚಿಕ್ಕ ಚಿಕ್ಕ ತುಣುಕುಗಳು ಕಿತ್ತು ಬರುವುದರಿಂದ ಚಪ್ಪಲಿಗಳು ಸವೆಯುತ್ತವೆ' ಎಂದು ಹೇಳುವುದು ಸೂಕ್ತವಾಗುತ್ತದೆಯೇ ಹೊರತು, ಘರ್ಷಣೆಯಿಂದ ಸವೆಯುತ್ತದೆ ಎಂದು ಹೇಳುವುದು ವಿಷಾದದ ಸಂಗತಿಯೇ ಹೌದು. ಏಕೆಂದರೆ ಅದರಲ್ಲಿ ಯಾವುದೇ ವೈಜ್ಞಾನಿಕ ಅಂಶ ತಿಳಿದುಬರುವುದಿಲ್ಲ.

ನನಗೆ ಶಕ್ತಿಯ ಬಗ್ಗೆ ಸ್ವಲ್ಪ ತಿಳುವಳಿಕೆ ಬಂದಾಗ ನನ್ನ ತಂದೆ ಆ ಪದವನ್ನು ಪ್ರಸ್ತಾಪಿಸಿ, ಅದರ ವಿಷಯವನ್ನು ನನ್ನ ಗಮನಕ್ಕೆ ತಂದರು. ಅವರು ಏನು ಮಾಡಬಹುದು ಎನ್ನುವುದರ ಬಗ್ಗೆ ನನಗೆ ಅರಿವಿತ್ತು. ಆಟದ ನಾಯಿಯ ಉದಾಹರಣೆಯನ್ನೇ ಅವರು ತೆಗೆದುಕೊಳ್ಳದಿದ್ದರೂ ಅದೇ ಮಾದರಿಯನ್ನು ಅವರು ಅನುಸರಿಸಿದರು. 'ಸೂರ್ಯನ ಕಿರಣಗಳ ಕಾರಣದಿಂದ ನಾಯಿ ಚಲಿಸುತ್ತದೆ' ಎಂದು ಅವರು ಹೇಳುತ್ತಿದ್ದರು.

'ಇಲ್ಲ, ಸೂರ್ಯನ ಕಿರಣಗಳಿಗೂ ನಾಯಿ ಚಲಿಸುವುದಕ್ಕೂ ಏನು ಸಂಬಂಧ ? ನಾನು



ಸ್ಪ್ರಿಂಗನ್ನು ತಿರುಗಿಸಿದ್ದರಿಂದ ಅದು ಚಲಿಸುತ್ತದೆ' ಎಂದು ನಾನು ಹೇಳುತ್ತಿದ್ದೆ.

'ಹಾಗಾದರೆ, ಸ್ಪ್ರಿಂಗನ್ನು ತಿರುಗಿಸಲು ನಿನಗೆ ಹೇಗೆ ಸಾಧ್ಯವಾಯಿತು ?'

'ನಾನು ಆಹಾರ ಸೇವಿಸುವುದರಿಂದ'

'ನೀನು ಏನನ್ನು ತಿನ್ನುತ್ತೀಯೇ ?'

'ನಾನು ಸಸ್ಯಗಳಿಂದ ಮಾಡಿದ ಪದಾರ್ಥಗಳನ್ನು ತಿನ್ನುತ್ತೇನೆ'

'ಅವು ಹೇಗೆ ಬೆಳೆಯುತ್ತವೆ ?'

'ಸೂರ್ಯನ ಕಿರಣಗಳ ಕಾರಣ ಅವು ಬೆಳೆಯುತ್ತವೆ'

ಹೀಗೆ, ಆಟಿಕೆಯ ನಾಯಿಗೆ ಅನ್ವಯಿಸುವಂತೆ ಜೀವಂತ ನಾಯಿಯ ವಿಷಯದಲ್ಲೂ ಇದು ಅನ್ವಯಿಸುತ್ತದೆ.

ಪೆಟ್ರೋಲ್ ವಿಷಯವನ್ನು ತೆಗೆದುಕೊಂಡರೆ, ಸೂರ್ಯನಿಂದ ಸಂಗ್ರಹಿತವಾದ ಶಕ್ತಿಯನ್ನು ಸಸ್ಯಗಳು ಭೂಮಿಯಲ್ಲಿ ಹಿಡಿದಿಡುತ್ತವೆ. ಹೀಗೆ ಬೇರೆ ಯಾವುದೇ ಉದಾಹರಣೆಯನ್ನು ತೆಗೆದುಕೊಂಡರೂ ಅದು ಸೂರ್ಯನಿಗೆ ಸಂಬಂಧ ಪಟ್ಟಿರುತ್ತದೆ. ಹಾಗಾಗಿ ಈ ಪ್ರಪಂಚದ ಬಗ್ಗೆ ಪಠ್ಯಪುಸ್ತಕದಲ್ಲಿ ಹೇಳಿರುವ ವಿಷಯವನ್ನೇ, ಭಿನ್ನವಾದ, ಉತ್ಸಾಹವನ್ನು ತುಂಬುವ ರೀತಿಯಲ್ಲಿ ಹೇಳಿರುವುದನ್ನು ಇಲ್ಲಿ ಕಾಣಬಹುದು. ಇದು ಅರ್ಥ ವಿವರಣೆ (ಅಗತ್ಯ ಎನ್ನುವುದರಲ್ಲಿ ಎರಡು ಮಾತಿಲ್ಲ) ಹಾಗೂ ವೈಜ್ಞಾನಿಕ ವಿಶ್ಲೇಷಣೆಯ ನಡುವಿನ ವ್ಯತ್ಯಾಸಕ್ಕೆ ಒಂದು ಉದಾಹರಣೆ ಅಷ್ಟೇ. ಈ ಸಂದರ್ಭದಲ್ಲಿ ಆಕ್ಷೇಪಣೆ ಇದ್ದದ್ದು ಅದನ್ನು ಪ್ರಪ್ರಥಮ ಪಾಠವಾಗಿ ಪರಿಚಯಿಸುವುದರ ಬಗ್ಗೆ ಮಾತ್ರ. ಶಕ್ತಿಯೆಂದರೆ ಏನು ಎನ್ನುವುದನ್ನು ನಂತರದಲ್ಲಿ ಪರಿಚಯಿಸುವುದು ಖಂಡಿತ ಅಗತ್ಯ. ಆದರೆ 'ಒಂದು ಆಟಿಕೆ ಚಲಿಸಲು ಕಾರಣವೇನು ?' ಎನ್ನುವ ಸರಳ ಪ್ರಶ್ನೆಗೆ ಮಗುವಿನ ಮಟ್ಟಕ್ಕೆ ಹೊಂದುವ 'ಅದನ್ನು ಬಿಚ್ಚು ; ಏನಿದೆ ನೋಡೋಣ' ಎಂಬ ಉತ್ತರವನ್ನು ನೀಡಬೇಕು.

ಕಾಡುಗಳಲ್ಲಿ ಅಲೆದಾಡುತ್ತಿದ್ದ ಆ ಸಮಯದಲ್ಲಿ ನಾನು ಬಹಳಷ್ಟು ಕಲಿತೆ. ಉದಾಹರಣೆಗೆ, ಪಕ್ಷಿಗಳ ವಲಸೆಯ ಬಗ್ಗೆ ನಾನು ಈಗಾಗಲೇ ಪ್ರಸ್ತಾಪಿಸಿದ್ದೇನೆ. ಈಗ ನಿಮಗೆ ಇನ್ನೊಂದು ಉದಾಹರಣೆಯನ್ನು ನೀಡುತ್ತೇನೆ. ಪಕ್ಷಿಗಳ ಹೆಸರನ್ನು ಹೇಳುವ ಬದಲು 'ನೋಡು, ಆ ಹಕ್ಕಿ ತನ್ನ ಪುಕ್ಕಗಳನ್ನು ಕುಕ್ಕುತ್ತಿರುವುದನ್ನು ಗಮನಿಸು. ಸ್ವಲ್ಪ ಹೆಚ್ಚಾಗಿಯೇ ತನ್ನ ಪುಕ್ಕಗಳನ್ನು ಕುಕ್ಕಿಕೊಳ್ಳುತ್ತಿದೆ. ಅದು ಯಾವ ಕಾರಣಕ್ಕಾಗಿ ಹಾಗೆ ಮಾಡುತ್ತಿದೆ ಎಂದು ನಿನಗೆ ಅನಿಸುತ್ತದೆ' ಎಂದು ಅವರು ಕೇಳುತ್ತಿದ್ದರು.

'ಪುಕ್ಕಗಳು ಅಸ್ತವ್ಯಸ್ತವಾಗಿವೆ. ಅದನ್ನು ಓರಣಗೊಳಿಸಲು ಯತ್ನಿಸುತ್ತಿದೆ' ಎಂದು ನಾನು ಊಹಿಸಿ ಹೇಳಿದೆ.

'ಸರಿ, ಪುಕ್ಕಗಳು ಏಕೆ ಅಥವಾ ಯಾವಾಗ ಅಸ್ತವ್ಯಸ್ತವಾಗುತ್ತವೆ' ಎಂದು ಅವರು ಕೇಳಿದರು.

'ಅದು ಹಾರುವಾಗ, ಅದು ಅತ್ತ ಇತ್ತ ಚಲಿಸುವಾಗ.'

'ಹಾಗಾದರೆ, ಪುಕ್ಕಗಳನ್ನು ಓರಣಗೊಳಿಸಿದ ನಂತರ, ಅತ್ತ ಇತ್ತ ಓಡಾಡುವುದಕ್ಕಿಂತ ಹೆಚ್ಚು, ಹಾರಿಬಂದು ನೆಲಕ್ಕಿಳಿದಾಗ ತನ್ನ ಪುಕ್ಕಗಳನ್ನು ಅದು ಕುಕ್ಕಿಕೊಳ್ಳುತ್ತದೆ ಎಂದು ನೀನು ಊಹಿಸಬಹುದು. ಸರಿ, ಈಗ ನಾವು ನೋಡೋಣ' ಎಂದು ಅವರು ಹೇಳುತ್ತಿದ್ದರು.

ನಾವು ನೋಡಲು, ಗಮನಿಸಲು ಪ್ರಾರಂಭಿಸುತ್ತಿದ್ದೆವು. ಆದರೆ ಅದು ಅತ್ತ ಇತ್ತ ಓಡಾಡುವ ಸಮಯದಲ್ಲಿ ಮತ್ತು ಹಾರಿ ಬಂದು ನೆಲಕ್ಕಿಳಿದ ಸಮಯದಲ್ಲಿ ತನ್ನ ಪುಕ್ಕಗಳನ್ನು ಕುಕ್ಕುವ ರೀತಿಯಲ್ಲಿ ಯಾವುದೇ ವ್ಯತ್ಯಾಸ ಇರದಿದ್ದದ್ದು ನನ್ನ ಗಮನಕ್ಕೆ ಬಂತು. ಹಾಗಾಗಿ ನನ್ನ ಊಹೆ ತಪ್ಪಾಗಿತ್ತು ಹಾಗೂ ನಾನು ನಿಜವಾದ ಕಾರಣವನ್ನು ಊಹಿಸಲು ಅಸಮರ್ಥನಾದಾಗ ನನ್ನ ತಂದೆ ಕಾರಣವನ್ನು ನನಗೆ ತಿಳಿಸಿದರು:

'ಹಕ್ಕಿಗಳ ಮೈಮೇಲೆ ಹೇನುಗಳು ಇರುತ್ತವೆ. ಪುಕ್ಕಗಳಿಗೆ ಅಂಟಿದಂತೆ ಹೊಟ್ಟು ಇರುತ್ತದೆ. ಇದನ್ನು ಹೇನುಗಳು ತಿನ್ನುತ್ತವೆ. ಹಕ್ಕಿಗಳ ಕಾಲಿನ ಕೀಲುಗಳ ಸಂದಿಯಲ್ಲಿ ಮೇಣದಂತಹ ವಸ್ತುವೊಂದು ಸ್ರವಿಸುತ್ತದೆ. ಅದನ್ನು ಅಲ್ಲಿ ವಾಸಿಸುವ ಉಣ್ಣೆಗಳು ತಿನ್ನುತ್ತವೆ. ಹೀಗೆ ಯಥೇಚ್ಛವಾಗಿ ಸಿಗುವ ಆಹಾರವನ್ನು ಉಣ್ಣೆಗಳು ಸ್ವೇಚ್ಛೆಯಿಂದ ಬಳಸುವುದರಿಂದ ಅದು ಜೀರ್ಣವಾಗದೆ ಹೆಚ್ಚು ಸಕ್ಕರೆಯ ಅಂಶ ಇರುವ ದ್ರವವನ್ನು ದೇಹದಿಂದ ಹೊರಗೆ ಹಾಕುತ್ತದೆ. ಈ ದ್ರವದಲ್ಲಿ ಸೂಕ್ಷ್ಮ ಜೀವಿಯೊಂದು ವಾಸಿಸುತ್ತದೆ' ಇತ್ಯಾದಿ. ಇತ್ಯಾದಿ.

ಮೇಲೆ ಹೇಳಿದುದೆಲ್ಲ ವಾಸ್ತವ ಎಂದು ಹೇಳಲಾಗುವುದಿಲ್ಲ. ಆದರೆ ಅದರ ಹಿಂದಿನ ತುಡಿತ ಸತ್ಯ ಮತ್ತು ಸೂಕ್ತ. ಒಂದು ಜೀವಿಯ ಮೇಲೆ ಇನ್ನೊಂದು, ಇನ್ನೊಂದರ ಮೇಲೆ ಮತ್ತೊಂದು ಅವಲಂಬಿತವಾಗಿರುವ ಪರಾವಲಂಬಿತನದ ಬಗ್ಗೆ ನಾನು ಮೊದಲು ತಿಳಿದುಕೊಂಡೆ. ಎರಡನೆಯದಾಗಿ, 'ಈ ಪ್ರಪಂಚದಲ್ಲಿ, ಒಂದು ಆಹಾರದ ಮೂಲ ಇದೆ ಎಂತಾದಾಗ, ಯಾವುದೋ ಒಂದು ಜೀವಿ ಇದನ್ನು ಬಳಸಿಕೊಳ್ಳುವ ದಾರಿಯನ್ನು ಹೇಗಾದರೂ ಹುಡುಕಿಕೊಳ್ಳುತ್ತದೆ. ಇಲ್ಲಿ ಅಳಿದುಳಿದ ಆಹಾರವನ್ನು ಮತ್ತೊಂದು ಜೀವಿ ಬಳಸಿಕೊಳ್ಳುತ್ತದೆ' ಎಂಬುದನ್ನು ಅವರು ತಿಳಿಸಿದರು.

ಯಾವುದೇ ಅಂತಿಮ ನಿರ್ಧಾರಕ್ಕೆ ಬರಲಾಗದಿದ್ದರೂ ಈ ಅವಲೋಕನದ ಪರಿಣಾಮವಾಗಿ ಸಿಕ್ಕಿದ್ದು ಮಾತ್ರ ಅತ್ಯಂತ ಅಮೂಲ್ಯವಾದದ್ದು ಮತ್ತು ಅದ್ಭುತವಾದದ್ದು. ಇದು ಬಹಳ ಚೇತೋಹಾರಕವಾಗಿತ್ತು.

ನನಗೆ ಯಾರಾದರು ಏನನ್ನು ಮಾಡಬೇಕು, ಏನನ್ನು ಗುರುತಿಸಬೇಕು ಎನ್ನುವುದನ್ನು ಒಳಗೊಂಡ ಪಟ್ಟಿಯೊಂದನ್ನು ತಯಾರಿಸಲು ಹೇಳಿದರು ಎಂದು ಭಾವಿಸೋಣ. ಈಗಾಗಲೇ ನಾನು ತಯಾರಿಸಿರುವ ಹತ್ತು ಹಲವಾರು ಪಟ್ಟಿಗಳೊಂದಿಗೆ ಇದೂ ಒಂದು. ಪರಿವೀಕ್ಷಿಸುವಾಗ ಈ ರೀತಿಯ ಮಾದರಿಯನ್ನು ಅನುಸರಿಸುವುದು ಅಷ್ಟೇನೂ ಉತ್ಸಾಹದಾಯಕವಾಗಿ ಇರುವುದಿಲ್ಲ. ಅಲ್ಲದೆ ಇದರಿಂದ ಅಂತಹ ಉಪಯೋಗವೂ ಕಾಣಬರುವುದಿಲ್ಲ.

ನೀವು ಈ ಕುರಿತು ಗಮನಿಸುವ, ಗುರುತಿಸುವ ಬಗೆಯನ್ನು ಇತರರಿಗೆ ತಿಳಿಯಹೇಳಬಯಸಿದರೆ ಅದರಿಂದ ಅದ್ಭುತವಾದದ್ದನ್ನೇನೋ ನಿರೀಕ್ಷಿಸ ಬಹುದು ಎಂದು ತೋರಿಸುವುದು ಬಹಳ ಮುಖ್ಯ ಎಂದು ನನ್ನ ಅಭಿಪ್ರಾಯ. ಇದು ನನ್ನ ಮಟ್ಟಿಗಂತೂ ನಿಜ. ವಿಜ್ಞಾನವೆಂದರೆ 'ತಾಳ್ಮೆ' ಎನ್ನುವುದನ್ನು ನಾನು ಆಗ ಕಲಿತೆ. ಲಕ್ಷ್ಯವಿಟ್ಟು ಗಮನಿಸಿದಾಗ ಪ್ರತಿಬಾರಿಯಲ್ಲದಿದ್ದರೂ ಆಗಾಗ ಅದ್ಭುತವಾದ ಅನುಭವವೊಂದು ನಿಮ್ಮದಾಗುತ್ತದೆ. ಹಾಗಾಗಿ ನನ್ನಲ್ಲಿನ ಪರಿಪಕ್ವತೆ ಹೆಚ್ಚಿದಂತೆ, ದಿನಗಟ್ಟಲೆ, ವರ್ಷಗಳ ಕಾಲ ನಾನು ಬಹಳ ಶ್ರಮವಹಿಸಿ ಕೆಲಸದಲ್ಲಿ ತೊಡಗಿಸಿಕೊಳ್ಳುತ್ತಿದ್ದೆ. ಹಲವು ಬಾರಿ ನನ್ನ ಈ ಪ್ರಯತ್ನ ಯಶಸ್ಸು ನೀಡುತ್ತಿರಲಿಲ್ಲ. ಆದರೆ ಆಗೊಮ್ಮೆ ಈಗೊಮ್ಮೆ ಅತ್ಯದ್ಭುತವಾದ ಹೊಸ ಅರಿವು ನನ್ನದಾಗುತ್ತಿತ್ತು. ನಾನು ಚಿಕ್ಕಂದಿನಲ್ಲಿ ಕಲಿತ 'ನಿರೀಕ್ಷಣೆ'ಯಲ್ಲಿ ಫಲವಿದೆ ಎನ್ನುವುದರ ಫಲ ಇದಾಗಿತ್ತು.

ಕಾಕತಾಳೀಯವಾಗಿ, ನಾವು ಕಾಡುಗಳಲ್ಲಿ ತಿರುಗಾಡಲು ಹೋದಾಗ ಇನ್ನು ಹಲವಾರು ವಿಷಯಗಳನ್ನು ತಿಳಿದುಕೊಂಡೆವು. ಸಾಮಾನ್ಯವಾಗಿ

ಗೋಚರವಾಗುವ ವಿಷಯಗಳಲ್ಲದೆ, ಸಸ್ಯಗಳ ಬೆಳವಣಿಗೆ, ಮರಗಳು ಸೂರ್ಯನ ಕಿರಣಗಳಿಗಾಗಿ ಸಾಧ್ಯವಾದಷ್ಟು ಎತ್ತರವಾಗಿ ಬೆಳೆಯಲು ನಡೆಸುವ ಪ್ರಯತ್ನಪೂರ್ವಕ ಯತ್ನ, ೩೫–೪೦ ಅಡಿಗಳಿಗೂ ಮೇಲ್ಪಟ್ಟ ಎತ್ತರಕ್ಕೆ ನೀರನ್ನು ಕೊಂಡೊಯ್ಯುವ ಸಮಸ್ಯೆಯನ್ನು ನಿವಾರಿಸಿಕೊಳ್ಳುವ ಬಗೆ, ಈ ಎಲ್ಲ ಗಿಡ ಮರಗಳ ನಡುವಿನಿಂದ ತೂರಿಕೊಂಡು ಬರುವ ಅಲ್ಪ ಸ್ವಲ್ಪ ಸೂರ್ಯ ಕಿರಣಗಳನ್ನು ಹಿಡಿದಿಡಲು ಭೂಮಟ್ಟದಲ್ಲಿನ ಸಸ್ಯಗಳ ಪ್ರಯತ್ನ ಇತ್ಯಾದಿ ಇತ್ಯಾದಿ.

ಈ ಎಲ್ಲ ಅನುಭವ ಪಡೆದ ನಂತರದಲ್ಲಿ, ಒಂದು ದಿನ ನನ್ನ ತಂದೆ ನನ್ನನ್ನು ಮತ್ತೆ ಕಾಡಿಗೆ ಕರೆದುಕೊಂಡು ಹೋಗಿ ಹೇಳಿದರು, 'ಇಷ್ಟು ದಿನ ನಾವು ಈ ಕಾಡಿನಲ್ಲಿ ಏನನ್ನು ನೋಡಿದ್ದೇವೆಯೋ ಅದು ಇಲ್ಲಿ ಏನು ನಡೆಯುತ್ತಿದ್ದೆಯೋ ಅದರ ಅರ್ಧದಷ್ಟು ಮಾತ್ರ ಆಗಿದೆ' ಎಂದು.

'ಏನಿದರ ಅರ್ಥ ?' ಎಂದೆ ನಾನು.

ಅವರು ಹೇಳಿದರು 'ನಾವು ಇಲ್ಲಿ ಪ್ರತಿಯೊಂದು ಹೇಗೆ ಬೆಳೆಯುತ್ತದೆ ಎನ್ನುವುದನ್ನು ಮಾತ್ರ ಗಮನಿಸುತ್ತಿದ್ದೇವೆ. ಈ ಬೆಳವಣಿಗೆಯ ಜೊತೆಗೆ ಸ್ವಲ್ಪಮಟ್ಟಿನ ನಶಿಸುವಿಕೆಯೂ ಇರಬೇಕು. ಇಲ್ಲದಿದ್ದಲ್ಲಿ ನಮ್ಮಲ್ಲಿರುವ ಸಂಪನ್ಮೂಲಗಳು ನಿರಂತರವಾಗಿ ಬಳಕೆಯಾಗಿ ಇಲ್ಲದಂತಾಗುತ್ತದೆ. ಬಳಸಲು ಏನೂ ಇಲ್ಲದಾಗಿ ಮರಗಳು ಸಾಯುತ್ತವೆ. ಇವು ಪರಿಸರ ದೊಂದಿಗೆ ಸೇರದೇ ಹೋದರೆ ಸಂಪನ್ಮೂಲಗಳು ಲಭ್ಯವಿಲ್ಲದ ಕಾರಣ ಬೇರೇನೂ ಬೆಳೆಯುವುದಿಲ್ಲ. ಯಾವ ಮಟ್ಟದ ಬೆಳವಣಿಗೆ ಇರುತ್ತದೋ ಅದೇ ಮಟ್ಟದ ನಶಿಸುವಿಕೆಯೂ ಇರಬೇಕು' ಎಂದು.

ನಂತರದ ನಮ್ಮ ತಿರುಗಾಟದಲ್ಲಿ ನಾವು ಹಳೆಯ ಮರದ ಬೊಡ್ಡೆಗಳನ್ನು ಸೀಳಿ, ಒಡೆದು ಅಲ್ಲಿ ಬೆಳೆಯುತ್ತಿದ್ದ ಶಿಲೀಂಧ್ರಗಳನ್ನು ನೋಡಿದೆವು. ಸೂಕ್ಷ್ಮಾಣು ಜೀವಿಗಳನ್ನು ತೋರಿಸಲು ಅವರಿಗೆ ಸಾಧ್ಯವಾಗಲಿಲ್ಲ. ಆದರೆ ಅದರ ಪರಿಣಾಮಗಳನ್ನು ನೋಡಿದೆವು, ಇತ್ಯಾದಿ ಇತ್ಯಾದಿ ಈ ಕಾಡು, ಈ ರೀತಿಯ ನಿರಂತರ ಚಕ್ರಿಕ ಕ್ರಿಯೆಯನ್ನು ಕಾಣುವಂತಹ ಒಂದು ಪ್ರಕ್ರಿಯೆಯಾಗಿ ನನಗೆ ಭಾಸವಾಗಿತ್ತು.

ಅನೇಕ ಬಾರಿ ಈ ರೀತಿಯ ಅನೇಕ ಸಂಗತಿಗಳನ್ನು ವಿಚಿತ್ರವೆನಿಸುವ ರೀತಿಯಲ್ಲಿ ಅವರು ಪ್ರಾರಂಭಿಸುತ್ತಿದ್ದರು: 'ಮಂಗಳ ಗ್ರಹದಿಂದ ಒಂದು ಜೀವಿ ಈ ಲೋಕಕ್ಕೆ ಬಂತು ಎಂದು ಭಾವಿಸೋಣ'. ಉದಾಹರಣೆಗೆ, ನಾನು ನನ್ನ ವಿದ್ಯುತ್‌ಚಾಲಿತ ರೈಲು ಬಂಡಿಯೊಂದಿಗೆ ಆಡುತ್ತಿದ್ದಾಗ ಅವರು ಹೇಳಿದರು – 'ನೀರಿನಿಂದ ತಿರುಗಿಸಲ್ಪಡುವ ಒಂದು ಬೃಹತ್ ಗಾಲಿಯಿದೆ. ಈ ಗಾಲಿಗೆ ಹಲವಾರು ತಾಮ್ರದ ತಂತಿಗಳು ಜೋಡಿಸಲ್ಪಟ್ಟಿವೆ ಹಾಗೂ ಈ ತಂತಿಗಳು ಅನೇಕ ದಿಕ್ಕುಗಳಲ್ಲಿ ಬಹುದೂರದವರೆಗೆ ಹರಡಿವೆ. ದೊಡ್ಡ ಗಾಲಿಯು ತಿರುಗಿದಾಗ ತಿರುಗುವಂಥ ಹಲವಾರು ಚಿಕ್ಕ ಚಿಕ್ಕ ಗಾಲಿಗಳಿವೆ. ಅವುಗಳ ನಡುವೆ ಸಂಬಂಧ ಏರ್ಪಟ್ಟಿರುವುದು ಕೇವಲ ತಾಮ್ರ ಮತ್ತು




ಕಬ್ಬಿಣದಿಂದ. ಚಲಿಸುವ ಯಾವುದೇ ಭಾಗಗಳು ಇಲ್ಲಿಲ್ಲ. ಇಲ್ಲಿ ಒಂದು ಗಾಲಿಯನ್ನು ತಿರುಗಿಸಿದರೆ ಎಲ್ಲೆಡೆಯಿರುವ ಚಿಕ್ಕ ಚಿಕ್ಕ ಗಾಲಿಗಳು ತಿರುಗುತ್ತವೆ. ನಿನ್ನ ರೈಲು ಕೂಡ ಅದರಲ್ಲೊಂದು. ಹೀಗೆ ಒಂದು ಅದ್ಭುತಲೋಕದ ಪರಿಚಯವನ್ನು ನನ್ನ ತಂದೆ ನನಗೆ ನೀಡಿದ್ದರು.

ಇದರಿಂದ ಅವರಿಗೆ ಸಿಕ್ಕಿದ್ದೇನು ಎಂಬ ಯೋಚನೆ ನಿಮಗೆ ಬರಬಹುದು. ನಾನು ಓದುವುದಕ್ಕೆ ಎಂ.ಐ.ಟಿ. ಮತ್ತು ಪ್ರಿನ್ಸ್‌ಟನ್‌ಗೆ ಹೋದೆ. ಮನೆಗೆ ಹಿಂದಿರುಗಿದ ನಂತರ ಅವರು ಹೇಳಿದರು, "ಈಗ ನೀನು ವಿಜ್ಞಾನದಲ್ಲಿ ಶಿಕ್ಷಣವನ್ನು ಪಡೆದಿದ್ದೀಯ. ಇಲ್ಲಿಯವರೆಗೆ ನನಗೆ ಅರ್ಥವಾಗದ ವಿಷಯವೊಂದರ ಬಗ್ಗೆ ತಿಳಿದುಕೊಳ್ಳುವ ಹಂಬಲವಿದೆ. ಆದುದರಿಂದ ಅದನ್ನು ನೀನು ನನಗೆ ತಿಳಿಯಪಡಿಸಬೇಕು."

ನಾನು ಆಗಲಿ ಎಂದೆ.

ಅವರು ಹೇಳಿದರು 'ಒಂದು ಅಣು, ಪ್ರಚೋದಿತ ಸ್ಥಿತಿಯಿಂದ ಕೆಳಗಿನ ಸ್ಥಿತಿಗೆ ಹೋದಾಗ ಬೆಳಕು ಹೊರಹೊಮ್ಮುತ್ತದೆ ಎಂದು ನನಗೆ ತಿಳಿದಿದೆ'.

'ಹೌದು' ಎಂದೆ ನಾನು.

'ಬೆಳಕು ಎನ್ನುವುದು ಒಂದು ಬಗೆಯ ಕಣ. ಅದನ್ನು ಫೋಟಾನ್ ಎಂದು ಕರೆಯುತ್ತಾರೆ.'

'ಹೌದು'

'ಹಾಗಾದರೆ ಒಂದು ಅಣು, ಪ್ರಚೋದಿತ ಸ್ಥಿತಿಯಿಂದ ಕೆಳ ಸ್ಥಿತಿಗೆ ಇಳಿದಾಗ ಫೋಟಾನ್ ಬಿಡುಗಡೆಯಾಗುತ್ತದೆ ಎಂದಾದರೆ, ಅಣುವಿನಲ್ಲಿದ್ದ ಆ ಫೋಟಾನ್ ಪ್ರಚೋದಿತ ಸ್ಥಿತಿಯಲ್ಲಿದ್ದಿರಬೇಕು.'

'ಇಲ್ಲ. ಹಾಗಾಗುವುದಿಲ್ಲ' ಎಂದೆ ನಾನು.

'ಫೋಟಾನ್ ಪ್ರಚೋದಿತ ಸ್ಥಿತಿಯಲ್ಲಿ ಇರಲಿಲ್ಲ ಎಂದಾದರೆ ಈ ವಿದ್ಯಮಾನವನ್ನು ಹೇಗೆ ವಿವರಿಸುತ್ತೀಯ ?' ಎಂದು ಕೇಳಿದರು.

ನಾನು ಕೆಲವು ನಿಮಿಷಗಳ ಕಾಲ ಯೋಚನೆ ಮಾಡಿ, 'ಕ್ಷಮಿಸಿ. ಇದರ ಬಗ್ಗೆ ನನಗೆ ತಿಳಿದಿಲ್ಲ. ನಾನು ನಿಮಗೆ ಅದನ್ನು ವಿವರಿಸಲಾರೆ' ಎಂದೆ.

ನನಗೆ ಏನನ್ನಾದರೂ ಕಲಿಸಬೇಕು ಎನ್ನುವ ಅವರ ಹಲವು ವರ್ಷಗಳ ಪರಿಶ್ರಮದ ವೈಫಲ್ಯ ಅವರಿಗೆ ಬಹಳ ನಿರಾಸೆಯನ್ನುಂಟುಮಾಡಿತ್ತು.

ವಿಜ್ಞಾನ ಎಂದರೆ ಏನು ಎನ್ನುವುದನ್ನು ಬಹುಶಃ ಈ ರೀತಿ ಹೇಳಬಹುದು. ಈ ಭೂಮಿಯ ಮೇಲೆ ಜೀವವಿಕಾಸವಾದಾಗ ಒಂದು ಹಂತದಲ್ಲಿ, ಬೌದ್ಧಿಕವಾಗಿ ವಿಕಾಸಗೊಂಡ ಪ್ರಾಣಿಗಳನ್ನು ಕಾಣಬಹುದಿತ್ತು. ಬೌದ್ಧಿಕ ವಿಕಾಸ ಎಂದಾಕ್ಷಣ ಮನುಷ್ಯನನ್ನು ಕುರಿತು ಹೇಳಿದ್ದು ಎಂದು ಭಾವಿಸಬಾರದು. ಅನುಭವದಿಂದ ಕಲಿಯುವ, ಕ್ರೀಡೆಗಳಲ್ಲಿ ತೊಡಗುವ ಬೆಕ್ಕಿನಂತಹ ಯಾವುದೇ ಪ್ರಾಣಿಯಾಗಿರಬಹುದು. ಆದರೆ ಈ ಹಂತದಲ್ಲಿ ಪ್ರತಿಯೊಂದು ಪ್ರಾಣಿಗೂ ಅನುಭವದಿಂದ ಕಲಿಯುವ ಅನಿವಾರ್ಯತೆ ಇದ್ದಿರಬಹುದಾದರೂ, ಈ ವಿಕಾಸದ ಪ್ರಕ್ರಿಯೆಯಲ್ಲಿ, ಸಸ್ತನಿ ಪ್ರಭೇದಗಳಿಗೆ ಸೇರಿದಂಥ ಪ್ರಾಣಿಗಳು, ತಮ್ಮ ಅನುಭವದಿಂದ ಕಲಿಯುವುದರಲ್ಲಿ, ಇತರರನ್ನು ನೋಡಿ ಕಲಿಯುವುದರಲ್ಲಿ, ಪರಸ್ಪರ ತಮ್ಮ ಅನುಭವವನ್ನು ಹಂಚಿಕೊಳ್ಳುವಲ್ಲಿ, ಇತರರಿಗೆ ಕಂಡದ್ದನ್ನು ಕಾಣುವುದರಲ್ಲಿ ಕ್ಷಿಪ್ರ ಪ್ರಗತಿಯನ್ನು ಕಂಡಾಗ, ಇತರ ಪ್ರಾಣಿಗಳಿಗೂ ಅದನ್ನು ಸಾಧಿಸುವ ಸಾಧ್ಯತೆ ಉಂಟಾಗಿರಬಹುದು. ಆದರೆ ಈ ವರ್ಗಾವಣೆ ಆಗುವ ಮುನ್ನವೇ ಅಥವಾ ವರ್ಗಾವಣೆ ಆದ ನಂತರ ಮರುವರ್ಗಾವಣೆ ಆಗುವ ಮುನ್ನವೇ ಅವು ಸಾವನ್ನಪ್ಪಿರಬಹುದು.

ಈಗ ನಮ್ಮ ಮುಂದಿರುವ ಪ್ರಶ್ನೆಗಳೇನೆಂದರೆ, ಯಾವುದೇ ಒಂದು ಕಲಿಕೆ ಆಗಿದೆ ಎನ್ನುವುದಾದರೆ, ಯಾವ ಗತಿಯಲ್ಲಿ ನಾವು ಕಲಿಯುತ್ತೇವೆಯೋ ಅದು ನಾವು ಮರೆಯುವ ಗತಿಗಿಂತ ಹೆಚ್ಚಾಗಿರಬಹುದೇ, ಈ ಮರೆಯುವಿಕೆ ದುರ್ಬಲ ನೆನಪಿನ ಶಕ್ತಿಯಿಂದ ಆಗಿರಬಹುದೇ, ಅಥವಾ ಅನುಭವವನ್ನು ಹೊಂದಿದ ಅಥವಾ ಅನುಭವದ ವರ್ಗಾವಣೆಯನ್ನು ಪಡೆಯಬೇಕಾಗಿದ್ದ ಪ್ರಾಣಿಯ ಸಾವಿನಿಂದ ಆಗಿರಬಹುದೇ? – ಎನ್ನುವುದು.

ಬಹುಶಃ, ಕಾಲಾನಂತರದಲ್ಲಿ ಮನುಷ್ಯನಂಥ ಪ್ರಾಣಿಗಳ ಕಲಿಯುವಿಕೆಯ ಗತಿ ಯಾವ ಮಟ್ಟವನ್ನು ತಲುಪಿತೆಂದರೆ, ಇದ್ದಕ್ಕಿದ್ದಂತೆ ಹಿಂದೆಂದೂ ಕಂಡಿರದಂಥ ಹೊಸ ಅನುಭವವೊಂದು ಅವುಗಳಿಗಾಯಿತು. ವ್ಯಕ್ತಿಗತವಾಗಿ ಕಲಿಯುವುದು ಸಾಧ್ಯವಾಗಿತ್ತು, ಕಲಿತದ್ದು ಇನ್ನೊಬ್ಬರಿಗೆ, ಮತ್ತೊಬ್ಬರಿಗೆ ವರ್ಗಾವಣೆ ಆಗಬಹುದಿತ್ತು. ಈ ವರ್ಗಾವಣೆ ದಕ್ಕುವ ಗತಿಯಲ್ಲಿ ನಡೆಯುತ್ತಿತ್ತು. ಹೀಗಾಗಿ, ಗಳಿಸಿದ ಜ್ಞಾನದ ಸಂಗ್ರಹ ಸಾಧ್ಯವಾಯಿತು.

ಇದನ್ನು 'ಕಾಲ ಬಂಧ' ಎಂದು ಕರೆಯಲಾಗಿದೆ. ಈ ಸಭಾಂಗಣದಲ್ಲಿ ಇಂದು ಹಾಜರಿದ್ದು, ಅನುಭವಗಳನ್ನು ತಳುಕಿಹಾಕಿಕೊಂಡು, ಪರಸ್ಪರ ಕಲಿಯುವ ಪ್ರಯತ್ನದಲ್ಲಿರುವ ನಿಮ್ಮನ್ನು ಆ

ಪ್ರಾಣಿಗಳ ಒಂದು ಮಾದರಿ ಎಂದು ಹೇಳಬಹುದು.

ಒಂದು ಜನಪದಕ್ಕೆ ಸೇರಿದಂತೆ ಗಳಿಸಿದ ಜ್ಞಾನವನ್ನು ಒಂದು ಪೀಳಿಗೆಯಿಂದ ಮತ್ತೊಂದಕ್ಕೆ ವರ್ಗಾವಣೆ ಮಾಡುವ ಈ ವಿದ್ಯಮಾನ ಒಂದು ಹೊಸ ವಿಷಯವಾಗಿತ್ತು. ಆದರೆ, ಈ ವಿದ್ಯಮಾನಕ್ಕೆ ಅಂಟಿದ ತೊಡಕೊಂದಿತ್ತು. ಅದೇನೆಂದರೆ ಉಪಯೋಗಕ್ಕೆ ಬಾರದಂತಹ ವಿಚಾರಗಳ ವರ್ಗಾವಣೆ ಸಾಧ್ಯವಿತ್ತು. ಹೀಗಾಗಿ ಕಾಲಕ್ರಮೇಣ ಸಂಗ್ರಹವಾದ ಮಾಹಿತಿ ಉಪಯುಕ್ತ ಹಾಗೂ ಕಾರ್ಯೋಪಯೋಗಿ ವಿಷಯಗಳಿಂದ ಕೂಡಿದ್ದರೂ ಸಹ ಅದರ ಜೊತೆಗೆ ಹೆಚ್ಚಿನ ಪ್ರಮಾಣದಲ್ಲಿ ವಿಚಿತ್ರವಾದ ಹಾಗೂ ಪೂರ್ವಗ್ರಹಪೀಡಿತ ನಂಬಿಕೆಗಳಿಂದಲೂ ಕೂಡಿತ್ತು ಎಂಬುದನ್ನು ಒಂದು ಕಾಲ ಘಟ್ಟದಲ್ಲಿ ನೋಡಬಹುದು.

ಹಿಂದಿನಿಂದ ವರ್ಗಾವಣೆಯಾದದ್ದನ್ನು ಹಾಗೆಯೇ ಸ್ವೀಕರಿಸದೆ, ನಿರಂತರವಾಗಿ ಹೊಸ ಅನುಭವಗಳ ಆಧಾರದ ಮೇಲೆ ಪರಿಸ್ಥಿತಿಯನ್ನು ಅವಲೋಕಿಸುವುದರ ಮೂಲಕ ಈ ವ್ಯಸನದಿಂದ ಮುಕ್ತವಾಗುವ ರೀತಿಯನ್ನು ನಂತರದಲ್ಲಿ ಕಂಡುಕೊಳ್ಳಲಾಯಿತು. ನನ್ನ ಪ್ರಕಾರ ನಿಜ ಅರ್ಥದಲ್ಲಿ ಇದನ್ನು ವಿಜ್ಞಾನವೆಂದು ಕರೆಯಬಹುದು.

ನಿಮಗೆ ಈಗಾಗಲೇ ತಿಳಿದಿರುವ ವಿಷಯವೊಂದನ್ನು ಮತ್ತೆ ನಿಮ್ಮ ಗಮನಕ್ಕೆ ತರುವ ಮೂಲಕ ನಿಮ್ಮಲ್ಲಿ ಮತ್ತೆ ಉತ್ಸಾಹವನ್ನು ತುಂಬಲು ಇಚ್ಛಿಸುತ್ತೇನೆ. ನೈತಿಕತೆಯ ಪಾಠವನ್ನು ನಮ್ಮ ಧರ್ಮಗಳು ನೀಡುತ್ತವೆ. ಈ ತಿಳುವಳಿಕೆ ನೀಡುವ ಪ್ರಕ್ರಿಯೆ ಹೇಗೆ ಒಂದೇ ಬಾರಿಗೆ ನಿಲ್ಲದೆ ನಿರಂತರವಾಗಿ ನಡೆಯುವ ಮೂಲಕ ಜನರನ್ನು ಉದ್ದೀಪನ ಗೊಳಿಸುತ್ತದೆಯೋ ಅದೇ ರೀತಿ ವಿಜ್ಞಾನಕ್ಕೆ ಸಂಬಂಧಿಸಿದಂತೆ ಕೂಡ ಈ ಕ್ರಿಯೆ ಸತತವಾಗಿ ಆಗುವ ಅಗತ್ಯವಿದೆ.

ಇದಲ್ಲದೆ, ಇದಕ್ಕೆ ಇನ್ನೂ ಹಲವು ಆಯಾಮಗಳಿವೆ. ವಿಜ್ಞಾನದಿಂದ ಸೃಷ್ಟಿಯಾದ ವಿಶ್ವಪ್ರಜ್ಞೆಯ ಮೌಲ್ಯ ಅವುಗಳಲ್ಲಿ ಒಂದು. ಈ ಹೊಸ ಅನುಭವಗಳ ಕಾರಣ ಅನಾವರಣಗೊಂಡ ವಿಸ್ಮಯಕರ ಮತ್ತು ಅಲೌಕಿಕ ಜಗತ್ತು ಮತ್ತೊಂದು. ಅವು 'ಚಲನೆಗೆ ಕಾರಣ ಸೂರ್ಯನ ಕಿರಣಗಳು' ಎಂದುದರ ಬಗ್ಗೆ ಚರ್ಚಿಸುವಾಗ ಕಂಡುಬಂದ ಕೌತುಕಮಯ ಸಂಗತಿಗಳು. (ಆದರೆ ಪ್ರತಿಯೊಂದು ಚಲನೆಗೂ ಸೂರ್ಯನ ಕಿರಣಗಳು ಕಾರಣವಾಗುವುದಿಲ್ಲ. ಭೂಮಿಯ ಪರಿಕ್ರಮಣಕ್ಕೂ ಸೂರ್ಯನ ಕಿರಣಗಳಿಗೂ ಯಾವುದೇ ಸಂಬಂಧವಿಲ್ಲ. ಇತ್ತೀಚೆಗೆ ಅಣು ಪ್ರಕ್ರಿಯೆಯಿಂದ ಉತ್ಪಾದಿಸಲಾದ ಶಕ್ತಿ ಮತ್ತೊಂದು ಶಕ್ತಿಯ ಮೂಲವೇ ಹೌದು. ಬಹುಶಃ ಅಗ್ನಿಪರ್ವತಗಳ ಚಟುವಟಿಕೆಗೆ ಕಾರಣ ಬೇರೆಯೇ ಒಂದು ಶಕ್ತಿಯ ಮೂಲ ಇರಬೇಕು.)

ವಿಜ್ಞಾನದ ವೈಶಿಷ್ಟ್ಯತೆಗಳಲ್ಲಿ ಇನ್ನೊಂದನ್ನು ಹೇಳುವುದಾದರೆ ಅದು ತರ್ಕಬದ್ಧವಾಗಿ ಯೋಚಿಸುವುದರ ಮಹತ್ವ ಹಾಗೂ ಯೋಚನಾ ಸ್ವಾತಂತ್ರ್ಯದ ಪ್ರಾಮುಖ್ಯತೆಯನ್ನು ತಿಳಿಸುತ್ತದೆ.

ಹಿಂದೆ ಹೇಳಿದ್ದೆಲ್ಲಾ ಸತ್ಯವೇ ?– ಎಂದು ಪ್ರಶ್ನಿಸುವುದರ ಗುಣಾತ್ಮಕ ಪರಿಣಾಮ ಇದು. ವಿಜ್ಞಾನದ ಅಭಿವೃದ್ಧಿಗಾಗಿ ಕೆಲಸ ಮಾಡುವಾಗ ಹಲವು ಬಾರಿ ಒಂದು ಕಾರ್ಯವಿಧಾನವನ್ನು ಅನುಸರಿಸಲಾಗುತ್ತದೆ. 'ನಾವು ಪ್ರಯೋಗಗಳನ್ನು ಮಾಡುತ್ತೇವೆ, ಅದರ ಪರಿಣಾಮವನ್ನು ಅವಲೋಕಿಸುತ್ತೇವೆ. ಹಾಗೂ ಅದರ ಆಧಾರದ ಮೇಲೆ ಹೀಗೆ ಅಥವಾ ಹಾಗೆ ಮಾಡುತ್ತೇವೆ' ಎಂದು ಹೇಳುವುದು ಸರಳ. ನೀವು ಆ ಕಾರ್ಯ ವಿಧಾನವನ್ನು ಯಥಾವತ್ ಅನುಸರಿಸಬಹುದು. ಆದರೆ, ಹೇಗೆ ಅನೇಕ ಮಹಾನ್ ಧರ್ಮಗಳು, ಮಹಾನ್ ಗುರುಗಳು ಪ್ರತಿಪಾದಿಸಿದ ತತ್ವಗಳ ಹೂರಣವನ್ನು ಮರೆತು ಕೇವಲ ಕಾರ್ಯವಿಧಾನಕ್ಕೆ ಕಟ್ಟುಬಿದ್ದು ನಶಿಸಿ ಹೋದುವೋ ಅದೇ ರೀತಿ ಕಾರ್ಯವಿಧಾನವನ್ನು ಮಾತ್ರ ಅನುಸರಿಸಿ ಅದನ್ನು ವಿಜ್ಞಾನ ಎನ್ನಬಹುದಾದರೂ ಅದು ಕೇವಲ ಅದರ ಅಣಕ ಮಾತ್ರ ಆಗಿರುತ್ತದೆ. ಇಂದಿನ ದಿನಗಳಲ್ಲಿ ಹಲವಾರು ಶಿಕ್ಷಣ ಸಂಸ್ಥೆಗಳು ಸೋಗಿನ ವೈಜ್ಞಾನಿಕ ಸಲಹೆಗಾರರ ಪ್ರಭಾವಕ್ಕೆ ಒಳಗಾಗಿರುವ ಕಾರಣ ಒಂದು ರೀತಿಯ ದಬ್ಬಾಳಿಕೆಗೆ ನಾವೆಲ್ಲ ಸಿಕ್ಕಿ ನರಳುವಂತಾಗಿದೆ.




ಈ ರೀತಿ ಅನುಕರಣೆಯಿಂದ ಕೇವಲ ಪರಿಣತರನ್ನು ಮಾತ್ರ ತಯಾರು ಮಾಡಬಹುದು. ಆದರೆ ಕಲಿಕೆಯ ಪ್ರಥಮ ಹಂತದಲ್ಲಿರುವ ಮಕ್ಕಳಿಗೆ ಶಿಕ್ಷಕರಾಗಿರುವ ನೀವು ಈ ಪರಿಣತಿಯನ್ನು ಪ್ರಶ್ನೆ ಮಾಡಬಹುದು. ನಿಜಾರ್ಥದಲ್ಲಿ 'ಪರಿಣತರ ಅಜ್ಞಾನದ ಬಗೆಗಿನ ನಂಬುಗೆಯೇ ವಿಜ್ಞಾನ' ಎಂದೂ ಕೂಡ ನಾನು ವಿಜ್ಞಾನವನ್ನು ವ್ಯಾಖ್ಯಾನಿಸಬಲ್ಲೆ.

'ವಿಜ್ಞಾನವು ಇದು, ಇದು ಮತ್ತು ಇದನ್ನು ಕಲಿಸುತ್ತದೆ' ಎಂದು ಯಾರಾದರೂ ಹೇಳಿದರೆ ಅದು ಸೂಕ್ತವಲ್ಲ. ಏಕೆಂದರೆ ಕಲಿಕೆಯು ಅನುಭವದಿಂದ ಆಗುತ್ತದೆಯೇ ಹೊರತು ವಿಜ್ಞಾನದಿಂದಲ್ಲ. 'ವಿಜ್ಞಾನವು ಇದೆಲ್ಲವನ್ನೂ ಪ್ರಮಾಣೀಕರಿಸಿದೆ (ತೋರಿಸಿದೆ)' ಎಂದು ಅವರು ನಿಮಗೆ ಹೇಳಿದರೆ 'ವಿಜ್ಞಾನವು ಹೇಗೆ ತೋರಿಸುತ್ತದೆ ?', 'ವಿಜ್ಞಾನಿಗಳು ಹೇಗೆ ಕಂಡುಹಿಡಿದರು ?', 'ಹೇಗೆ ?', 'ಯಾಕೆ ?', 'ಎಲ್ಲಿ ?'– ಹೀಗೆಲ್ಲ ನೀವು ಕೇಳಬಹುದು.

'ಈ ಪ್ರಯೋಗ, ಈ ಪರಿಣಾಮ ತೋರಿಸಿದೆ' ಎಂದಾಗಬೇಕೇ ಹೊರತು, 'ವಿಜ್ಞಾನ ತೋರಿಸಿದೆ' ಎಂದಲ್ಲ. ಪ್ರಯೋಗಗಳ ಬಗ್ಗೆ ತಿಳಿದುಕೊಂಡು, ತಾಳ್ಮೆಯಿಂದ ಎಲ್ಲ ಸಾಕ್ಷ್ಯಾಧಾರಗಳನ್ನೂ ಮನನ ಮಾಡಿಕೊಂಡನಂತರ ಪ್ರಯೋಗದ ಫಲಿತಾಂಶ ವಿವೇಕಯುತವಾಗಿದೆಯೇ ಎಂಬುದರ ಬಗ್ಗೆ ತೀರ್ಮಾನಿಸಲು ಇತರರಿಗೆ ಇರುವಂತೆ ನಿಮಗೂ ಎಲ್ಲ ರೀತಿಯ ಹಕ್ಕೂ ಇರುತ್ತದೆ.

ವಿಜ್ಞಾನದಂಥ ಸಂಕೀರ್ಣವಾದ ಕ್ಷೇತ್ರದಲ್ಲಿ, ನಿಜಾರ್ಥದಲ್ಲಿ ಅದು ಒಂದು ಮಟ್ಟಕ್ಕೆ ಪ್ರಸರಿಸಲು ಸಾಧ್ಯವಾಗಿಲ್ಲ. ನಾವು ಒಂದು ಖಚಿತವಾದ, ಒಮ್ಮುಖವಾದ, ಪ್ರಸ್ತುತವಲ್ಲದ ಪ್ರಜ್ಞೆಗೆ ಜೋತುಬೀಳಬೇಕಾಗಿದೆ.

ಪ್ರಥಮ ಹಂತದ ಕಲಿಕೆಯಲ್ಲಿರುವ ಮಕ್ಕಳ ಶಿಕ್ಷಕರಾಗಿರುವ ನಿಮ್ಮಲ್ಲಿ ಸ್ಫೂರ್ತಿಯನ್ನು ತುಂಬಲು ಪ್ರಯತ್ನಿಸುತ್ತಿದ್ದೇನೆ. ಏಕೆಂದರೆ ನಿಮ್ಮನ್ನು ಮುನ್ನಡೆಸುತ್ತಿರುವ ಪರಿಣತರು ನಿಮ್ಮ ದಾರಿ ತಪ್ಪಿಸುತ್ತಿರಬಹುದು, ಹಾಗಾಗಿ ನೀವು, ಸ್ವಾಭಾವಿಕ ಬುದ್ಧಿಮತ್ತೆ ಹಾಗೂ ಲೋಕ ಜ್ಞಾನದ ಬಗ್ಗೆ ವಿಶ್ವಾಸ ಮತ್ತು ಭರವಸೆಯನ್ನು ಇಟ್ಟುಕೊಳ್ಳಬೇಕಾಗಿದೆ.

ಕೊನೆಯದಾಗಿ ಈ 'ಕಾಲಬಂಧ'ದ ಬಗ್ಗೆ ಹೇಳುವುದಾದರೆ, ಒಬ್ಬ ಮನುಷ್ಯನಿಗೆ ಸಾವಿನಾಚೆಗಿನ ಬದುಕು ಸಾಧ್ಯವಿಲ್ಲ. ಅನುಭವದಿಂದ ಕಂಡುಕೊಂಡ ವಿಷಯಗಳನ್ನು ಒಂದು ಪೀಳಿಗೆಯಿಂದ ಮುಂದಿನದಕ್ಕೆ ವರ್ಗಾಯಿಸಲೇ ಬೇಕು. ಆದರೆ ಅನಗತ್ಯ ವಿಷಯಗಳ ವರ್ಗಾವಣೆಯ ಸಾಧ್ಯತೆಯ ಅರಿವು ಇರುವುದರಿಂದ, ಮುಂದಿನ ಪೀಳಿಗೆ ಋಣಭಾರದ ಹಂಗಿಗೆ ಸಿಲುಕದಂತೆ ಜವಾಬ್ದಾರಿಯಿಂದ ಈ ಕೆಲಸವನ್ನು ನಿರ್ವಹಿಸಬೇಕಾಗಿದೆ. ಇಲ್ಲಿಯವರೆಗೆ ಸಂಗ್ರಹವಾದ ಜ್ಞಾನವನ್ನು ಹಾಗೂ ಈ ಜ್ಞಾನವೇ ನಿಜವಾದ ಜ್ಞಾನವಲ್ಲದಿರಬಹುದು ಎಂಬ ಪ್ರಜ್ಞೆಯನ್ನೂ ವರ್ಗಾಯಿಸಬೇಕಾಗಿದೆ. ಗತಕಾಲದ ಆಗುಹೋಗುಗಳನ್ನು ಸಮಭಾವದಿಂದ ಸ್ವೀಕರಿಸಲು ಮತ್ತು ತಿರಸ್ಕರಿಸಲು ಕಲಿಸುವ ಅಗತ್ಯವಿದೆ. ಇದಕ್ಕೆ ಸಾಕಷ್ಟು ನೈಪುಣ್ಯತೆಯೂ ಬೇಕು. ಹಿಂದಿನ ಪೀಳಿಗೆಗೆ ಸೇರಿದ ಮಹಾನ್ ಗುರುಗಳು ದೋಷಾತೀತರು ಎಂಬ ನಂಬುಗೆಯ ಅಪಾಯವನ್ನು ಕೇವಲ ವಿಜ್ಞಾನ ಕ್ಷೇತ್ರದಲ್ಲಿ ಮಾತ್ರ ಕಾಣಬಹುದು.

ಮೂಲ : **ರಿಚರ್ಡ್ ಫೈನ್‌ಮನ್**
ಕನ್ನಡಕ್ಕೆ : **ಸುಮನಾ ಡಿ.**
ನಂ. ೪೫೬, ೧೨ನೇ ಮುಖ್ಯರಸ್ತೆ, ಸರಸ್ವತಿಪುರಂ, ಮೈಸೂರು – ೫೭೦ ೦೦೯







**ಅಮ್ಮನ ನೆನಪು ಸಂಪುಟ–೨ (ಅಮ್ಮನ ಕುರಿತಾದ ಲೇಖನಗಳ ಸಂಗ್ರಹ)**

*ಚಂದ್ರಕಾಂತ ವಡ್ಡು*

**ಪುಟ : ೨೦೦**

**ಬೆಲೆ : ರೂ. ೧೫೦**

**ಅಂಕುರ ಪ್ರಕಾಶನ,** ಬೆಂಗಳೂರು

*'ಅಮ್ಮನ ನೆನಪು – ೨' – ಚಂದ್ರಕಾಂತ ವಡ್ಡು ಸಂಪಾದಿಸಿರುವ, ವಿವಿಧ ಹಿನ್ನೆಲೆಯ ಲೇಖಕರು ತಮ್ಮ ನೆನಪುಗಳಲ್ಲಿ ಹರಡಿಕೊಂಡಿರುವ, ತಾಯಿಯ ವ್ಯಕ್ತಿತ್ವವನ್ನು ಆರ್ದ್ರವಾಗಿ ಅನಾವರಣ ಮಾಡಿರುವ ಲೇಖನಗಳನ್ನೊಳಗೊಂಡ ಕೃತಿ. ಈ ಸಂಕಲನ ದಲ್ಲಿರುವ ಲೇಖನಗಳು ತಾಯ್ತನದ ಹಲವು ವಿಶಿಷ್ಟ ಚಹರೆಗಳನ್ನು ತೆರೆದಿಡುತ್ತವೆ. ಎಲ್ಲರ ತಾಯಂದಿರೂ ಒಂದೇ ಎಂಬ ಭಾವನೆಯನ್ನು ಸಡಿಲಗೊಳಿಸಿ ಒಬ್ಬೊಬ್ಬರ ತಾಯಿಯೂ ಒಂದೊಂದು ಮಾದರಿ ಎಂಬ ಅರಿವು ಮೂಡಿಸುತ್ತವೆ. ತಾಯಿಯನ್ನು ಕೇವಲ ಭೌತಿಕ ವ್ಯಕ್ತಿಯನ್ನಾಗಿ ಪರಿಗಣಿಸದೆ ಆಕೆಯನ್ನು ಒಂದು ಪರಿಕಲ್ಪನೆಯಂತೆ ನೋಡಿ, ಹೊಸದೊಂದು ಆಯಾಮವನ್ನು ಪರಿಕಲ್ಪಿಸುವ ನಿಟ್ಟಿನಲ್ಲಿ ಇಲ್ಲಿನ ಲೇಖನಗಳಿವೆ. ಪೊರೆಯುವ, ರಕ್ಷಿಸುವ, ತಿದ್ದಿ ತೀಡುವ ತಾಯಿಯ ನೂರಾರು ಚಿತ್ರಗಳ ಮೆರವಣಿಗೆಯಂತಿರುವ ಈ ಸಂಕಲನದಲ್ಲಿ ಪಾರಿಜಾತ ಕಲಾವಿದೆ ವಿಲಾಸಬಾಯಿ ರಾಯಣ್ಣವರ, ಬಸವರಾಜ ಹೊರಟ್ಟಿ, ಕೆ. ಷರೀಫಾ, ಮೀರಾ ಶಂಕರ, ಎ. ಆರ್. ಮಣಿಕಾಂತ, ಎಸ್. ಆರ್. ಹಿರೇಮಠ, ಶಾಂತಾಕುಮಾರಿ, ಡಾ॥ ಆರತಿ ವೆಂಕಟೇಶ್, ಡಾ॥ ಸಿ. ಆರ್. ಚಂದ್ರಶೇಖರರಂಥ ಖ್ಯಾತನಾಮರು ತಮ್ಮ ತಾಯಿಯ ಕುರಿತಾದ ಅಪರೂಪದ ವ್ಯಕ್ತಿತ್ವವನ್ನು ತೆರೆದಿಟ್ಟಿದ್ದಾರೆ. ಆ ಮೂಲಕ ಓದುಗರಿಗೂ ಕೂಡ ಇಲ್ಲಿ ಅವರವರ ತಾಯಿಯ ನೆರಳು ಕಾಣಿಸುವಂತೆ ಮಾಡಿದ್ದಾರೆ.*




**ಕಾಣ್ಕೆ ಕಣ್ಕಟ್ಟು** (ವಿಮರ್ಶಾ ಕೃತಿ) — *ಸುರೇಶ್ ನಾಗಲಮಡಿಕೆ*

**ಪುಟ : ೧೭೪** — **ಬೆಲೆ : ರೂ. ೨೦೦**

**ಪಲ್ಲವ ಪ್ರಕಾಶನ,** ಚನ್ನಪಟ್ಟಣ

*'ಕಾಣ್ಕೆ ಕಣ್ಕಟ್ಟು' – ಹೊಸ ತಲೆಮಾರಿನ ಬಹುಮುಖ್ಯ ವಿಮರ್ಶಕರೆನಿಸಿಕೊಂಡಿರುವ ಸುರೇಶ್ ನಾಗಲಮಡಿಕೆಯವರ ವಿಮರ್ಶಾ ಕೃತಿ. ವಿಮರ್ಶೆಯನ್ನು ಆಸಕ್ತಿಕರ ಕ್ಷೇತ್ರವಾಗಿ ಆರಿಸಿಕೊಂಡಿರುವ ಇವರು, ಅದನ್ನು ಸೃಜನಶೀಲ ಚಟುವಟಿಕೆಯೆಂಬಂತೆ ಎಲ್ಲ ವಯೋಮಾನದ ಬರಹಗಾರರನ್ನು ಒಳಗೊಳ್ಳುತ್ತ ಮುನ್ನಡೆದಿರುವುದರಿಂದ ಈ ಕೃತಿಯು ಅಷ್ಟೇ ಮುಖ್ಯವೆನಿಸುತ್ತದೆ. ಪ್ರಸ್ತುತ, ಈ ಕೃತಿಯಲ್ಲಿ ತಾತ್ವಿಕತೆ, ಕಾವ್ಯ ಮತ್ತು ಪರೀಕ್ಷೆ ಎಂಬ ಮೂರು ಭಾಗಗಳಿದ್ದು ವಿಷಯ ವೈವಿಧ್ಯತೆಯನ್ನೊಳಗೊಂಡ ಹಿರಿ–ಕಿರಿಯ ಲೇಖಕರ ಕೃತಿಗಳ ಬಗ್ಗೆ, ಆಯಾ ಕಾಲಘಟ್ಟದ ಸಾಂಸ್ಕೃತಿಕ, ಧಾರ್ಮಿಕ ರಾಜಕಾರಣದ ಬಗ್ಗೆ ಸುರೇಶ್ ಅವರು ಸಾದ್ಯಂತವಾಗಿ ಚರ್ಚಿಸಿದ್ದಾರೆ. ಈ ಸಂಕಲನದಲ್ಲಿರುವ ವಿಮರ್ಶಾ ಲೇಖನಗಳಲ್ಲಿ ಆಯಾ ಕಾಲಘಟ್ಟದ ಬರಹಗಾರರಿಂದ ಬಳಸಲ್ಪಟ್ಟಿರುವ ನುಡಿಗಳು ಹೇಗೆಲ್ಲ ಆಯಾ ಸಾಮಾಜಿಕ, ರಾಜಕೀಯ, ಧಾರ್ಮಿಕ ಸಂದರ್ಭಗಳಲ್ಲಿನ ಘಟನೆಗಳ ಮೇಲೆ ಬೆಳಕು ಚೆಲ್ಲುತ್ತವೆ ಎಂಬುದರ ಬಗ್ಗೆ, ಸಿದ್ಧರಾಮನು ತನ್ನ ವಚನಗಳಲ್ಲಿ ವರ್ತಮಾನವನ್ನು ಎದುರುಗೊಳ್ಳುವಾಗ ಎಲ್ಲ ಕಾಲಕ್ಕೂ ಇರುವ ನೈತಿಕತೆಯ ಪಾತಳಿಯನ್ನು ಮೀರಿದ ಕ್ರಿಯೆಗಳ ಮೂಲ ಹುಡುಕಲು ಗುರುತನದ ಮಹಿಮೆಯ ಮುಖಾಂತರವೇ ತನ್ನ ತಾತ್ವಿಕತೆಯನ್ನು ರೂಪಿಸಿಕೊಂಡಿರುವ ಬಗ್ಗೆ, ಸುಬ್ರಹ್ಮಣ್ಯ ಪೌರಾಣಿಕ ನೆಲೆಗಳ ಬಗ್ಗೆ, ಡಾ॥ ಅಮರೇಶ ನುಗಡೋಣಿ ಅವರ ಕಥೆಗಳಲ್ಲಿ ಬರುವ ಗ್ರಾಮಲೋಕದಲ್ಲಿನ ಅಸಮ ವರ್ಣಗಳ ನಡುವಿನ ಸಂಬಂಧ, ಮನುಷ್ಯರ ಸಮುದಾಯಗಳ ಆಳದ ದುರಂತಗಳ ಬಗ್ಗೆ ಕಾಲಕ್ಕನುಗುಣವಾದ ಹೊಸ ವಿಮರ್ಶಾ ತತ್ವಗಳೊಂದಿಗೆ ಅನಾವರಣ ಮಾಡುತ್ತದೆ.*




**ವ್ಯೋಮ ತಂಬೂರಿ ನಾದ** (ಕವನ ಸಂಕಲನ) — *ಆನಂದ ಈ. ಕುಂಚನೂರ*

**ಪುಟ : ೯೬** — **ಬೆಲೆ : ರೂ. ೧೫೦**

**ಒನ್ ವ್ಹೀಲರ್ ಪಬ್ಲಿಕೇಶನ್ಸ್,** ವೆಂಕಟಾಲ ಪೋಸ್ಟ್, ಬೆಂಗಳೂರು

*'ವ್ಯೋಮ ತಂಬೂರಿ ನಾದ' – ಕವಿ ಆನಂದ ಈ. ಕುಂಚನೂರ ಅವರ ಕವನ ಸಂಕಲನ. ಅವರು, ತಮ್ಮ ಸುತ್ತಲಿನ ಲೋಕದ ಸಂಗತಿಗಳಿಗೆ ಮುಖಾಮುಖಿಯಾಗುತ್ತಲೇ ಅದ್ಭುತವಾದ ಇನ್ನೊಂದು ಹೊಸ ಲೋಕವನ್ನು ಈ ಸಂಕಲನದಲ್ಲಿರುವ ಕವಿತೆಗಳಲ್ಲಿ ಕಾಣಿಸಲು ಪ್ರಯತ್ನಿಸಿದ್ದಾರೆ. ಹೀಗಾಗಿ, ಇಲ್ಲಿನ ಕವಿತೆಗಳು ಓದುಗನ ಎದೆಯಲ್ಲಿ ಆನಂದ–ವಿಸ್ಮಯಗಳ ತರಂಗಗಳನ್ನೇ ಎಬ್ಬಿಸುತ್ತವೆ. ವರ್ತಮಾನದಲ್ಲಿ ಬದುಕುತ್ತಿರುವ ವ್ಯವಸ್ಥೆಯ ಕುರಿತಾಗಿ ಅವರಿಗಿರುವ ಆತಂಕ, ಸಂಕಟ, ತಲ್ಲಣ, ಚಡಪಡಿಕೆ, ಸಂತೋಷ, ಸಂತೃಪ್ತಿ – ಇವೆಲ್ಲವೂ ಇಲ್ಲಿ ಗಾಢವಾಗಿ ಮೇಳೈಸಿವೆ. ಅಂತೆಯೇ, ವ್ಯವಸ್ಥೆಯ ಅಂಗವಾಗಿರುವ ಕವಿ ಆನಂದ ಅವರು ಈ ವ್ಯವಸ್ಥೆಯ ಧೋರಣೆಗಳಿಂದ ಪ್ರೇರಿತರಾಗಿ, ಗತಿಶೀಲ ಬದುಕಿನಲ್ಲಿನ ಬದಲಾವಣೆಯ ಸಾಧ್ಯತೆಗಳನ್ನು ಗಮನದಲ್ಲಿಟ್ಟುಕೊಂಡು ಕಾಲಕ್ಕೆ ಅನುಗುಣವಾಗಿ ವಸ್ತುವನ್ನು ನೋಡುವ ಕ್ರಮವನ್ನು ಬೆಳೆಸಿಕೊಂಡಿದ್ದಾರೆ ಎಂಬುದಕ್ಕೆ ಈ ಕವಿತೆಗಳು ಸಾಕ್ಷಿಯೂ ಸಹ ಆಗಿವೆ. ಆದರೂ, ಕವಿಯಾಗಿ ಆನಂದ ಅವರು 'ಕವಿತೆ' ಉತ್ಕೃಷ್ಟವಾಗಿರಬೇಕು ಎಂಬ ಪೂರ್ವ ನಿರ್ಧಾರಿತ ನಿಲುವು ಮತ್ತು ನಿರೀಕ್ಷೆಗಳಿಗೆ ಬದ್ಧರಾಗಿರುವುದರಿಂದಲೇ ಈ ಸಂಕಲನದ ಕವಿತೆಗಳಲ್ಲಿ ಪ್ರತಿಮೆ, ರೂಪಕಗಳು ಕಿಕ್ಕಿರಿದು ತುಂಬಿದ್ದು ಅವೇ ಸಾಮಾನ್ಯ ಓದುಗನಿಗೆ ಸರಳವಾಗಿ ದಕ್ಕಲಾರದಂಥ ಅಪಾಯವನ್ನು ತಂದೊಡ್ಡಿದಂತಿವೆ. ಈ ಮಾತನ್ನು ಮೀರಿ ಭವಿಷ್ಯದಲ್ಲಿ ಸಶಕ್ತ ಕವಿಯಾಗಿ ಬೆಳೆಯುವಂಥ ಶಕ್ತಿಯಂತೂ ಆನಂದ ಅವರಿಗಿದೆ.*

**ದೀಪ ಹಚ್ಚಿಟ್ಟ ರಾತ್ರಿ** (ಐವತ್ತು ಗಜ಼ಲ್‌ಗಳು) — *ಪ್ರಕಾಶ ಬಿ.*

**ಪುಟ : ೨೦ + ೫೪** — **ಬೆಲೆ : ರೂ. ೮೦**

**ಪ್ರತಿಭಾನ ಸಾಂಸ್ಕೃತಿಕ ಹಾಗೂ ಬೌದ್ಧಿಕ ವೇದಿಕೆ,** ಬೆಳಗಾವಿ




*'ಗಜ಼ಲ್' ಅರಬ್ಬೀ ಶಬ್ದವಾದರೂ ಆ ಭಾಷೆಯಲ್ಲಿ ಒಂದು ಕಾವ್ಯಪ್ರಕಾರವಾಗಿ ಬೆಳೆಯದೆ ಪಾರಸಿ ಭಾಷೆಯಲ್ಲಿ ಅತ್ಯಂತ ಆಕರ್ಷಣೀಯವಾದ ಕಾವ್ಯಪ್ರಕಾರವಾಗಿ ಬೆಳೆಯಿತು. ಮುಂದೆ ಪಾರಸಿಯಿಂದ ಗಜ಼ಲ್ ಉರ್ದು ಸಾಹಿತ್ಯಕ್ಕೆ ಬಂದು ತನ್ನ ಆಳ, ವಿಸ್ತಾರವನ್ನು ಹೆಚ್ಚಿಸಿಕೊಂಡಿತು. ವಿಶಿಷ್ಟವಾದ ಕಾವ್ಯ ಪ್ರಕಾರವಾಗಿರುವ ಗಜ಼ಲ್ ಕೆಲವು ಪ್ರಮುಖ ಅಂಶಗಳನ್ನು ಒಳಗೊಂಡಿದೆ. ಪ್ರಸ್ತುತ, ಈ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಗಹನವಾದ ಗಜ಼ಲ್‌ಗಳನ್ನು ರಚಿಸಿರುವ ಸೃಜನಶೀಲ ಕವಿ ಪ್ರಕಾಶ ಬಿ. ಅವರ 'ದೀಪ ಹಚ್ಚಿಟ್ಟ ರಾತ್ರಿ' ಸಂಕಲನದಲ್ಲಿ ಐವತ್ತು ಗಜ಼ಲ್‌ಗಳಿವೆ. ಇಲ್ಲಿ ಕವಿಯ ವಯೋಸಹಜ ಅನುಭವಗಳು, ತಿಳುವಳಿಕೆಗಳು, ವ್ಯವಸ್ಥೆಯ ಕುರಿತ ಅವರ ದೃಷ್ಟಿಕೋನ, ಸಿಟ್ಟು, ಆಕ್ರೋಶ, ಮೌನ, ಶಾಂತಿ, ಸಮಾಧಾನ – ಇವೆಲ್ಲವೂ ಗಜ಼ಲ್‌ಗಳ ರೂಪದಲ್ಲಿ ಅಕ್ಷರಕ್ಕಿಳಿದಿವೆ. ಹೀಗಾಗಿ ಇಲ್ಲಿನ ಪ್ರತಿಯೊಂದು ಗಜ಼ಲ್ ಕೂಡ ಓದುಗನ ಎದೆಯನ್ನು ಆಪ್ತವಾಗಿ ತಟ್ಟುವುದಕ್ಕೂ ಕಾರಣವಾಗಿದೆ. ಈ ಲೋಕದಲ್ಲಿ ಅನುಮಾನಗಳ ಗಾಢಾಂಧಕಾರ ತೊಳೆಯಲು ಹಣತೆಯನ್ನು ಹಚ್ಚಬೇಕಾದ ಅನಿವಾರ್ಯತೆಯ ಬಗ್ಗೆ, ಪ್ರೀತಿಯನ್ನು ತೂಗಲು ಪ್ರೀತಿಯೇ ಬೇಕಾಗಿರುವುದರ ಹಿಂದಿನ ಕಾರಣಗಳ ಬಗ್ಗೆ, ಧರ್ಮ ಧರ್ಮವೆಂದು ದೇವರನ್ನು ಬಂಧೀಖಾನೆಯಲ್ಲಿ ಬಂಧಿಸಿಟ್ಟಿರುವ ಜನರು ನಿಜದಲ್ಲಿ ಮನುಷ್ಯ ಧರ್ಮವನ್ನೇ ಮರೆತಿರುವ ಬಗ್ಗೆ ಗಜ಼ಲ್‌ಗಳಲ್ಲಿ ಮಾರ್ಮಿಕವಾಗಿ ಹಿಡಿದಿಟ್ಟಿದ್ದಾರೆ. ಹೀಗೆ ಗಜ಼ಲ್‌ನ ಮೂಲಕವೇ ಬದುಕನ್ನು ಕಂಡುಕೊಳ್ಳುತ್ತಿರುವ ಪ್ರಕಾಶ ಬಿ. ಅವರ ಈ ಪ್ರಯತ್ನ ನಿಜಕ್ಕೂ ಮೆಚ್ಚುವಂಥದ್ದು.*

– **ಕಲ್ಲೇಶ್ ಕುಂಬಾರ್,** ಹಾರೂಗೇರಿ, ಬೆಳಗಾವಿ

**ಮೊ**ನ್ನೆ ಅಚಾನಕ, ಮುಖ್ಯಮಂತ್ರಿಗಳ ಕಾರಿನ ಮೇಲೆ ಅಮಾಯಕ ಕಾಗೆ ಮರಿಯೊಂದು ಬಂದು ಕೂತಿದ್ದಷ್ಟಕ್ಕೇ ಅದು ರಾಜ್ಯ ಮಟ್ಟದ ಸುದ್ದಿಯಾಯಿತು. ಇದೇನ್ಮಹಾ ! ಅನ್ನುತ್ತೀರೇನು ? ಎಷ್ಟೇ ಆದರೂ, ನಮ್ಮ ಕಾಗೆಯು ಕೂಡ ಸಮಾಜಜೀವಿಯಾಗಿರುವಂತೆಯೇ 'ಮಾನವನ ಒಡನಾಡಿ' ಎಂಬ ಸಂಗತಿಯನ್ನು ಬಹುಶಃ ಭಾರತೀಯರಾದ ನೀವ್ಯಾರೂ ಅಲ್ಲಗಳೆಯಲು ಹೋಗಲಾರಿರಿ. ಅದಕ್ಕೇ 'ತಿಥಿ'ಯಂಥ ಸಂದರ್ಭದಲ್ಲಿ ಮೊದಲ 'ಅತಿಥಿ'ಯಾಗಿ ಬಂದು ಭೋಜನ ಸ್ವೀಕರಿಸಲೇಬೇಕಾದ ಸತ್ಕಾರ್ಯದಲ್ಲಿ ಭಾರತೀಯ ಸನಾತನ ಕಾಗೆಗೆ ಅದರದೇ ಆದ ಕ್ಲೇಮು ಇದೆ. ಪ್ರಥಮ ಪ್ರಾಶಸ್ತ್ಯ ಕೂಡ ಸಲ್ಲುತ್ತದೆ, ಅದಕ್ಕೆ.

ಸದರಿ ಕಾಗೆ ಮರಿಯೇನೊ ಹಾರಲಾಗದಿದ್ದುದಕ್ಕೊ ಇಲ್ಲಾ ಯಾವುದಾದರೂ ಅಸಹಾಯಕ ಕಾರಣಕ್ಕೊ ಮರ ಬಿಟ್ಟು ಕಾರು ಹತ್ತಿ ಕೂತಿತ್ತು, ತನ್ನದೇ ಆದ ಸಮಸ್ಯೆಗೆ. ಸಾರ್ವಜನಿಕರ ವಾಹನವಾಗಿದ್ದಿದ್ದರೆ ಅದಕ್ಕೆ ಅಷ್ಟೊಂದು ಮಹತ್ವ ಬರುತ್ತಿರಲಿಲ್ಲವೇನೊ! ಸಿಎಂ ಕಾರು ಹತ್ತಿ ಕೂರುವದೆಂದರೆ ? ಸುದ್ದಿ ಸೂರಪ್ಪಗಳು ಅದನ್ನು ನೋಡಿಕೊಂಡು ಸುಮ್ಮನಿದ್ದಾರೆಯೆ ? ಬೆಳಗಾಗೆದ್ದು 'ಜನತಾ ದರ್ಶನ'ಕ್ಕೆ ಬರುವವರಂತೆ, ಸದರಿ ಕಾಗೆ ಖುದ್ದಾಗಿ ತನ್ನ ಅಹವಾಲು ಸಲ್ಲಿಸಲು



# ಕಾಕರಾಜನ ವಕ್ರದೃಷ್ಟಿಯೂ ಮುಖ್ಯಮಂತ್ರಿಯ ಕಾರುಬಾರೂ!

■ ಈರಪ್ಪ ಎಂ. ಕಂಬಳಿ



ಬಂದಿತ್ತೇನೋ ಎನ್ನುವ ತೆರದಲ್ಲಿ, ಹಗಲೂ ರಾತ್ರೀ ಒಂದೇ ಸಮ ಆ ಸಂಗತಿಯನ್ನು, ಬಡಿಗೆಗೆ ಸುತ್ತಿರುತ್ತಿದ್ದ ಬೊಂಬಾಯಿ ಮಿಠಾಯಿ ತರ ಎಳೆದೆಳೆದು ನೀಡಿದರು – 'ಸಿಎಂಗೆ ಏನೋ ಗಾಚಾರ ಕಾದಿದೆ' ಎಂಬ ಗುಮಾನಿ ಹುಟ್ಟುವಂತೆ. ಮೂಕಪ್ರೇಕ್ಷಕರು ನೋಡಿ ನೋಡಿ ಬಾಯಿ ಚಪ್ಪರಿಸಿದರು. ಸುಳ್ಳನ್ನೇ ಹತ್ತಾರು ಬಾರಿ ಹೇಳಿದರೆ ಸಾಮಾನ್ಯ ಜನ ಅದನ್ನು ನಂಬದೇ ಇರುತ್ತಾರೆಯೇ ! 'ಪಶುವೇನ ಬಲ್ಲುದು, ಹಸುರೆಂದೆಳಸುವದಲ್ಲದೇ' ! ಅಣ್ಣ ಆಡಿದ ನುಡಿ. 'ಎದ್ದೆಯಾ ಜೋಗಿ ಎಂದರೆ ಹೆಗಲಮ್ಯಾಲೇ ಕ್ಯಾಮರಾ'. ಇದು ಹೊಸ ಗಾ(ತಗಾ)ದೆ. ಸಾರ್ವಜನಿಕ ಸ್ಥಳದಲ್ಲಿ ನಿಂತು ಜೋರಾಗಿ ಕೆಮ್ಮುವದಕ್ಕೂ ಹೂಸುವದಕ್ಕೂ ಭಯಪಡಬೇಕಾಗಿದೆ, ಈಗ.

ಆಗ ಅದಕ್ಕೆ ಇಲ್ಲದ ಮಹತ್ವ ಒದಗುತ್ತದೆ. ಆಯಕಟ್ಟಿನ ಜಾಗೆಯಲ್ಲಿ ಕೂತಿರುವ, ಅಧಿಕಾರಸ್ಥ ಜನಗಳೇ ತಮ್ಮ ಹತ್ತಿರಕ್ಕೆ ಬಿಟ್ಟುಕೊಂಡಿರುವ ಆ ಮಾನವ ರೂಪದ, ಎಲ್ಲ ಕಡೆ ರಾರಾಜಿಸುವ ಆ ಮೌಢ್ಯಾಚರಣೆ ಪೋಷಿಸುವ ಅಡಕಸುಬಿಗಳು, ಸ್ವತಃ ಕಾಗೆ–ಗೂಬೆಗಳಂತೆ ರೆಕ್ಕೆ ಬಡಿದು ಹಾರುತ್ತವೆ, ಅಸಂಬದ್ಧ ನುಡಿಯುತ್ತವೆ. ದೊಡ್ಡವರ ತಲೆಯೊಳಗೆ ಇಲ್ಲದ ಹುಳು ಹಾಕಿ ಅಧಿಕಾರಸ್ಥರ ತೊಳ್ಳೆ ನಡುಗುವಂತೆ ಮಾಡುತ್ತವೆ. ಆಗ, 'ಕಾಗೆ ಕೂರುವದಕ್ಕೂ ಕಾರು ಬದಲಾಗುವದಕ್ಕೂ ಸರಿ ಹೋಯಿತು'. ಇದನ್ನೇ ಕಾಕತಾಳೀಯ ಎಂದು ಬೇಕಾದರೆ ಅನ್ನಿರಿ, ಹೊಸ ಗಾದೆ ಟಂಕಿಸಿದಂತೇ ಥೇಟು ಎಂದು ಭಾವಿಸಿರಿ. ಯಾರ ಗಂಟೇನು ಹೋಗುತ್ತದೆ !

ನನ್ನ ಮನಸ್ಸು ಬಾಲ್ಯದಂಗಳಕ್ಕೆ ಹಿನ್ನೆಗೆಯುತ್ತದೆ. ಸಂಜೆಯ ಹೊತ್ತು ನನ್ನೂರಿನ ದೊಡ್ಡ ಹುಣಸೆ ಮರದಲ್ಲಿ ಬೀಡುಬಿಟ್ಟ ಕಾಗೆಗಳ ಹಿಂಡು ಕಾವ್ ಕಾವ್ ಎಂದು ಇಡೀ ಊರಿನವರ ಗಮನ ಸೆಳೆಯುವಂತೇ ಥೇಟು, ಸಂತೆ ಸೇರಿ ಗದ್ದಲ ಹಾಕುತ್ತವೆ. ಅದೇ ರೀತಿ ಓಣಿಯ ಚಳ್ಳೆ–ಪಿಳ್ಳೆಗಳು ಅಂಗಳದಲ್ಲಿ ದುಂಡಗೆ ಕೂತು ಸಮೂಹಗಾನದಲ್ಲಿ ಹಾಗೆ ಶಿಶುಪ್ರಾಸ ಉಲಿಯುವದನ್ನು ನೋಡುವದೇ ಒಂದು ಛಂದ –

ಕಾಗಿ ಕಾಗಿ ಕವ್ವ ಯಾರು ಬಂದಾರವ್ವ ? ಮಾವ ಬಂದಾನವ್ವ !

ಏನು ತಂದಾನವ್ವ ? ಹಂಡೇದಂಥ ಕುಂಡೀ ಬಿಟಗೊಂಡು ಹಂಗಾ ಬಂದಾನವ್ವ !!

ಎಂದು ಅರಚುತ್ತಿರಬೇಕಾದರೆ ನಮಗೆ ಮತ್ತದೇ ಕಾಗೆ ಬಳಗವೇ ನೆನಪಾಗುತ್ತದೆ. ಹೊತ್ತಲ್ಲದ ಹೊತ್ತಿನಲ್ಲಿ ಒಕ್ಕರಿಸುವ ಮಾಂವನಿಗೂ ಕಾವ್ ಕಾವ್ ಎಂದು ಆಲಾಪಿಸುವ ಕಾಗೆಗೂ ಏನಾದರೂ ಸಂಬಂಧವಿದೆಯೆ? ಎಂದೆಲ್ಲ ಯೋಚಿಸುತ್ತದೆ ನನ್ನ ಮಂಗ ಮನಸ್ಸು. ವಾಚಕ ಮಹಾಶಯರಿಗೆ ಈಗ ತುಸು ಸುಳಹು ಸಿಕ್ಕಿರಬೇಕು – ಕಾಗೆಗೂ ಮನುಷ್ಯನಿಗೂ ಅವಿನಾಭಾವ ಸಂಬಂಧವಿರುವುದು. ಮನೆಯೊಳಗಡೆ ಯಾರಾದರು ಸುಮ್ಮನಿರಲಾಗದೆ ಸದಾ ಕಾವ್ ಕಾವ್ ಎಂದು ಮಾತನಾಡುತ್ತಿದ್ದರೆ, ಅಂಥವರನ್ನು "...ಸುಮ್ಮನಿರಲೇಯ್ ಯಾಕ್ಹಂಗೆ ಮೂರೂ ಹೊತ್ತು ಕಾಗಿ ಹಂಗ ಕ್ರಾ ಕ್ರಾ ಎಂದು ಹಲುಬುತೀದಿ" ಎಂದು ಒರಲುತ್ತಾರೆ. ಅವರವರ ಸಂಕಟ ಅವರವರದು.

ನಮ್ಮ ಜನರ ಸ್ವಭಾವವೇ ಹಾಗೆ. ಕಷ್ಟಪಟ್ಟು ದುಡಿಯುವವರನ್ನು ಕಂಡರೆ ಕತ್ತೆಗೆ; ಹೆಚ್ಚು ಮಾತನಾಡುವವರನ್ನು ಕಂಡರೆ ಕಾಗೆಗೆ; ಸುಮ್ಮನೇ ಒಂದು ಕಡೆ ಕೂತವರನ್ನು ಗೂಬೆಗೆ ಹೋಲಿಸುತ್ತಾರೆ. ಮನುಷ್ಯರ ನೀಚತನವನ್ನು ಬಾಯಿಲ್ಲದ ಅಮಾಯಕ ಪಶುಪಕ್ಷಿಗಳಿಗೆ ಆರೋಪಿಸಿ ಅವಕ್ಕೆ ಅವಮಾನ ಎಸಗಿ ವಿಲಕ್ಷಣ / ವಿಘ್ನ ಸಂತೋಷ ಅನುಭವಿಸುತ್ತಾರೆ. ಎಲ್ಲರನ್ನೂ ಮೆಚ್ಚಿಸುವವನು ಬಹುಶಃ ಈ ಭೂಮಿಯ ಮೇಲೆ ಇನ್ನೂ ಹುಟ್ಟಿಯೇ ಇಲ್ಲವೇನೊ. ವಿಷಯಾಂತರ ಎಸಗಲಾರೆ ಬನ್ನಿರಿ. ಹೌದು, ಕಾಗೆ ಹಾಗೆ ಕ್ರಾ ಎಂದರೆ ಸಾಕು ಬೆಳಗಾಯಿತು ಎಂದು ಅಂದು ಬಡಿದುಕೊಂಡು ಎದ್ದೇಳುತ್ತಿತ್ತು ಒಂದು ಕಾಲದಲ್ಲಿ, ನಮ್ಮ ಹಳ್ಳಿಯ ಪ್ರಪಂಚ. ಬ್ರೆಡ್ಡು ಹಿಡಿದುಕೊಂಡು ಬೀದಿಯಲ್ಲಿ ಬರುತ್ತಿದ್ದ ಮಗುವಿನ ಮೇಲೆ ಅಕಸ್ಮಾತ್ ಎರಗಿದ ಕಾಗೆ ರೆಕ್ಕೆಯಿಂದ ಮಗುವಿನ ನೆತ್ತಿ ಬಡಿದರೆ, ಆಗಲಿರುವ ಅನಾಹುತದ ಮುನ್ಸೂಚನೆಯೆನ್ನುವಂತೆ ಹೆದರಿ, ತಿಪ್ಪೆಯೊಳಗಿನ ಭರಮನ ಇಲ್ಲಾ ಗುಡಿಯೊಳಗಿನ ದ್ಯಾಮಿ–ದುರಗಿಯರ ತಲೆಗೆ

ಎಣ್ಣೆಯೊತ್ತಲು ಮಗುವನ್ನು ಎತ್ತಿಕೊಂಡು ಓಡುತ್ತಿದ್ದರು, ಮುಗ್ಧ ಮಂದಿ !

ನಮ್ಮ ಬಿಸಿಲಸೀಮೆಯಲ್ಲಿ ಕೋಗಿಲೆಯ ಕೆಲಸವನ್ನೂ ಕಾಗೆಯೇ ನಿರ್ವಹಿಸುತ್ತದೆ ಬಲ್ಲಿರಾ ? ಈಗಲೂ ಶ್ರಾವಣದಲ್ಲಿ ಅಕಸ್ಮಾತ್ ಅಪರೂಪದ ಆ ಕೋಗಿಲೆಯ ಉಲಿವು ಏನಾದರೂ ಕಿವಿಗೆ ಬಿದ್ದರೆ ಅದರ ಮುಖದರ್ಶನಕ್ಕೆ ಬಿಟ್ಟಿದ್ದು ಬಿಟ್ಟು ಓಡುತ್ತಲಿದ್ದೇವೆ, ಅದರ ಧ್ವನಿ ಕೇಳಿಬಂದ ದಿಕ್ಕಿನತ್ತ ಹುಡುಕಿಕೊಂಡು. ದಾರಿತಪ್ಪಿ ನಮ್ಮೂರಿಗೆ ಲತಾ ಮಂಗೇಶ್ಕರ್ ಯಾ ಕುನಾಲ್ ಗಾಂಜಾವಾಲಾ ಏನಾದರೂ ಬಂದಿದ್ದಾರೇನೋ ಎನ್ನುವ ತೆರದಲ್ಲಿ. ಕಳ್ಳೀಮರದ ಹೊದರಿನಲ್ಲಿ ಹಾಗೆ ಅಡಗಿ ಕೂತಿರುತ್ತಿದ್ದ ಕೋಗಿಲೆ ನಮ್ಮ ಜನರಿಗೆ ಬೀಳಲು ಬಿಲ್ಕುಲ್ ಒಪ್ಪದಿದ್ದಾಗ ಬೇಸತ್ತು ಕಲ್ಲು ಬೀರಿಯಾದರೂ ಎಬ್ಬಿಸಿ ಅದರ ಮುಖಾವಲೋಕನ ಮಾಡುತ್ತಿದ್ದೆವು. ಓ ಇದೇನಾ ? ಇದಕ್ಕೂ ನಮ್ಮ ಕಾಗೆಯ ಬಣ್ಣವೇ, ಕಾಗೆಗಿಂತ ಸಣಕಲಿ ಬೇರೆ ಎಂದು ಅದನ್ನು ಅಣಕಿಸುತ್ತಲೇ ಆಗ ಅದನ್ನು ಹೋಗಗೊಡುತ್ತಿದ್ದೆವೆನ್ನಿರಿ. ಬೆಳಗಿನ ಹೊತ್ತು, ನಾವಿನ್ನೂ ಅಂಗಳದಲ್ಲಿ ಈಚಲ ಚಾಪೆಯಲ್ಲಿ ಕವುದಿ ಹೊದ್ದು ಮಲಗಿರುವಾಗಲೇ ಮನೆಯ ಕುಂಬಿಯ ಮೇಲೆ ಕೂತ ಕಾಗೆಗಳೆರಡೂ ತಮ್ಮದೇ ಭಾಷೆಯಲ್ಲಿ ಪರಸ್ಪರ ಕ್ರಾ ಕ್ರಾ ಎಂದು ಮಂದ್ರಸ್ಥಾಯಿಯಲ್ಲಿ ತಮ್ಮಷ್ಟಕ್ಕೆ ತಾವೇ ಮಾತಾಡಿಕೊಳ್ಳುತ್ತಿದ್ದರೆ ಅದೇ ನಮಗೆ ಸುಬ್ಬುಲಕ್ಷ್ಮಿಯ ಸುಪ್ರಭಾತದಂತೆ ಆಪ್ಯಾಯಮಾನವಾಗಿರುತ್ತಿತ್ತು.

ಸದಾ ಹಸಿರು ಮುರಿಯುವ ಮಳೆನಾಡಿನ ದಟ್ಟ ಮರಗಳಲ್ಲಿ ಅಡಗಿರುವ ಕೋಗಿಲೆ ನಮಗೆಲ್ಲಿ ಇಲ್ಲಿ ಕಾಣಬೇಕು, ಅಪರೂಪವೇ ! ಕಾಗೆ ಆಹಾರ ಹುಡುಕಿಕೊಂಡು ಹೊರಹೋದ ಹೊತ್ತಿನಲ್ಲಿ ಯಾಮಾರಿಸಿ ಕಾಗೆಯ ಗೂಡಿನೊಳಗೆ ಕೋಗಿಲೆ ತನ್ನ ಮೊಟ್ಟೆ ಇಟ್ಟುಬಿಡುತ್ತದಂತೆ. ಮೊದ್ದು ಕಾಗೆ ತನ್ನದೇ ಮೊಟ್ಟೆಗಳೆಂದು ಭಾವಿಸಿ ಅವಕ್ಕೂ ಕಾವು ಕೊಟ್ಟು ಮರಿ ಮಾಡುತ್ತದಂತೆ. ಬೆಳೆದ ಕೋಗಿಲೆಯ ಮರಿ ಬಾಯಿ ಬಿಟ್ಟಾಗಲೇ ಗೊತ್ತಾಗುವದು. ಪಾಪ, ಅಂಥ ಮಧುರ ಕಂಠದ ಕೋಗಿಲೆ ಅನಾಥಾಶ್ರಮದಲ್ಲಿ ಹುಟ್ಟಿ ಬೆಳೆದಂತೇ ಥೇಟು. ಅದಕ್ಕೆಂತಲೇ ಅದಕ್ಕೆ 'ಪರಪುಟ್ಟ' ಎಂಬ ಹೆಸರು ಪ್ರಾಪ್ತವಾಗಿದೆ. ಇದು ಪಕ್ಷಿಲೋಕದ ವಿಸ್ಮಯ ! ಅದಕ್ಕೆಂತಲೇ ಕಾಗೆಯನ್ನು ನಾನು ಸಮಾಜಜೀವಿಯೆಂದು ಕರೆದದ್ದು.

ನನ್ನ ಅಪ್ಪ ಅಸ್ತಮಾ ಪೇಶಂಟು. ಬೆಳಗಿನ ಜಾವವೇ ಎದ್ದು ಕೂತು ಕೆಮ್ಮಿ ಕೆಮ್ಮಿ ಕಫ ಹೊರ ತೆಗೆಯಲು ಆತ ಪಡುತ್ತಿದ್ದ ಕಷ್ಟ ಯಾವ ಪಾಪಿಗೂ ಬೇಡ. ಹತ್ತಾರು ಬಾರಿ ಕೆಮ್ಮಿ ಕ್ಯಾಕರಿಸಿ ಕೊನೆಗೂ ಗಟ್ಟಿ ಕಫವನ್ನು ನಾಲಿಗೆಯ ಮೇಲೆ ತಂದುಕೊಂಡು ತುಪ್ ಎಂದು ಅಂಗಳಕ್ಕೆ ಉಗಿದೊಡನೇ, ಅದಕ್ಕಾಗೇ ಕಾದಿದ್ದಂತೆ, ಕುಂಬಿಯ ಮೇಲೆ ಕೂತಿರುತ್ತಿದ್ದ ಕಾಗೆ ಇನ್ನು 'ಒಳಗೆ ಬರಲಪ್ಪಣೆಯೆ ದೊರೆಯೆ' ಎನ್ನುವಂತೆ, ಪುರ್ರನೆ ಹಾರಿ ಕೆಳಗಿಳಿದು ಬಂದು, ಅಪ್ಪನ ಪರ್ಮಿಶನ್ ಕೇಳಿದಂತೆ ಒಮ್ಮೆ ಕತ್ತು ಕೊಂಕಿಸಿ ಅಪ್ಪನತ್ತ ನೋಡಿ, ನೆಲಕ್ಕಂಟಿದ್ದ ಕಫವನ್ನು ಕೊಕ್ಕಿನಿಂದ ನಾಜೂಕಾಗಿ ಹೆಕ್ಕಿ ಒಂದೇ ಬಾರಿಗೆ ಗುಳುಂ ಮಾಡಿ, ಕತ್ತು ತಿರುಗಿಸಿ ವಾರೆ ನೋಟಬೀರಿ, 'ಇನ್ನೂ ಇದೆಯಾ' ? ಎಂದು ಪ್ರಶ್ನಿಸುವಂತೆ ನೋಡಿ, ಮತ್ತೆ ತನ್ನ ಜಾಗೆಗೆ ಹಾರಿಹೋಗಿ ಕೂರುತಿತ್ತು – ಸ್ಟಾರ್ ಹೋಟೆಲುಗಳಲ್ಲಿ ಮೀಟಿಂಗು ನಡೆಯುವಾಗ ಮುಂದೆ ಇಟ್ಟಿರುತ್ತಾರಲ್ಲ ಜೆಲ್ ಸ್ವೀಟಿನಂತೆಯೇ, ಥೇಟು ! ಅಪ್ಪ ಅದರತ್ತ ವಿಲಕ್ಷಣ ನೋಟಬೀರಿ, ತುಸು ನಿರಾಳವಾದಂತಾಗಿ ಎದೆ ಸವರಿಕೊಳ್ಳುತ್ತಿದ್ದ. ಇದು ನನ್ನ ಅಪ್ಪನಿಗೂ ಆ ಕಾಗೆಗೂ ಆಗಿದ್ದ ಅನೌಪಚಾರಿಕ ಅಗ್ರೀಮೆಂಟು !

ಈ ಎಲ್ಲ ಕಾರಣಕ್ಕೆ, ಸದಾ ನಮ್ಮೊಂದಿಗಿರುವ ನಿತ್ಯ ನಮ್ಮ ಒಡನಾಡಿಯೆಂದರೇನೇ ಕಾಕರಾಜ. ಬೆಳಗಿನ ಹೊತ್ತು, ಆತ ಟೈಮ್ ಕೀಪರ್ ಮಾತ್ರವಲ್ಲ, ಮನೆಯ ಕುಂಬಿಯ ಮೇಲೆ ಕೂತು ಅರಚಿದನೆಂದರೆ ಇವತ್ತು ಯಾರೊ ಬೀಗರು ಮನೆಗೆ ಬರುತ್ತಾರೆಂದೇ ಮನೆಯ ಕಟ್ಟೆಯ ಮೇಲೆ ಕೂತಿರುತ್ತಿದ್ದ ಮುದುಕರು ಭವಿಷ್ಯ ನುಡಿಯುತ್ತಿದ್ದರು, 'ಬಡಿಯೂ ಕೈಲಿ ಹತ್ತು ರೊಟ್ಟಿ ಹೆಚ್ಚಿಗೇ ಬಡೀರಿ' ಎಂದೂ ಆದೇಶ ಮಾಡುತ್ತಿದ್ದರು, ಅಡುಗೆ ಮನೆಗೆ ಕೇಳಿಸುವಂತೆ. ಕಾಕತಾಳೀಯವಾಗಿ ಯಾರಾದರೂ ಬಂದೇಬಿಟ್ಟಿರುತ್ತಿದ್ದರು ಅವೊತ್ತು ಕತ್ತಲಾಗುವುದರೊಳಗೆ. ಹಾಗೆ ಯಾರಾದರೂ ಮನೆಗೆ ಬರುತ್ತಾರೆಂದರೆ ಸಂತೋಷಪಡುವ ದಿನಗಳವು. ನಾಗರಿಕ ಜಗತ್ತಿನ ನಾಜೂಕಾದ ಜನ – ಗೆಸ್ಟುಗಳು ಯಾಕಾದರೂ ಬರುತ್ತಾರೊ ತಮ್ಮ ಮನೆಗೆ, ಎಂದು ಈಗ ತಲೆ ತಪ್ಪಿಸಿಕೊಳ್ಳುವವರೇ ಭಾಳಾ ! ಊರಿಂದೂರಿಗೆ ಆರುಪೈಸೆಯ ಅಂಚೆ ಕಾರ್ಡು ಚಲಿಸುತ್ತಿದ್ದ ದಿನಗಳಿನ್ನೂ ಆಗ. 'ಮಜಕೂರು ಏನೇ ಇದ್ದರೂ ಇಂಥಾ ದಿನ ಕಾಗೆ ಕರ್ ಅನ್ನುವ ಹೊತ್ತಿಗೆ ತಮ್ಮ ಮನೆ ಜಗುಲಿಯ ಮೇಲೆ ಹಾಜರಿರುತ್ತೇವೆ. ಅವೊತ್ತು ಸಮಕ್ಷಮದಲ್ಲಿ ಎಲ್ಲಾ ಫೈಸಲ್'! ಇದು 'ಅರ್ಲೀ ಮಾರ್ನಿಂಗ್' ಎನ್ನುವದನ್ನು 'ಕಾಗೆ ಕರ್ ಎನ್ನುವ' ರೂಪಕವಾದ ಭಾಷೆಯಲ್ಲಿ ಹೇಳಿದ್ದು.

'ಕಾಕರಾಜ ನೀನು ನಮ್ಮ ವನಕೆ ಬಹಳ ದಿನಕೆ ಬಂದಿ' ಸೊಗಸಾದ ಮಕ್ಕಳ ಪದ್ಯ. ಕಾಗೆ ಏಕಕಾಲಕ್ಕೆ ಸಸ್ಯಾಹಾರಿಯೂ ಹೌದು ಮಾಂಸಾಹಾರಿಯೂ ಹೌದು. ಟೂ ಇನ್ ಒನ್ ! ಹಾಗಾಗಿಯೇ ಎಲ್ಲ ಕಡೆಗೂ ಸಲ್ಲುತ್ತದೆ, ಅದು. ಹುಳುಹುಪ್ಪಡಿ ಮೇಯುವ ಮೂಲಕ, ಒಂದು ಅರ್ಥದಲ್ಲಿ ಕಾಗೆಯು ರೈತನ ಮಿತ್ರ ಕೂಡ, ಹೌದು. ಎಲ್ಲವೂ ಸರಿ. ಪುರಾಣದಲ್ಲಿ ಶನಿಮಹಾತ್ಮನ ವಾಹನವಾಗಿ ಕಾಗೆಯನ್ನು ಕಲ್ಪಿಸಿದ್ದೇ ಬಂತು, ಅದಕ್ಕೆ ಈಗ ಗಾಚಾರ ! ಎಂಜಲುಗೈಯಲ್ಲಿ ಕಾಗೆ ಓಡಿಸದವರು ಕೂಡ ಈಗ ಕಾಗೆಯೆಂದರೆ ಹೆದರಿ ಸಾಯುತ್ತಾರೆ, ತಿರುಪತಿ ಹುಂಡಿಯಲ್ಲಿ ಬೇಕಾದರೆ ಕಟ್ಟುಗಟ್ಟಲೇ ಸುರಿಯುತ್ತಾರೆ, ಇದೆಂಥಾ ಮೋಸ ! ಭಾರತೀಯ ಕಾಗೆಯ ಸ್ಥಾನಮಾನಕ್ಕೆ ಧಕ್ಕೆಯೊದಗಿದೆ, ಈಗ ದಾವಾ ಹಾಕುವವರು ಯಾರು ?

ಮೊನ್ನೆ ನನ್ನ ಕಚೇರಿಯ ಕರಿ ರಂಗಸ್ವಾಮಿ ಬಂದಿದ್ದ. ಒಂದು ಕ್ವಾರ್ಟರ್ 'ಹೋಲಿ ವಾಟರ್' ಗಂಟಲಿಗಿಳಿಯಿತೆಂದರೆ ಮೊದಲಿದ್ದ ರಂಗಸ್ವಾಮಿ ಮಾಯವಾಗಿ ರಾಂಗಸ್ವಾಮಿಯಾಗಿ ಪರಿವರ್ತನೆಯಾಗಿಬಿಡುತ್ತಿದ್ದ. ಆಗ ಆತನ ಬಾಯಲ್ಲಿ ಏನಿದ್ದರೂ ರಾಂಗ್ ಆದ ಮಾತುಗಳನ್ನೇ ಎಲ್ಲ ಕೇಳಬೇಕು. ಆ ಕಾರಣಕ್ಕೇನೋ ಬೆನ್ನ ಹಿಂದೆ ಆತನನ್ನು 'ರಾಂಗಸ್ವಾಮಿ' ಎಂದೇ ಕರೆಯುತ್ತಿದ್ದರು. 'ಮೊದಲೇ ಕರಿ–ಕಪ್ಪು, ಈಗ ನೋಡಿದರೆ ಸುಟ್ಟ ಬದನೀಕಾಯಿ ಆಗಿದ್ದೀಯಲ್ಲ ಮಾರಾಯ, ಏನ್ ಸಮಾಚಾರ...!' ಎಂದದ್ದಕ್ಕೆ, ಬಿಸಿಲಲ್ಲಿ ನಿಂತು ಮನೆ ಕಟ್ಟಿಸುತ್ತಿದ್ದೇನೆಂದು ಅರುಹಿದ. ಆತನ ಪಕ್ಕದಲ್ಲಿದ್ದ ಗೆಳೆಯ 'ಬದನೀಕಾಯಿ ಎಲ್ಲಿಂದ ಬಂತು ಸಾರ್, ಕರೆಂಟು ಹೊಡೆದ ಕಾಗೆ ಆಗಿದ್ದಾನೆ ಅನ್ನಿರಿ, ಆಗ ಸರಿ ಹೋಗುತ್ತದೆ' ಅಂದರು. ನಿಜ ನಿಜ, ಕೊಚ್ಚಿ ಕೊಚ್ಚಿ ತಕ್ಕಡಿಗೆ ಹಾಕಿದರೆ ಮೈಯಲ್ಲಿ ಪಾವು ಕೆ. ಜಿ. ಮಾಂಸಖಂಡ ತೂಗುವದಿಲ್ಲ. ಅಕ್ಷರಶಃ ನಿಜ. ಕರೆಂಟು ಹೊಡೆದು ಸತ್ತು ಬಿದ್ದ ಕಾಗೆಯನ್ನು ಹತ್ತಿರದಿಂದ ನೋಡಿದವರಿಗೆ ಮಾತ್ರವೇ ವೇದ್ಯವಾಗಬಲ್ಲ ನುಡಿಗಟ್ಟು ಅದು ! ಸುಟ್ಟು ಕರಕಲಾಗಿ ಕೆಳಗೆ ಬಿದ್ದ ಕಾಗೆಯೇ ಸೈ !!

ಕಾಗೆ ಕಾಟ ಅಷ್ಟಕ್ಕೆ ನಿಲ್ಲಲಿಲ್ಲ. ಕಾಗೆ ಮರಿ ಸಿಎಂ ಕಾರು ಮೇಲೆ ಕೂತಿದ್ದ ಸುದ್ದಿ ಮಾಸಿಹೋಗುವ ಮುನ್ನವೇ, 'ಮಗ ಸತ್ತನೆಂದು ಮುದ್ದಾಂ ಮನೆಯ ಮಂದಿಯೇ ಸುಳ್ಳು ಸುದ್ದಿ ಹರಡಿಸಿದ್ದು' ಮುದ್ದೇಬಿಹಾಳದಿಂದ ವರದಿಯಾಗಿದೆ. ಹೌದು, ಉತ್ತರ ಕರ್ನಾಟಕದಲ್ಲಿ 'ಕಾಗೆ ಕೂಟ / ಕಾಗೆಗೂಟ ನೋಡಿದರೆ ಸಾವು ಕಟ್ಟಿಟ್ಟ ಬುತ್ತಿ' ಎಂಬ ಮೂಢನಂಬಿಕೆಯೊಂದು ಅನೂಚಾನವಾಗಿ ಪ್ರಚಾರದಲ್ಲಿದೆ. ಯಾವ ಅನಾಗರಿಕ ಮುಂಡೇಮಗ ಪ್ರಚಾರಗೈದನೊ ಗೊತ್ತಿಲ್ಲ. ಅಮಾಯಕ/ಮುಗ್ಧರು ಈಗಲೂ ಅದನ್ನು ನಂಬುತ್ತಾರಲ್ಲ ಅದೇ ಅಚ್ಚರಿಯ ಸಂಗತಿ.

ಅಷ್ಟೇ ಅಲ್ಲ ಕಾಗೆಗಳ ಆ ಪ್ರೇಮದಾಟದಲ್ಲಿ ಕಿಡಿ ಹಾರುತ್ತಿರುತ್ತದೆಂದು ಬಾಲ್ಯದಲ್ಲಿ ನನ್ನ ತಲೆಗೂ ಒಂದು ಹುಳು ಹಾಕಿದ್ದರು, ಸ್ಥಳೀಯ ಕಿಡಿಗೇಡಿಗಳು. ಹಾಗಿದ್ದಾಗ, ಎರಡು ಕಾಗೆಗಳೇನಾದರೂ ಹಾಗೆ ಒಟ್ಟಾಗಿ ಮಿಲನ ಕಾರ್ಯದಲ್ಲಿ ತೊಡಗಿದ್ದು ಕಣ್ಣಿಗೆ ಬಿದ್ದರೆ ಸಾಕು, ಸತ್ತರೂ ಚಿಂತೆಯಿಲ್ಲ ಆ ಅದ್ಭುತವನ್ನು ನೋಡಲೇಬೇಕೆಂಬ ಹಠಕ್ಕೆ ಬಿದ್ದು, ಹದಿವಯಸ್ಸಿನಲ್ಲಿರುವ ಆ ಕೆಟ್ಟ ಕುತೂಹಲದಿಂದ ನಾನೂ, ತಾಸುಗಟ್ಟಲೇ ಕಾದು ನಿಂತಿರುತ್ತಿದ್ದೆ. ವೆಲ್ಡಿಂಗ್ ಮಾಡುವಾಗಲೋ ಇಲ್ಲ ಸಾಣೆ ಹಿಡಿಯುವಾಗಲೋ ಏಳುವ ಕಿಡಿಗಳಂತೇ ಥೇಟು ಕಣ್ಣಿಗೆ ಬೀಳಬಹುದೆಂದು ಭಾವಿಸಿದ್ದೆ, ಆ ದೃಶ್ಯ. ಅಂಥದ್ದೇನೂ ಘಟಿಸದೇ ಮೋಸ ಹೋದೆನೆನ್ನಿರಿ. ನನ್ನ ಗಮನಕ್ಕೇ ಬಾರದ ಕಾಗೆಗಳ ಬಗೆಗಿರುವ ದಂತಕತೆಗಳೆಷ್ಟಿವೆಯೋ ಇನ್ನೂ. ಇಷ್ಟಕ್ಕೇ ಸಾಕು ಅನ್ನಿಸುತ್ತದೆ.

'ಅನಿಷ್ಟಕ್ಕೆಲ್ಲ ಶನೀಶ್ವರನೇ ಕಾರಣ' ಅನ್ನುವದು ಹಳೆಯ ಗಾದೆ. ಈಗ ಪಾಪ, ಏನೂ ಅರಿಯದ ಈ ಕಾಗೆ – 'ಶನಿಮಹಾತ್ಮನ ವಾಹನ'ವಾದ ತಪ್ಪಿಗೆ ಹೀಗೆ ಅರ್ಥವಿಲ್ಲದ ಆರೋಪಕ್ಕೆ ಗುರಿಯಾಗುತ್ತಿದೆಯಲ್ಲ ! ವಾಸ್ತವವಾಗಿ, 'ಒಂದಗುಳ ಕಂಡರೆ ಕೂಗಿ ಕರೆಯುವ' ಕಾಗೆ ಬಳಗದಿಂದಲೇ 'ಕೂಡಿ ಉಣ್ಣುವ' ಆದರ್ಶವನ್ನು ಮನುಷ್ಯ ಕಲಿಯಬೇಕಾಗಿದೆ. ಒಬ್ಬೊಬ್ಬ ಮನುಷ್ಯನೂ ಒಂದೊಂದು ನಡುಗಡ್ಡೆಯಾಗಿ ಹೋಗುತ್ತಿರುವ ಈ ದಿನಮಾನದಲ್ಲಿ ಸಂಘಜೀವಿಯಾದ ಕಾಗೆಯಿಂದ ಮಾನವ ಕಲಿಯಬೇಕಾದದ್ದೂ ಬೇಕಾದಷ್ಟಿದೆ ! ಅಷ್ಟಕ್ಕೂ, ಇತ್ತೀಚೆಗೆ ಹೆಚ್ಚುತ್ತಿರುವ ಮೌಢ್ಯದ ಪ್ರಚಾರದಿಂದಾಗಿ 'ಎಜುಕೇಟೆಡ್ ಫೂಲ್ಸ್' ಸಂಖ್ಯೆ ಏರುತ್ತಿದೆಯೆ ಎಂಬ ಅನುಮಾನ ಕೂಡ ನನ್ನನ್ನು ಅಷ್ಟೇ ಕಾಡುತ್ತಿದೆ. ಪರಿಹಾರಕ್ಕಾಗಿ ಕಾದು, ಇದಕ್ಕೆ ಏನಾದರೂ ಕಾನೂನು–ಕಾವುಕಟ್ಟು ಮಾಡಬೇಕಲ್ಲ ಎಂದು ತಲೆಯ ಮೇಲೆ ಕೈಹೊತ್ತು ಕುಳಿತಿರುವೆ, ನಾನೂನು !

**ಈರಪ್ಪ ಎಂ. ಕಂಬಳಿ**
ನಿರ್ದೇಶಕ, ಭಾಷಾಂತರ ನಿರ್ದೇಶನಾಲಯ, ವಿಶ್ವೇಶ್ವರಯ್ಯ ಕೇಂದ್ರ
ಪೋಡಿಯಂ ಬ್ಲಾಕ್, ಡಾ॥ ಅಂಬೇಡ್ಕರ್ ವೀದಿ, ಬೆಂಗಳೂರು – ೫೬೦ ೦೦೧

# ವಚನ ಸಂಸ್ಕೃತಿಯ ಸಮಾನತೆ ಸಿದ್ಧಾಂತ



ಡಾ॥ ಟಿ. ಆರ್. ಚಂದ್ರಶೇಖರ

ವೇದ ನಡುನಡುಗಿತ್ತು. ಶಾಸ್ತ್ರವಗಲಿ ಕೆಲಕ್ಕೆ ಸಾರಿದ್ದಿತಯ್ಯಾ,
ತರ್ಕ ತರ್ಕಿಸಲರಿಯದೆ ಮೂಗುವಟ್ಟಿದ್ದಿತಯ್ಯಾ,
ಆಗಮ ಹೊರತೊಲಗಿ ಅಗಲಿದ್ದಿತಯ್ಯಾ,
ನಮ್ಮ ಕೂಡಲಸಂಗಮ ದೇವರು ಮಾದಾರ ಚೆನ್ನಯ್ಯನ ಮನೆಯಲುಂಡ ಕಾರಣ.
ವೇದ ನಡುನಡುಗಿತ್ತು

**ಪ್ರಸ್ತಾವನೆ**

ವಚನ ಸಂಸ್ಕೃತಿ ಎಂದು ಯಾವುದನ್ನು ಕರೆಯುತ್ತಿದ್ದೇವೆಯೋ ಅದು ಪ್ರಧಾನವಾಗಿ ಜನರನ್ನು ಒಳಗೊಳ್ಳುವ ಪ್ರಣಾಳಿಕೆ. ಅದು ಬಸವ ಪ್ರಣಾಳಿಕೆ. ಅದು ಲಿಂಗಾಯತ ಧರ್ಮ. ಅಲ್ಲಿ ಜಾತಿ, ಲಿಂಗ, ಧರ್ಮ, ವರಮಾನ, ಅಂತಸ್ತು, ಅಧಿಕಾರ, ವರ್ಣ, ಪ್ರದೇಶ ಮುಂತಾದವುಗಳನ್ನು ಆಧರಿಸಿದ ತಾರತಮ್ಯಕ್ಕೆ ಅವಕಾಶವಿಲ್ಲ. ವಚನ ಸಂಸ್ಕೃತಿಯು ಮೂಲತಃ ಸಮಾನತೆ ಪ್ರಣಾಳಿಕೆಯಾಗಿದೆ. ಯಾವ ಬಗೆಯ ಅಸಮಾನತೆಯ ವಿರುದ್ಧ ವಚನಕಾರರು ೧೨ನೆಯ ಶತಮಾನದಲ್ಲಿ ಚಳುವಳಿ ನಡೆಸಿದ್ದರೋ ಆ ಎಲ್ಲ ಬಗೆಯ ಅಸಮಾನತೆಗಳು ಇಂದಿಗೂ ೨೧ನೆಯ ಶತಮಾನದಲ್ಲಿಯೂ ಮುಂದುವರಿದಿರುವುದನ್ನು ಕಾಣಬಹುದು. ವಚನ ಪ್ರಣಾಳಿಕೆಯನ್ನು ನಾವು ಸಾಮಾಜಿಕ ಸಿದ್ಧಾಂತ ಎಂದು ಕರೆಯಬಹುದು. ಅಖಿಲ ಭಾರತ ಸಂಸ್ಕೃತಿ ಎಂದು ಯಾವುದನ್ನು ಕರೆಯುತ್ತಿದ್ದೇವೆಯೋ ಅದಕ್ಕೆ ಪರ್ಯಾಯವಾದ ಒಂದು ತತ್ವಶಾಸ್ತ್ರವನ್ನು ವಚನಕಾರರು ಪ್ರತಿಪಾದಿಸಿದರು. ವಚನಕಾರರು ಪ್ರತಿಪಾದಿಸಿದ್ದು ಪದಾರ್ಥವಾದಿ ಸಿದ್ಧಾಂತ. ಅವರದು ಪ್ರಥಮತಃ ಕಾಯಕ ಸಿದ್ಧಾಂತ. ಅವರದು ದುಡಿಮೆಯ ಶಾಸ್ತ್ರ. ಅದು ಸಮಾನತೆಯ, ಸಾಮಾಜಿಕ ನ್ಯಾಯದ ಸಿದ್ಧಾಂತ.

ಮೊದಲನೆಯದಾಗಿ, ಬಸವಣ್ಣ ಮತ್ತು ಅವನ ಸಮಕಾಲೀನ ವಚನಕಾರರು ರೂಪಿಸಿದ್ದ ವಚನ ಸಂಸ್ಕೃತಿಯನ್ನು ಒಂದು ಪರಿಪೂರ್ಣ ಧರ್ಮ ಪ್ರಣಾಳಿಕೆ ಎಂದು ಒಪ್ಪಿಕೊಳ್ಳಲು ನಮ್ಮಲ್ಲಿ ಕೆಲವು ವಿದ್ವಾಂಸರು ಸಿದ್ಧವಿಲ್ಲ. ಕರ್ನಾಟಕದಲ್ಲಿ ವಚನ ಸಾಹಿತ್ಯದ ಪಂಡಿತರೆಂದು ಕರೆಸಿಕೊಳ್ಳುತ್ತಿರುವ ಒಬ್ಬ ಹಿರಿಯ ವಿದ್ವಾಂಸರು ಬಸವಣ್ಣ ಒಬ್ಬ ಅನುಯಾಯಿಯೇ ವಿನಾ ಶಾಸ್ತ್ರಕಾರನಲ್ಲ, ಮೂಲ ವಿಜ್ಞಾನಿಯಲ್ಲ, ಅವನೊಬ್ಬ ಆನ್ವಯಿಕ ವಿಜ್ಞಾನಿ ಎಂದೆಲ್ಲ ಅಪ್ಪಣೆ ಕೊಡಿಸುತ್ತಿದ್ದಾರೆ. ವಚನ ಸಾಹಿತ್ಯ ಅನ್ನುವುದನ್ನು ಒಂದು ಸುಸಂಘಟಿತ ತತ್ವಶಾಸ್ತ್ರ ಎಂಬುದನ್ನು ಒಪ್ಪಲು ಸಾಧ್ಯವಿಲ್ಲ ಎಂದು ಅವರು ಮತ್ತೆ ಮತ್ತೆ ಪ್ರತಿಪಾದಿಸುತ್ತಿದ್ದಾರೆ. ವಚನಗಳು ಬಿಡಿ ಬಿಡಿ ರಚನೆಗಳೇ ವಿನಾ ತಾತ್ವಿಕ ದರ್ಶನವಲ್ಲ ಎಂಬುದು ಅವರ ನಿಲುವು.

ಎರಡನೆಯದಾಗಿ, ಕರ್ನಾಟಕದಲ್ಲಿ ತಮ್ಮನ್ನು ತಾವು ಸಂಶೋಧಕರೆಂದು ಕರೆದುಕೊಳ್ಳುತ್ತಿರುವ ಒಂದು ಗುಂಪು 'ವಚನ ಸಂಸ್ಕೃತಿಯಲ್ಲಿ ಜಾತಿ ನಿರಾಕರಣೆಯ ಪ್ರತಿಪಾದನೆಯೇ ಇಲ್ಲ' ಎಂಬ ತೀರ್ಮಾನವನ್ನು ಮಂಡಿಸುತ್ತಿದೆ. ವಚನಕಾರರು ಪ್ರತಿಪಾದಿಸಿದ್ದ ಸಿದ್ಧಾಂತವೇನಿದೆ, ಅದು ಅಖಿಲ ಭಾರತ ಸಂಸ್ಕೃತಿಯ ಒಂದು ಭಾಗವೇ ಆಗಿದೆ ಎಂಬುದು ಈ ಗುಂಪಿನ ಮತ್ತೊಂದು ಪ್ರತಿಪಾದನೆ. ಬಸವಣ್ಣ ಪ್ರತಿಪಾದಿಸಿದ್ದು 'ಒಂದು ಸ್ವತಂತ್ರ ಧರ್ಮ' ಎಂಬುದನ್ನು ಈ ಗುಂಪು ಒಪ್ಪುತ್ತಿಲ್ಲ. ಆದರೆ ನಾವು ತಿಳಿದುಕೊಳ್ಳಬೇಕು, ಕರ್ನಾಟಕದಲ್ಲಿ ೧೬ನೆಯ ಶತಮಾನದಲ್ಲಿಯೇ ಸಿದ್ದರಾಮಣ್ಣ 'ಬಸವ ಧರ್ಮ' ಎಂಬ ನುಡಿಗಟ್ಟನ್ನು ಬಳಸಿದ್ದಾನೆ. ಅವನ ವಚನ ಹೀಗಿದೆ :

ಕರುಣಿ ಬಸವ, ಕಾಲಹರ ಬಸವ
ನಿರ್ಮಳ ಬಸವ, ಶಿವಜ್ಞಾನಿ ಬಸವ
ನಿಮ್ಮ ಧರ್ಮವಯ್ಯಾ ಈ ಭಕ್ತಿ ಪಥವು
ಕರುಣಿ ಕಪಿಲ ಸಿದ್ಧಮಲ್ಲಿನಾಥಯ್ಯಾ
ಎನಗು ನಿಮಗೂ ಬಸವಣ್ಣನ ಧರ್ಮವಯ್ಯಾ

ಮೂರನೆಯದಾಗಿ, ವಚನಗಳೇನಿವೆ ಅವು ಕೇವಲ ಪಠಣಕ್ಕೆ, ಭಾಷಣಕ್ಕೆ, ಪ್ರವಚನಕ್ಕೆ ಎಂದುಕೊಂಡು ಬಸವಣ್ಣನ ಅನುಯಾಯಿಗಳೆಂದು ಹೇಳಿಕೊಳ್ಳುತ್ತಿರುವವರೂ ಕೂಡ ಆಚರಣೆಯಲ್ಲಿ ಎಲ್ಲ ಬಗೆಯ ಮೌಢ್ಯವನ್ನು, ಕಂದಾಚಾರವನ್ನು, ಕುರುಡು ಸಂಪ್ರದಾಯಗಳನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ.

ಈ ಹಿನ್ನೆಲೆಯಲ್ಲಿ, ವಚನ ಸಂಸ್ಕೃತಿಯ ಸಾಮಾಜಿಕ ಆಯಾಮಗಳನ್ನು ಕುರಿತಂತೆ ಇಲ್ಲಿ ಚರ್ಚೆ ಮಾಡಲಾಗಿದೆ. ಇಲ್ಲಿ ಬಸವಣ್ಣ ಪ್ರತಿಪಾದಿಸಿದ್ದು ಸಾಮಾಜಿಕ ನ್ಯಾಯವನ್ನು ಒಳಗೊಂಡ ಸಮಾನತೆಯ ತತ್ವ ಎಂಬುದನ್ನು ಕುರಿತಂತೆ ಚರ್ಚೆ ಮಾಡಲಾಗಿದೆ. ಬಸವಣ್ಣ ಕೇವಲ ಆನ್ವಯಿಕ ವಿಜ್ಞಾನಿ ಮಾತ್ರವಲ್ಲ, ಅವನೊಬ್ಬ ತತ್ವಶಾಸ್ತ್ರಜ್ಞ ಎಂಬುದನ್ನು ಇಲ್ಲಿ ಪ್ರತಿಪಾದಿಸಲಾಗಿದೆ. ವಚನ ಸಂಸ್ಕೃತಿಯೇನಿದೆ ಅದು ಒಂದು ಪರಿಪೂರ್ಣ, ಸುಸಂಘಟಿತ ಮತ್ತು ಸುಸಂಗತ ಸಿದ್ಧಾಂತ. ವಚನಕಾರರು ಪ್ರತಿಪಾದಿಸಿದ್ದ ಸಮಾನತೆ ಪ್ರಣಾಳಿಕೆಯೇನಿದೆ ಅದು ಮೂಲತಃ ಬಹುರೂಪಿ ಸಮಾನತೆ ಸಿದ್ಧಾಂತ. ಅದರಲ್ಲಿ ಆರ್ಥಿಕ ಸಮಾನತೆ ಪ್ರಣಾಳಿಕೆಯಿದೆ, ಲಿಂಗ ಸಮಾನತೆ ಸಿದ್ಧಾಂತವಿದೆ, ಸಾಮಾಜಿಕ ಸಮಾನತೆ ನಿಯಮವಿದೆ.

ವಚನ ಸಂಸ್ಕೃತಿಯ ಸಾಮಾಜಿಕ ಆಯಾಮಗಳನ್ನು ಕುರಿತಂತೆ ಇಲ್ಲಿ ಚರ್ಚೆ ಮಾಡಲಾಗಿದೆ. ಇಲ್ಲಿ ಬಸವಣ್ಣ ಪ್ರತಿಪಾದಿಸಿದ್ದು ಸಾಮಾಜಿಕ ನ್ಯಾಯವನ್ನು ಒಳಗೊಂಡ ಸಮಾನತೆಯ ತತ್ವ ಎಂಬುದನ್ನು ಕುರಿತಂತೆ ಚರ್ಚೆ ಮಾಡಲಾಗಿದೆ. ಬಸವಣ್ಣ ಕೇವಲ ಆನ್ವಯಿಕ ವಿಜ್ಞಾನಿ ಮಾತ್ರವಲ್ಲ, ಅವನೊಬ್ಬ ತತ್ವಶಾಸ್ತ್ರಜ್ಞ ಎಂಬುದನ್ನು ಇಲ್ಲಿ ಪ್ರತಿಪಾದಿಸಲಾಗಿದೆ. ವಚನ ಸಂಸ್ಕೃತಿಯೇನಿದೆ ಅದು ಒಂದು ಪರಿಪೂರ್ಣ, ಸುಸಂಘಟಿತ ಮತ್ತು ಸುಸಂಗತ ಸಿದ್ಧಾಂತ. ವಚನಕಾರರು ಪ್ರತಿಪಾದಿಸಿದ್ದ ಸಮಾನತೆ ಪ್ರಣಾಳಿಕೆಯೇನಿದೆ ಅದು ಮೂಲತಃ ಬಹುರೂಪಿ ಸಮಾನತೆ ಸಿದ್ಧಾಂತ.

ಭಾಗ ೧

**ಅಂಬಲಿ ಮೀಮಾಂಸೆ**

ವಚನಕಾರರ ಆರ್ಥಿಕ ಸಮಾನತೆ ವಿಚಾರವೇನಿದೆ

ಅದನ್ನು ಬಸವಣ್ಣನ ಒಂದು ವಚನದ ಮೂಲಕ ನಾವು ಅರ್ಥ ಮಾಡಿಕೊಳ್ಳಬಹುದು. ಈ ವಚನದಲ್ಲಿ ಆರ್ಥಿಕ ಸಮಾನತೆ ವಿಚಾರದ ಜೊತೆಯಲ್ಲಿ ಬಸವಣ್ಣನು ಸಾಮಾಜಿಕ ನ್ಯಾಯದ ವಿಚಾರವನ್ನು ಪ್ರತಿಪಾದಿಸುತ್ತಿದ್ದಾನೆ. ಇದನ್ನು ನಾನು 'ಅಂಬಲಿ ಮೀಮಾಂಸೆ' ಎಂದು ಕರೆದಿದ್ದೇನೆ.

*ಹಾಲ ನೇಮ, ಹಾಲ ಕೆನೆಯ ನೇಮ,*
*ಕೆನೆ ತಪ್ಪಿದ ಬಳಿಕ ಕಿಚ್ಚಡಿ ನೇಮ*
*ಬೆಲ್ಲದ ನೇಮ, ಬೆಣ್ಣೆಯ ನೇಮ,*
*ಅಂಬಲಿ ನೇಮದವರಾರನೂ ಕಾಣೆ*
*ಕೂಡಲಸಂಗನ ಶರಣರಲ್ಲಿ ಅಂಬಲಿ ನೇಮದಾತ*
*ನಮ್ಮ ಮಾದಾರ ಚೆನ್ನಯ್ಯ*

– ಈ ವಚನದಲ್ಲಿ ಖಚಿತವಾಗಿ ಎರಡು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಹಾಲು, ಹಾಲಿನ ಕೆನೆ, ಕಿಚ್ಚಡಿ, ಬೆಲ್ಲ ಮತ್ತು ಬೆಣ್ಣೆಗಳಿದ್ದರೆ, ಎರಡನೆಯ ಭಾಗದಲ್ಲಿ ಅಂಬಲಿ ಇದೆ ಮತ್ತು ಮಾದಾರ ಚೆನ್ನಯ್ಯ ಇದ್ದಾನೆ. ಇವೆರಡರ ನಡುವಿನ ಭಿನ್ನತೆಯನ್ನು, ಅಂತರ ಅಸಮಾನತೆಯನ್ನು ಹೇಳಬೇಕಾದ ಅಗತ್ಯವಿಲ್ಲ. ಬಸವಣ್ಣ ಮತ್ತು ವಚನಕಾರರು ಅಂಬಲಿ ಪರವಾಗಿ ಮತ್ತು ಮಾದಾರ ಚೆನ್ನಯ್ಯನ ಪರವಾಗಿ ತಮ್ಮ ವಿಚಾರವನ್ನು ಪ್ರತಿಪಾದಿಸಿದರು. ಇಲ್ಲಿನ ಅಂಬಲಿ ಎಷ್ಟೊಂದು ಮಹತ್ವವುಳ್ಳದ್ದು ಎಂಬುದು ಕೆಳಗಿನ ವಚನದಿಂದ ಸ್ಪಷ್ಟವಾಗುತ್ತದೆ.




*ನಡೆ ಚೆನ್ನ, ನುಡಿ ಚೆನ್ನ, ಎಲ್ಲಿ ನೋಡಿದಡಲ್ಲಿ ಚೆನ್ನ*
*ಪುರಾತರಲ್ಲಿ ಚೆನ್ನ, ಪ್ರಮಥರಲ್ಲಿ ಚೆನ್ನ*
*ಸವಿದು ನೋಡಿ ಅಂಬಲಿ ರುಚಿಯಾಯಿತ್ತೆಂದು*
*ಕೂಡಲಸಂಗಮದೇವನಿಗೆ ಬೇಕೆಂದು ಕೈತೆಗೆದ ನಮ್ಮ ಚೆನ್ನ.*

– ಈ ಅಂಬಲಿ ಸಿದ್ಧಾಂತವನ್ನು ಮತ್ತು ಅದನ್ನು ಸೇವಿಸಲಿಕ್ಕೆ ಮಾದಾರ ಚೆನ್ನಯ್ಯನ ಮನೆಗೆ ಕೂಡಲಸಂಗಮ ದೇವರು ಹೋಗುತ್ತಿರುವುದನ್ನು ವೇದಗಳಿಗೆ ಸಹಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಅದಕ್ಕೆ ಅವು ನಡುಗುತ್ತಿವೆ. ವೇದಗಳ ನಿಲುವೇನಿದೆ ಅದು ಅಸಮಾನತೆಯನ್ನು ಪ್ರತಿಪಾದಿಸುವ ನಿಲುವಾಗಿದೆ. ಹಾಲು, ಹಾಲಿನ ಕೆನೆ, ಕಿಚ್ಚಡಿ, ಬೆಲ್ಲ ಮತ್ತು ಬೆಣ್ಣೆಗಳೆಲ್ಲ ಉಳ್ಳವರ ಆಸ್ತಿ. ಅಂಬಲಿ ಮತ್ತು ಮಾದಾರ ಚೆನ್ನಯ್ಯ ಉಳಿದವರ ಸಂಪತ್ತು. ಈ ಆರ್ಥಿಕ ಅಸಮಾನತೆಯನ್ನು ತೊಡೆದುಹಾಕಬೇಕು ಮತ್ತು ಮಾದಾರ ಚೆನ್ನಯ್ಯನ ಬಗೆಗಿನ 'ಪ್ರತ್ಯೇಕತನವನ್ನು' ಇಲ್ಲವಾಗಿಸಬೇಕು. ಇದು ಬಸವ ಧರ್ಮ, ಇದು ವಚನ ಸಂಸ್ಕೃತಿ. ಇದು ಸಮಾನತೆ ಪ್ರಣಾಳಿಕೆ. ಇದೇ ತಾನೆ ನಮ್ಮ ಸಂವಿಧಾನದ ಅನುಚ್ಛೇದ ೧೪ (ಸಮಾನತೆಯ ಹಕ್ಕು), ೧೫ (ತಾರತಮ್ಯದ ವಿರುದ್ಧ ನಿಷೇಧ), ೧೬ (ಅವಕಾಶಗಳಲ್ಲಿ ಸಮಾನತೆ), ೧೭ (ಅಸ್ಪೃಶ್ಯತೆಯ ರದ್ದತಿ) ಮತ್ತು ೧೯ (ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಸಂಬಂಧಿಸಿದ ಹಕ್ಕುಗಳ ರಕ್ಷಣೆ)ರಲ್ಲಿ ಪ್ರತಿಪಾದಿಸಿರುವುದು ? ಬಸವ ಸಂವಿಧಾನದ ಅನೇಕ ಸಂಗತಿಗಳು ಭಾರತದ ಸಂವಿಧಾನದಲ್ಲಿ ಅಂತರ್ಗತಗೊಂಡಿವೆ. ಅದರಲ್ಲಿ ಬಹಳ ಮುಖ್ಯವಾದುದು ಸಮಾನತೆ ಮೌಲ್ಯ.

ಈ ಪ್ರಣಾಳಿಕೆಯ ಮೂಲಕ ಯಾವುದನ್ನು ಅಖಿಲ ಭಾರತೀಯ ಸಂಸ್ಕೃತಿ ಎಂದು ಕರೆಯಲಾಗುತ್ತಿದೆಯೋ ಅದನ್ನು ಬಸವಣ್ಣ ಪ್ರಶ್ನಿಸುತ್ತಿದ್ದಾನೆ. ಅದಕ್ಕೆ ಪರ್ಯಾಯವಾದ ದರ್ಶನವೊಂದನ್ನು ಬಸವ ಮಂಡಿಸುತ್ತಿದ್ದಾನೆ. ಅಂಬಲಿಯು ಕೇವಲ ಒಂದು ಖಾದ್ಯ ಪದಾರ್ಥ ಮಾತ್ರವಲ್ಲ, ಅದು ದುಡಿಮೆಯ, ಬೆವರಿನ, ಬಡತನದ ಸಂಕೇತ. ಅದು ಸರಳತೆಯ ಪ್ರತೀಕ. ಮಾದಾರ ಚೆನ್ನಯ್ಯನದು ಅಂಬಲಿ ನೇಮ. ಮಾದಾರ ಚೆನ್ನಯ್ಯನನ್ನು ಇಲ್ಲಿ ಬಸವಣ್ಣ ಉಲ್ಲೇಖಿಸುತ್ತಿರುವುದಕ್ಕೆ ಒಂದು ಕಾರಣವಿದೆ. ಯಾರು ಸಮಾಜದಲ್ಲಿ ಅಂಚಿನಲ್ಲಿರುತ್ತಾರೋ, ಯಾರು ಸಮಾಜದಲ್ಲಿ ವಂಚಿತರಾಗಿರುತ್ತಾರೋ ಅವರನ್ನು ಸಮಾಜ ಪ್ರಜ್ಞಾಪೂರ್ವಕವಾಗಿ ಒಳಗು ಮಾಡಿಕೊಳ್ಳಬೇಕು. ಇದು ಸಾಮಾಜಿಕ ನ್ಯಾಯ. ಇದು ಬಸವ ಸಿದ್ಧಾಂತ. ಅದಕ್ಕಾಗಿ ಬಸವಣ್ಣನು ತನ್ನ ವಚನಗಳಲ್ಲಿ ಮತ್ತೆ ಮತ್ತೆ ಮಾದಾರ ಚೆನ್ನಯ್ಯನನ್ನು ಸ್ತುತಿಸುತ್ತಾನೆ.

ಶತಶತಮಾನಗಳಿಂದ ಹರಿದುಕೊಂಡು ಬರುತ್ತಿರುವ ತಾರತಮ್ಯವಾದಿ ಸಂಗತಿಗಳನ್ನು ತೊಡೆದುಹಾಕುವುದರಲ್ಲಿ ನಾವು ಯಶಸ್ವಿಯಾಗಿಲ್ಲ. ಇದಕ್ಕೆ ಕಾರಣವೆಂದರೆ, ಅದನ್ನು ಗೋಚರ ಮತ್ತು ಅಗೋಚರ ರೀತಿಯಲ್ಲಿ ಪ್ರೋತ್ಸಾಹಿಸುತ್ತಿರುವ ಪಟ್ಟಭದ್ರ ವರ್ಗ ನಮ್ಮಲ್ಲಿದೆ. ಆದರೆ ಈ ವಿಕೃತಿಯನ್ನು ಸರಿಪಡಿಸುವ ಬಗ್ಗೆ ನಾವು ಚಿಂತಿಸಬೇಕಾಗಿದೆ. ಶಾಸ್ತ್ರ, ಸಂಪ್ರದಾಯ, ಆಚರಣೆ ಮುಂತಾದವುಗಳ ಆಧಾರದ ಮೇಲೆ ಮಹಿಳೆಯರಿಗೆ, ದಲಿತರಿಗೆ ದೇವಾಲಯ ಪ್ರವೇಶದ ನಿಷೇಧವನ್ನು ಪ್ರತಿಪಾದಿಸುತ್ತಿರುವ ಅನೇಕ ಪತ್ರಿಕೆಗಳು ನಮ್ಮಲ್ಲಿವೆ ಮತ್ತು ವಿದ್ವಾಂಸರು ನಮ್ಮಲ್ಲಿದ್ದಾರೆ.

ಯಾರಾದರೂ ಒಂದು ಪ್ರಶ್ನೆ ಕೇಳಬಹುದು. ಅದು ದೇವಾಲಯಗಳನ್ನೇ ನಿರಾಕರಿಸಿದ ವಚನ ಸಂಸ್ಕೃತಿಯಲ್ಲಿ ದೇವಾಲಯ ಪ್ರವೇಶಕ್ಕೆ ಸಂಬಂಧಿಸಿದ ಸಂಗತಿಯನ್ನು ಹೇಗೆ ಸಮರ್ಥಿಸುವುದು ? – ಎಂಬ ಪ್ರಶ್ನೆ ಸಹಜವಾಗಿ ನಮ್ಮ ಮುಂದೆ ಬಂದು ನಿಲ್ಲುತ್ತದೆ. ಇಲ್ಲಿ ಪ್ರಶ್ನೆ ಇರುವುದು ದೇವಾಲಯ ನಿರಾಕರಣೆ ಅಥವಾ ಅನುಸರಣೆ ಅಲ್ಲ. ಇಲ್ಲಿರುವುದು ಸಂವಿಧಾನಾತ್ಮಕ ಹಕ್ಕಿನ ಪ್ರಶ್ನೆ. ಆದ್ದರಿಂದ, ನಾವು ಮಹಿಳೆಯರಿಗೆ ಮತ್ತು ದಲಿತರಿಗೆ ದೇವಾಲಯ ಪ್ರವೇಶದ ನಿಷೇಧವನ್ನು ವಿರೋಧಿಸಬೇಕಾದುದು ನಮ್ಮ ಕರ್ತವ್ಯ. ಅದಕ್ಕಾಗಿ ಇಲ್ಲಿ ಅದನ್ನು ಚರ್ಚಿಸುತ್ತಿದ್ದೇನೆ. ಈ ನಿಷೇಧ ಸಮಾನತೆಗೆ ವಿರೋಧ. ಈ ನಿಷೇಧ ಸಾಮಾಜಿಕ ನ್ಯಾಯಕ್ಕೆ ವಿರೋಧ.

ಭಾಗ ೨

**ನೀರಿನ ಮೀಮಾಂಸೆ**

ನೀರು ಸಮಾನತೆ ತತ್ವ, ನೀರು ಸಮಾನತೆ ಸಿದ್ಧಾಂತ, ನೀರು ಸಮತೆಯ ನಿಯಮ. ನೀರು ಯಾರಿಗೂ ತಾರತಮ್ಯ ಮಾಡುವುದಿಲ್ಲ. ಎಲ್ಲರನ್ನೂ ಮನುಷ್ಯ, ಪ್ರಾಣಿ, ಪಕ್ಷಿ, ಕ್ರಿಮಿ, ಕೀಟ, ಗಿಡ, ಮರಗಳನ್ನೆಲ್ಲ ಸಮಾನವಾಗಿ ಕಾಣುತ್ತದೆ. ಎಲ್ಲರಿಗೂ ತನ್ನ ಸೇವೆಯನ್ನು ಒದಗಿಸುತ್ತದೆ. ಎಲ್ಲರ ದಾಹವನ್ನು ಅದು ನೀಗುತ್ತದೆ. ಆದರೆ ಲಾಗಾಯ್ತಿನಿಂದ ನಮ್ಮ ಸಮಾಜದಲ್ಲಿ ಪವಿತ್ರ–ಅಪವಿತ್ರ, ಶುದ್ಧ–ಅಶುದ್ಧ ಅನ್ನುವ ಭೇದ ಪ್ರಣಾಳಿಕೆಯನ್ನು ನೀರಿಗೆ ಅನ್ವಯ ಮಾಡಿಕೊಂಡು ಬರುತ್ತಿದ್ದೇವೆ. ನೀರು ಪವಿತ್ರವಾಗಿಬಿಟ್ಟರೆ ಅದು ತೀರ್ಥವಾಗಿಬಿಡುತ್ತದೆ. ಆಗ ಅದನ್ನು ಎಲ್ಲರೂ ಮುಟ್ಟಲೂ ಬರುವುದಿಲ್ಲ. ಕೆಲವೊಂದು ನದಿಗಳ ನೀರನ್ನು ಪವಿತ್ರವೆಂದು ಪ್ರಚುರ ಪಡಿಸಲಾಗುತ್ತಿದೆ. ಇಂತಹ ನದಿಯ ನೀರು ಪವಿತ್ರ, ಇಂತಹ ನದಿಯ ನೀರನ್ನು ಇಂತಹ ನಕ್ಷತ್ರದಲ್ಲಿ ಸೇವಿಸಿದರೆ ಇಂತಹ ಪಾಪ ನಿವಾರಣೆಯಾಗುತ್ತದೆ, ಇಂತಹ ನದಿಯಲ್ಲಿ ಸ್ನಾನ ಮಾಡಿದರೆ ಪುಣ್ಯ ಪ್ರಾಪ್ತವಾಗುತ್ತದೆ ಮುಂತಾದ ತಾರತಮ್ಯಗಳಿಂದ ಕೂಡಿದ ಸಂಗತಿಗಳನ್ನು ನಮ್ಮ ಸಮಾಜ ಅನಾದಿ ಕಾಲದಿಂದಲೂ ಅನುಸರಿಸಿಕೊಂಡು ಬರುತ್ತಿದೆ. ಈ ಬಗ್ಗೆ ಹಡಪದ ಅಪ್ಪಣ್ಣ ಹೇಳುವ ಮಾತುಗಳು ಅರ್ಥಪೂರ್ಣವಾಗಿವೆ: 'ತೀರ್ಥಯಾತ್ರೆ, ಲಿಂಗ ದರುಶನಕ್ಕೆ ಹೋಗಿ ಕರ್ಮವ ಹಿಂಗಿಸಿಕೊಂಡೆವೆಂಬ ಭಂಗಿತರ ಮಾತ ಕೇಳಲಾಗದು.' ವಚನ ಸಂಸ್ಕೃತಿಯು ನೀರಿಗೆ ಸಂಬಂಧಿಸಿದಂತೆ ಸಮಾನತೆಯ ತತ್ವವನ್ನು ಪ್ರತಿಪಾದಿಸುತ್ತದೆ. ಈ ಬಗ್ಗೆ ವಚನಕಾರರ ವಿಚಾರಗಳು ಇಂದಿಗೂ ಪ್ರಸ್ತುತವಾಗಿವೆ. ನೀರನ್ನು ಕುರಿತಂತೆ ವಚನ ಸಂಸ್ಕೃತಿ ಯಾವ ವಿಚಾರಗಳನ್ನು ಮಂಡಿಸುತ್ತದೆ ನೋಡಿ :

*ಜಾತಿ ವಿಜಾತಿ ನಿರ್ಗುಡಿಯ ಹೋದಡೆ*
*ಸುಡು ಹೋಗೆಂದು ನೂಂಕಿತ್ತೆ ಆ ಜಲವು !*
*ಆ ಜಲದಂತಾಗಬೇಡವೇ ಹಿರಿಯರಾದವರು !*
*ನಿಮ್ಮದೊಂದು ಸಮತಾ ಬುದ್ಧಿ ಎನ್ನನೆಂದು ಪೊದ್ದಿರ್ಪುದೋ ಹೇಳಾ*
*ಕಪಿಲಸಿದ್ಧಮಲ್ಲಿಕಾರ್ಜುನ*

– ಸಿದ್ಧರಾಮಣ್ಣನ ಪ್ರಕಾರ ನೀರು ತಾರತಮ್ಯ ಮಾಡುವುದಿಲ್ಲ. ಕೆಲವರನ್ನು ಮುಟ್ಟಿಸಿಕೊಳ್ಳುವ ಮತ್ತು ಕೆಲವರನ್ನು ಮುಟ್ಟಿಸಿಕೊಳ್ಳದಿರುವ ನೀತಿಯನ್ನು ನೀರು ಅನುಸರಿಸುವುದಿಲ್ಲ. 'ನೀವು ಅಪವಿತ್ರರು' ಎಂದು ನೀರು ಯಾರನ್ನೂ ದೂರ ನೂಕುವುದಿಲ್ಲ. ನೀರು ಅಸ್ಪೃಶ್ಯತೆಯನ್ನು ಆಚರಿಸುವುದಿಲ್ಲ. 'ಈ ಬಗೆಯ ಸಿದ್ಧಾಂತವನ್ನು ಪ್ರತಿಪಾದಿಸುವ 'ಸಮತಾಬುದ್ಧಿ'ಯನ್ನು ನನಗೆ ಕೊಡು' ಎಂದು ಮಲ್ಲಿಕಾರ್ಜುನನನ್ನು

ಸಿದ್ಧರಾಮಣ್ಣ ಕೇಳುತ್ತಿದ್ದಾನೆ. ಅವನ ಪ್ರಕಾರ ನೀರಿಗೆ ಸಂಬಂಧಿಸಿದಂತೆ ತಾರತಮ್ಯ ಸಲ್ಲ. ನೀರು ನೀರೇ ! ಅದು ಯಾವ ನದಿಯದ್ದಾದರೂ ಆಗಬಹುದು. ನಮ್ಮೂರಿನ ಹಳ್ಳದ ನೀರೂ ಆಗಬಹುದು. ಅದು ನಮ್ಮ ತೃಷೆಯನ್ನು ಹಿಂಗಿಸಿದರೆ ಸಾಕು. ದಾಹವನ್ನು ಹಿಂಗಿಸುವುದು ನೀರಿನ ಧರ್ಮ. ಯಾವ ನದಿಯ, ಹಳ್ಳದ, ಕೊಳ್ಳದ, ಕೆರೆಯ, ಕಟ್ಟೆಯ ನೀರಾದರೂ ಸರಿ ! ಅದರಲ್ಲಿ ಪವಿತ್ರ–ಅಪವಿತ್ರ ಎಂಬ ಭಿನ್ನತೆ, ಅಸಮಾನತೆ ಸಾಧ್ಯವಿಲ್ಲ.

ಬಸವಣ್ಣ ತನ್ನ ಒಂದು ವಚನದಲ್ಲಿ 'ಜಲವೊಂದೆ ಶೌಚಾಚಮನಕ್ಕೆ' ಅನ್ನುತ್ತಾನೆ. ಅಲ್ಲಮಪ್ರಭು 'ಎಂಬತ್ತು ನಾಲ್ಕು ಲಕ್ಷ ಜೀವರಾಶಿಗೂ ನೆಲವೊಂದೆ, ಜಲವೊಂದೆ' ಎಂದು ಹೇಳುತ್ತಾನೆ. ಸಿದ್ಧರಾಮಣ್ಣ, ಅಲ್ಲಮಪ್ರಭು, ಬಸವಣ್ಣ ...ಹೀಗೆ ಎಲ್ಲರೂ ನೀರಿಗೆ ಸಂಬಂಧಿಸಿದಂತೆ ತಾರತಮ್ಯವನ್ನು ತಿರಸ್ಕರಿಸುತ್ತ ಸಮಾನತೆ ಮೀಮಾಂಸೆಯನ್ನು ಪ್ರತಿಪಾದಿಸುತ್ತಾರೆ. ಆದರೆ ಸಮಾಜ ಇನ್ನೂ ನೀರಿಗೆ ಸಂಬಂಧಿಸಿದಂತೆ ಅಸಮಾನತೆಯನ್ನು, ತಾರತಮ್ಯವನ್ನು, ಮಡಿ–ಮೈಲಿಗೆ ಸಂಗತಿಗಳನ್ನು ಆಚರಿಸಿಕೊಂಡು ಬರುತ್ತಿದೆ. ವಚನಗಳು ಬಿಡಿ ಬಿಡಿಯಾಗಿರ ಬಹುದು. ಆದರೆ ಅವುಗಳಲ್ಲಿ ಒಂದು ಸಮಾನತೆಯನ್ನು ಕುರಿತ ಸಾಮಾನ್ಯವಾದ ತತ್ವ, ಸಿದ್ಧಾಂತ, ಪ್ರಣಾಳಿಕೆಯು ಹರಿಯುತ್ತಿರುವುದನ್ನು ಗುರುತಿಸುವುದು ನಮಗೆ ಕಷ್ಟವಾಗಬಾರದು.

ಭಾಗ ೩

**ಸೂತಕಾಚರಣೆಯ ತಿರಸ್ಕಾರ**

ಬಸವಣ್ಣ, ವಚನ ಸಂಸ್ಕೃತಿ ಇವು ನಮಗೆ ಇಂದು ಯಾಕೆ ಮುಖ್ಯ ಎಂಬುದನ್ನು ವಿವರಿಸುವ ಅಗತ್ಯವಿಲ್ಲ. ಹೆಣ್ಣುಮಕ್ಕಳಿಗೆ ಸಂಬಂಧಿಸಿದಂತೆ, ಮಹಿಳೆಯರಿಗೆ ಸಂಬಂಧಿಸಿದಂತೆ ಇಂದಿಗೂ ನಮ್ಮ ಸಮಾಜದಲ್ಲಿ ತಾರತಮ್ಯ, ಸೂತಕಾಚರಣೆ ಯನ್ನು ಅನುಸರಿಸಿಕೊಂಡು ಬರಲಾಗುತ್ತಿದೆ. ಇದು ಲಿಂಗ ಅಸಮಾನತೆಯ ಪರಮೋಚ್ಚ ಸಂಗತಿಯಾಗಿದೆ. ಮಹಿಳೆಯರಿಗೆ ದೇವಾಲಯ ಪ್ರವೇಶವನ್ನು ನಿರಾಕರಿಸಲಾಗುತ್ತಿದೆ. ಈ ನಿರಾಕರಣೆ ದೇಶಾದ್ಯಂತ ನಡೆದಿದೆ. ದೇವಾಲಯ ಪ್ರವೇಶ ನಿರಾಕರಣೆಗೆ ಕಾರಣ ಅವಳು ಸೂತಕ, ಅಪವಿತ್ರ, ಮೈಲಿಗೆ. ಅದೇ ವೇಳೆ ದೇಶಾದ್ಯಂತ ಇಂದು ಇದರ ಬಗ್ಗೆ ಚರ್ಚೆ ನಡೆಯುತ್ತಿದೆ. ತಾಯಿ ತೃಪ್ತಿ ದೇಸಾಯಿ ಯವರು ಈ ಬಗೆಯ ಅಸಮಾನತೆಯ ವಿರುದ್ಧ ಹೋರಾಟ ಮಾಡುತ್ತಿದ್ದಾರೆ. ಹೆಣ್ಣುಮಕ್ಕಳನ್ನು ಮನುಷ್ಯರೆಂದು, ಭಾರತದ ನಾಗರಿಕ ವ್ಯಕ್ತಿಗಳೆಂದು, ಸಮಾಜ ಪರಿಗಣಿಸುತ್ತಿಲ್ಲ. ಅವರನ್ನು ಎರಡನೆಯ ದರ್ಜೆಯ ನಾಗರಿಕರನ್ನಾಗಿ ನೋಡಲಾಗುತ್ತಿದೆ. ವಚನ ಸಂಸ್ಕೃತಿಯು ಈ ಬಗೆಯ ವಿಕೃತಿಗಳ ವಿರುದ್ಧ ಹೋರಾಟ ನಡೆಸುತ್ತಾ ಬಂದಿದೆ. ವಚನ ಸಂಸ್ಕೃತಿಯು ಲಿಂಗ ಸಮಾನತೆಗೆ ಸಂಬಂಧಿಸಿದಂತೆ ಆರಂಭ ಮಾಡಿದ್ದ ಹೋರಾಟವನ್ನು ತಾಯಿ ತೃಪ್ತಿ ದೇಸಾಯಿ ಅವರು




## ರಾಮರಾಜ್ಯ

**ಯಾ**ವುದಕ್ಕೂ ಚಿಂತೆ ಮಾಡಬೇಕಿಲ್ಲ
ನಾವು ರಾಮರಾಜ್ಯದಲ್ಲಿದ್ದೇವೆ

ಅಡುಗೆಮನೆಯ ಹೊಗೆಗೂಡಿನ
ಕಣ್ಣೀರೀಗ ಬೀದಿಗೆ ಬಂದಿದೆ
ಥೇಟ್ ರಾಮರಾಜ್ಯದ ಹಾಗೆ.

ಚಿಂತಿಸಬೇಡಿ ಗೆಳತಿಯರೇ
ತುಂಬಿದ ಗರ್ಭಿಣಿ ಸೀತೆಯನ್ನು
ಸ್ವಂತ ಗಂಡನೇ ಅನುಮಾನ ಪಟ್ಟು
ಕಾಡಿಗಟ್ಟಿದಾಗ
ರಾಮರಾಜ್ಯವೇ ಆಗಿತ್ತು
ಆಸೆಪಟ್ಟ ಶೂರ್ಪನಖಿ ಬೇಡವೆನಿಸಿದರೆ
ನಿರಾಕರಿಸುವ ಬದಲು
ಕಿವಿ, ಮೂಗು, ಮೊಲೆ ಕತ್ತರಿಸಿ ವಿಕಾರವಾಗಿಸಿದ್ದೂ
ರಾಮರಾಜ್ಯದಲ್ಲೇ ಎನ್ನುವುದು ನೆನಪಿರಲಿ...
ಈಗಲೂ ಪರಿಸ್ಥಿತಿ ಭಿನ್ನವಾಗಿಲ್ಲ...
ನಾವು ಈಗಲೂ ರಾಮರಾಜ್ಯದಲ್ಲೇ ಇದ್ದೇವೆ.

ರಾತ್ರಿ ಯಾವ ಹೆಣ್ಣೂ ತಂಗಾಳಿ
ಸೇವನೆಗೆಂದು ಒಂಟಿಯಾಗಿ
ಓಡಾಡುವಂತಿರಲಿಲ್ಲ ರಾಮರಾಜ್ಯದಲ್ಲಿ
ಅಯ್ಯೋ, ಅರಮನೆಯ ಸ್ತ್ರೀಯರನ್ನು
ಸೂರ್ಯಕಿರಣವೂ ಸೋಕುವಂತಿರಲಿಲ್ಲ
ಸೋಕಿತೋ ಸೂರ್ಯನಿಗೂ ಸೆರೆವಾಸ ತಪ್ಪಿದ್ದಲ್ಲ...

ಪಾಪ ಆ ನಿರ್ಭಯಾಳಿಗೂ
ಈ ವಿಷಯ ಗೊತ್ತಿರಲಿಲ್ಲ
ರಾತ್ರಿ ಆದಮೇಲೆ ಹೆಣ್ಣು
ಹೊರಹೋಗಬಾರದೆಂದು.
ಈಗಲೂ ರಾವಣ ಹೊಂಚುಹಾಕುತ್ತಿದ್ದಾನೆಂದು

ಹದಿನಾಲ್ಕು ವರ್ಷ ಸೀತೆ
ವನವಾಸ ಅನುಭವಿಸಿದ್ದೂ ರಾಮರಾಜ್ಯದಲ್ಲೇ
ಹಾಡುಹಗಲೇ ಆಕೆಯನ್ನು
ಅಪಹರಿಸಿದ್ದೂ ರಾಮರಾಜ್ಯದಲ್ಲೇ...

ಕಷಾಯವಸ್ತ್ರಾಧಾರಿ ರಾವಣೇಶ್ವರ
ಇಂದಿಗೂ ಕಾವಿ ಉಡುಗೆಯೊಳಗೆ
ಪ್ರೇಮಲತೆಯನ್ನು ಹಬ್ಬಿಸುತ್ತಿದ್ದಾನೆ ಎಂಬುದಷ್ಟೇ ಸಾಕು
ನಾವು ಇನ್ನೂ ರಾಮರಾಜ್ಯದಲ್ಲೇ ಇರುವ ಕುರುಹಾಗಿ



ರಾಮರಾಜ್ಯ ಕಟ್ಟಿದ್ದೂ
ಊರ್ಮಿಳೆ ಎಂಬ ಹೆಣ್ಣಿನ
ಕಣ್ಣೀರಿನ ಗೋರಿಯ ಮೇಲೆ
ಈಗ ನಾವೂ ಕಣ್ಣೀರು ಸುರಿಸುತ್ತಿದ್ದೇವೆ
ನಮ್ಮ ಕಣ್ಣೀರ ಗೋರಿಯ
ಮೇಲೆಯೇ ರಾಮರಾಜ್ಯ ನಿರ್ಮಾಣವಾಗಿದೆ

ಯಾವ ಚಿಂತೆಯೂ ಬೇಡ ಗೆಳತಿ
ನಾವೀಗ ರಾಮರಾಜ್ಯದಲ್ಲಿದ್ದೇವೆ
ಉಸಿರು ಕಟ್ಟಿ ರಾಮರಾಜ್ಯದ
ಸುಖವನ್ನು ಅನುಭವಿಸಿಬಿಡೋಣ

ನಮ್ಮ ಮಾತು, ನಡತೆ, ಯೋಚನೆ
ಜೊತೆಗೆ ನಮ್ಮ ಆಲೋಚನೆ...
ಉಡುಗೆ ತೊಡುಗೆ
ಕೊನೆಗೆ ನಾವು ತಿನ್ನುವ ಆಹಾರವನ್ನೂ
ರಾಮರಾಜ್ಯಕ್ಕೆ ಅನುಗುಣವಾಗಿ ಮಾರ್ಪಡಿಸಿಕೊಂಡು
ಸುಖಲೋಲುಪತೆಯಲ್ಲಿ ಮೈ–ಮನಸ್ಸನ್ನು ಮರೆತುಬಿಡೋಣ

ಕಾಲ ದೇಶ, ರಾಜ್ಯ, ಊರು, ಯಾವುದಾದರೇನು ?
ನಮ್ಮನ್ನು ಆಳುವ ಪ್ರಭು ಯಾರಾದರೇನು...
ನಾವು ಸದಾ ರಾಮರಾಜ್ಯದಲ್ಲೇ ಇರುತ್ತೇವೆ...

**ಶ್ರೀದೇವಿ ಕೆರೆಮನೆ** ಮಹಾದೇವ, ನಾಗಪೊಂಡ, ಸದಾಶಿವಗಡ, ಕಾರವಾರ

ಮುಂದುವರಿಸುತ್ತಿದ್ದಾರೆ. ಆಕೆಯು ಬಸವಣ್ಣನ ನಿಜವಾದ ಅನುಯಾಯಿ ಎಂದು ಕರೆಯುವುದರಲ್ಲಿ ತಪ್ಪೇನಿದೆ !

ವಚನ ಸಂಸ್ಕೃತಿಯು ಪ್ರಜ್ಞಾಪೂರ್ವಕವಾಗಿ ಸೂತಕಾಚರಣೆಗಳನ್ನು ತಿರಸ್ಕರಿಸಿತು. ಲಿಂಗಾಯತ ಸಮಾಜ ಸೂತಕಗಳನ್ನು ತಿರಸ್ಕರಿಸಿಕೊಂಡು ಬರುತ್ತಿರುವುದನ್ನು ವಸಾಹತುಶಾಹಿ ಕಾಲದ (೧೮ ಮತ್ತು ೧೯ನೆಯ ಶತಮಾನ) ಅನೇಕ ದಾಖಲೆಗಳು, ವರದಿಗಳು, ಅಧ್ಯಯನಗಳು, ಸರ್ಕಾರಿ ದಸ್ತಾವೇಜುಗಳು ದೃಢಪಡಿಸುತ್ತವೆ. ಸೂತಕಾಚರಣೆಗೆ ವಚನ ಸಂಸ್ಕೃತಿಯಲ್ಲಿ ಅವಕಾಶವಿಲ್ಲ. ಸೂತಕ ಅನ್ನುವುದು ಅಮಾನವೀಯ, ಪ್ರತಿಗಾಮಿ, ಅಸಮಾನತೆಯನ್ನು ಪೋಷಿಸುವ ಸಂಗತಿ. ಸೂತಕಗಳನ್ನು ಲಿಂಗಾಯತ ಮಹಿಳೆಯರು ಪಾಲಿಸುತ್ತಿಲ್ಲ ಎಂದು ಅವರನ್ನು ಜರಿಯುವ ಜನರು ಇಂದಿಗೂ ಇದ್ದಾರೆ.

ಇಲ್ಲಿ ಸೂತಕಾಚರಣೆ ನಿರಾಕರಣೆ ಬಗ್ಗೆ ಅಕ್ಕಮಹಾದೇವಿಯ ವಚನವನ್ನು ನಿದರ್ಶನವಾಗಿ ಪರಿಶೀಲಿಸಬಹುದು :

*ಹೆಣ್ಣು ಹೆಣ್ಣಾದಡೆ ಗಂಡಿನ ಸೂತಕ, ಗಂಡು ಗಂಡಾದಡೆ ಹೆಣ್ಣಿನ ಸೂತಕ*
*ಮನದ ಸೂತಕ ಹಿಂಗಿದಡೆ ತನುವಿನ ಸೂತಕಕ್ಕೆ ತೆರವುಂಟೆ?*
*ಅಯ್ಯಾ, ಮೊದಲಿಲ್ಲದ ಸೂತಕಕ್ಕೆ ಮರುಳಾಯಿತ್ತು ಜಗವೆಲ್ಲ*
*ಎನ್ನ ದೇವ ಚೆನ್ನಮಲ್ಲಿಕಾರ್ಜುನೆಂಬ ಗುರುವಂಗೆ ಜಗವೆಲ್ಲ ಹೆಣ್ಣು ನೋಡಾ.*

– ಇಡೀ ಜಗತ್ತೇ ಹೆಣ್ಣಾದಡೆ ಸೂತಕ ಎಲ್ಲಿ ಸಾಧ್ಯ ! ಇಲ್ಲಿ ಸೂತಕದ ಅಸ್ತಿತ್ವವನ್ನೇ ಅಕ್ಕ ಪ್ರಶ್ನೆ ಮಾಡುತ್ತಿದ್ದಾಳೆ. ಇದೇ ವಿಚಾರವನ್ನು ಮತ್ತೊಂದು ರೀತಿಯಲ್ಲಿ ಪ್ರತಿಪಾದಿಸುವ ಸಿದ್ದರಾಮಣ್ಣನ ವಚನ ನೋಡಿ:

*ತಾ ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು*
*ತಾ ಮಾಡಿದ ಹೆಣ್ಣು ತನ್ನ ತೊಡೆಯನೇರಿತ್ತು*
*ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಿಗೆಯನೇರಿತ್ತು*
*ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು*
*ಅದು ಕಾರಣ*
*ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಸಿಯಲ್ಲ,*
*ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ*

– ಮಲ್ಲಿಕಾರ್ಜುನನೇ ಹೆಣ್ಣಾದಡೆ ಸೂತಕ ಹೇಗೆ ಸಾಧ್ಯ ! ಮಲ್ಲಿಕಾರ್ಜುನನಿಗೆ ಸೂತಕ ಸಾಧ್ಯವೆ ! ಸೂತಕಾಚರಣೆಯು ಮಹಿಳೆಯರ ಕರ್ತೃತ್ವ ಶಕ್ತಿಯನ್ನು ಹತ್ತಿಕ್ಕಿಬಿಡುತ್ತದೆ. ಲಿಂಗ ಸಮಾನತೆ ಅನ್ನುವುದು ಕೇವಲ ಮಹಿಳೆಯರಿಗೆ ಮಾತ್ರ ಸಂಬಂಧಿಸಿದ ಸಂಗತಿಯಲ್ಲ. ಅದು ಇಡೀ ಸಮಾಜಕ್ಕೆ ಸಂಬಂಧಿಸಿದ ಸಂಗತಿ. ಲಿಂಗ ಸಮಾನತೆ ಅನ್ನುವುದು ಸಹಜವಾದ ಸಂಗತಿಯಲ್ಲ. ಅದನ್ನು ಸಮಾಜವು ರೂಢಿಸಿಕೊಳ್ಳಬೇಕಾಗುತ್ತದೆ. ವಚನ ಸಂಸ್ಕೃತಿಯು ಸಮಾನತೆಯನ್ನು ಕೇವಲ ಆರಾಧನೆ ಮಾಡಲಿಲ್ಲ. ಅದು ಸಮಾನತೆಯನ್ನು ಬದುಕಿಸಿತು. ಹೀಗೆ ಸಿದ್ದರಾಮಣ್ಣ ಮತ್ತು ಅಕ್ಕಮಹಾದೇವಿ ಸೂತಕಾಚರಣೆಗಳನ್ನು ತಿರಸ್ಕರಿಸಿದರು. ಸಿದ್ದರಾಮಣ್ಣನ ಅಸ್ಪೃಶ್ಯತೆಯನ್ನು ನಿರಾಕರಿಸುವ ಮತ್ತೊಂದು ವಚನ ಹೀಗಿದೆ :

*ತಟ್ಟುವ ಮುಟ್ಟುವ ಭೇದವುಳ್ಳನ್ನಬರ ಶರಣನಲ್ಲ*
*ಅದೇನು ಕಾರಣವೆಂದಡೆ*
*ತಟ್ಟದೆ ಮುಟ್ಟದೆ ಕೊಂಬನಾಗಿ*
*ತಟ್ಟುವ ಮುಟ್ಟುವ ಭೇದಗಳೆಲ್ಲ ತನುಗುಣಕ್ಕೆ ದಾರಿ*
*ತಟ್ಟದೆ ಮುಟ್ಟದೆ ಬಟ್ಟ ಬಯಲಾಗಿ*
*ಬಟ್ಟಬಯಲಾಗಿ ಕೊಂಬಾತ ತತ್ವಮಸಿಯಾದ ಕಾಣಾ*
*ಕಪಿಲಸಿದ್ಧ ಮಲ್ಲಿಕಾರ್ಜುನಾ*

– ವಚನ ಸಂಸ್ಕೃತಿಯಲ್ಲಿ ಸೂತಕಗಳನ್ನು ಆಚರಿಸುವವರು ಶರಣರಾಗಲು ಸಾಧ್ಯವಿಲ್ಲ. ಅದಕ್ಕೆ ಅವರು ಅರ್ಹರಲ್ಲ. ಬಟ್ಟಬಯಲಿನಲ್ಲಿ ತಟ್ಟುವ ಮುಟ್ಟುವ ಕ್ರಮಗಳಿಗೆ ಆಸ್ಪದವಿಲ್ಲ. ಆದ್ದರಿಂದಲೇ ವಚನಕಾರರದ್ದು ಬಯಲ ಸಿದ್ಧಾಂತ. ಈ ವಿಚಾರಗಳನ್ನು ದೇವಾಲಯ ಪ್ರವೇಶ ನಿಷೇಧದ ಹಿನ್ನೆಲೆಯಲ್ಲಿ ಪರಿಶೀಲಿಸುವ ಅಗತ್ಯವಿದೆ. ಇಂತಹ ಕ್ರಮ ಅತ್ಯಂತ ಕುತೂಹಲಕಾರಿಯಾಗಿರುತ್ತದೆ. ಅತ್ಯಂತ ಸ್ಪಷ್ಟವಾಗಿ ವಚನ ಸಂಸ್ಕೃತಿಯು ಜಾತಿ ಅಸಮಾನತೆಯನ್ನು ತಿರಸ್ಕರಿಸಿತು. ಎಲ್ಲ ಬಗೆಯ ಕಾಯಕಗಳ ನಡುವೆ ಸಮಾನತೆಯನ್ನು ಪ್ರತಿಪಾದಿಸಿತು. ಈಗಾಗಲೆ ಹೇಳಿದಂತೆ ಇದು ಶ್ರಮ ಸಂಸ್ಕೃತಿಯ ಸಿದ್ಧಾಂತ. ಮಾದಾರ ಧೂಳಯ್ಯ ಹೇಳುವ ಮಾತು ಹೀಗಿದೆ :

'ಅಟ್ಟೆ ಚುಚ್ಚುವ ಉಳಿಯ ಮೊನೆಯಲ್ಲಿ ಪ್ರತ್ಯಕ್ಷನಾದ ಪರಮೇಶ್ವರನನ್ನು ಕಂಡು'. ಯಾವುದನ್ನು ನಾವು 'ಡಿಗ್ನಿಟಿ ಆಫ್ ಲೇಬರ್' ಎಂದು ಕರೆಯುತ್ತೇವೆಯೋ ಅದಕ್ಕೆ ಇದಕ್ಕಿಂತ ಖಚಿತವಾದ ನಿರ್ವಚನ ಬೇಕೆ ? ವಚನ ಸಂಸ್ಕೃತಿಯು ಜೈವಿಕ ನಿಯತಿಯನ್ನು ಆಧರಿಸಿದ ತಾರತಮ್ಯಗಳನ್ನು ಒಪ್ಪಿಕೊಳ್ಳಲಿಲ್ಲ. ಜೈವಿಕ ಭಿನ್ನತೆ ಎಂಬುದನ್ನು ಒಪ್ಪಿಕೊಳ್ಳಬಹುದು. ಆದರೆ ಅದು ಅಸಮಾನತೆಯ ಸಂಗತಿಯಲ್ಲ.

ಭಾಗ ೪

**ಬಯಲ ಸಿದ್ಧಾಂತ**

ವಚನ ಸಂಸ್ಕೃತಿಯಲ್ಲಿ ಬಯಲು ಅಂದರೆ ಮುಕ್ತತೆ ಮತ್ತು ಗಡಿ – ಮೇರೆಗಳಿಲ್ಲದ ಒಂದು ಕ್ರಮ. ಬಯಲು ಅಂದರೆ ಸ್ವಾತಂತ್ರ್ಯ. ಬಯಲು ಅಂದರೆ ಚೈತನ್ಯ. ಬಯಲು ಅಂದರೆ ಸಮಾನತೆ. ಬಯಲು ಅಂದರೆ ಎಲ್ಲರನ್ನು ಒಳಗೊಳ್ಳುವ ಒಂದು ಕ್ರಮ. ಅಲ್ಲಿ ತರತಮಗಳಿಗೆ ಅವಕಾಶವಿಲ್ಲ. ಎಲ್ಲರಿಗೂ ಅಲ್ಲಿ ಪ್ರವೇಶ ಸಾಧ್ಯ. ಅಲ್ಲಮಪ್ರಭುಗಳ ಬಯಲ ಸಿದ್ಧಾಂತ ಹೀಗಿದೆ :

*ಬಯಲು ಬಯಲೆ ಬಿತ್ತಿ ಬಯಲು ಬಯಲನೆ ಬೆಳೆದು*
*ಬಯಲು ಬಯಲಾಗಿ ಬಯಲಾಗಿತ್ತಯ್ಯಾ*
*ಬಯಲ ಜೀವನ ಬಯಲ ಭಾವನೆ*
*ಬಯಲು ಬಯಲಾಗಿ ಬಯಲಾಗಿತ್ತಯ್ಯಾ*
*ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು*
*ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರಾ*

– ವಚನ ಸಂಸ್ಕೃತಿ ಪ್ರತಿಪಾದಿಸಿದ್ದು ಬಯಲ ಜೀವನ. ಅಲ್ಲಿ ತರತಮಗಳಿಗೆ, ತಾರತಮ್ಯಗಳಿಗೆ, ಸೂತಕಾಚರಣೆಗಳಿಗೆ, ಪ್ರತ್ಯೇಕತನಕ್ಕೆ, ಅಸಮಾನತೆಗೆ ಅವಕಾಶವಿಲ್ಲ. ಅಧ್ಯಾತ್ಮ ಅನ್ನುವುದು ಬಯಲನ್ನು ಸಾಧಿಸಿಕೊಳ್ಳುವುದೇ ಆಗಿದೆ.

ಅಲ್ಲಮನ ಪ್ರಕಾರ ಬಯಲನ್ನು ಬಿತ್ತಿದರೆ ಮಾತ್ರ ಬಯಲನ್ನು ಪಡೆಯುವುದು ಸಾಧ್ಯ. ಬಯಲಿನಲ್ಲಿ ಯಾರ ಆಳ್ವಿಕೆಯೂ ಇಲ್ಲ. ಅದು ಹಕ್ಕಿನ ಸಂಗತಿ. ಬಯಲಿನಲ್ಲಿ ಎಲ್ಲರಿಗೂ ಹಕ್ಕಿರುತ್ತದೆ. ನಮ್ಮದು ಹಕ್ಕಿನ ಸಂಸ್ಕೃತಿ.

ಈ ವಿಚಾರವನ್ನು ವಿಭಿನ್ನ ರೀತಿಯಲ್ಲಿ ಪ್ರತಿಪಾದಿಸುವ ಬೊಂತಾದೇವಿಯ ಕೆಳಗಿನ ವಚನ ನೋಡಿ:

*ಊರ ಒಳಗಣ ಬಯಲು, ಊರ ಹೊರಗಣ ಬಯಲೆಂದುಂಟೆ ?*

*ಊರೊಳಗೆ ಬ್ರಾಹ್ಮಣ ಬಯಲು, ಊರ ಹೊರಗೆ ಹೊಲೆ ಬಯಲೆಂದುಂಟೆ ?*

*ಎಲ್ಲಿ ನೋಡಿದಡೆ ಬಯಲೊಂದೆ*
*ಬಿತ್ತಿಯಲಿ ಒಳ ಹೊರಗೆಂಬ ನಾಮವೈಸೆ*
*ಎಲ್ಲಿ ನೋಡಿದಡೆ ಕರೆದಡೆ ಓ ಎಂಬಾತನೆ ಬಿಡಾಡಿ.*

– ಒಬ್ಬ ಸಾಮಾನ್ಯ ವಚನಕಾರ್ತಿ ಅತ್ಯಂತ ವೈಚಾರಿಕವಾದ ರೀತಿಯಲ್ಲಿ ಅಸಮಾನತೆಯ ಸಂಗತಿಯನ್ನು ನಿರಾಕರಿಸುತ್ತಿರುವ ಕ್ರಮ ಬೊಂತಾದೇವಿಯ ವಚನದಲ್ಲಿದೆ. ಅಸಮಾನತೆ ಅನ್ನುವುದು ಸಮಾಜ ರೂಪಿಸಿಕೊಂಡಿರುವ ಒಂದು ವ್ಯವಸ್ಥೆ. ವಾಸ್ತವದಲ್ಲಿ ಬಯಲು ಅನ್ನುವುದು ಒಂದು. ಬಯಲು ಅನ್ನುವುದು ಎರಡಿರಲು ಸಾಧ್ಯವಿಲ್ಲ. ಸಮಾನತೆಯ ತತ್ವವನ್ನು ಇಲ್ಲಿ 'ಒಂದುತನ' ಎಂಬ ರೀತಿಯಲ್ಲಿ ಪರಿಭಾವಿಸಿಕೊಳ್ಳಲಾಗಿದೆ.

ಭಾಗ ೫

**ಸಮಾನತೆ ಸಿದ್ಧಾಂತ**

ಈಗಾಗಲೇ ತಿಳಿಸಿರುವಂತೆ ವಚನ ಸಂಸ್ಕೃತಿ ಪ್ರತಿಪಾದಿಸಿದ್ದು ಸಮಾನತೆಯ ಮೀಮಾಂಸೆ. ಇದನ್ನು ಅಲ್ಲಮ 'ಏಕೋಭಾವ' ಎಂದು ಕರೆದರೆ ಸಿದ್ಧರಾಮಣ್ಣ 'ಸಮತಾ ಬುದ್ಧಿ' ಎಂದು ಕರೆಯುತ್ತಾನೆ. ಬಸವಣ್ಣ, ಬೊಂತಾದೇವಿ ಮುಂತಾದವರು 'ಒಂದುತನ' ಎಂದು ಕರೆಯುತ್ತಾರೆ. ಅಲ್ಲಮ ಪ್ರಭುವೇ ಇದನ್ನು 'ಬಯಲು' ಎಂದು ಕರೆಯುತ್ತಾರೆ. ಬಯಲು ಅನ್ನುವುದು ಸಮಾನತೆಗೆ ಸಂಬಂಧಿಸಿದ ಸಂಗತಿ. ಘಟ್ಟಿವಾಳಯ್ಯ ಇದನ್ನು ಪ್ರತಿಪಾದಿಸುವ ಕ್ರಮ ಹೀಗಿದೆ :

*ಮೇಲನರಿತಲ್ಲಿ ಕೀಳಿಲ್ಲ*
*ಕೀಳನರಿತಲ್ಲಿ ಮೇಲಿಲ್ಲ*
*ಮೇಲು ಕೀಳೆಂಬ ಬೋಳುಮಾಡಿ*
*ಧೂಳಾಗಬಲ್ಲಡೆ ಹೇಳಲಿಲ್ಲ ಕೇಳಲಿಲ್ಲ*
*ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ*
*ಮಿಗೆ ಮಿಗೆ ಬಯಲು*

– ಮೇಲು–ಕೀಳುಗಳನ್ನು ಮೀರಿದರೆ ಅಲ್ಲಿ ದೊರೆಯುವುದು ಬಯಲು. ಅದೇ ಸಮಾನತೆ. ಅಲ್ಲಮನು ಲಿಂಗ ಸಮಾನತೆಯನ್ನು ಪ್ರತಿಪಾದಿಸುವ ಬಗೆಯನ್ನು ನೋಡಿ:

*ಉಭಯ ದೃಷ್ಟಿ ಏಕ ದೃಷ್ಟಿಯಲ್ಲಿ ಕಾಂಬಂತೆ*
*ದಂಪತಿ ಏಕೋಭಾವದಲ್ಲಿ ನಿಂದಲ್ಲಿ*
*ಗುಹೇಶ್ವರನಿಗೆ ಅರ್ಪಿತವಾಯಿತ್ತು.*

ಸಮಾನತೆ ಸಿದ್ಧಾಂತದ ಪರಮೋಚ್ಚ ಪ್ರತಿಪಾದನೆಯನ್ನು ದಾಸಿಮಯ್ಯಗಳ ಕೆಳಗಿನ ವಚನದಲ್ಲಿ ಕಾಣಬಹುದು. ಸಮಾನತೆಯ ವಿವಿಧ ಆಯಾಮಗಳನ್ನು ವಚನಕಾರರು ಗುರುತಿಸಿದ್ದಾರೆ. ಆರ್ಥಿಕ ಅಸಮಾನತೆ, ಜಾತಿ ಅಸಮಾನತೆ, ಲಿಂಗ ಅಸಮಾನತೆ ...ಹೀಗೆ ಎಲ್ಲ ಬಗೆಯ ಅಸಮಾನತೆಗಳನ್ನು ದಾಸಿಮಯ್ಯ ತಮ್ಮ ಒಂದು ವಚನದಲ್ಲಿ ಹಿಡಿದಿಟ್ಟಿರುವುದನ್ನು ಕಾಣಬಹುದು :

*ಮಡದಿಯ ಪ್ರಾಣಕ್ಕೆ ಮೊಲೆ ಮುಡಿ ಇದ್ದಿತೇ*
*ಒಡೆಯರ ಪ್ರಾಣಕ್ಕೆ ಇದ್ದಿತೇ ಯಜ್ಞೋಪವೀತ*
*ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೆ ಹಿಡಿಗೋಲ*
*ನೀ ತೊಡಕ್ಕಿಕ್ಕಿದ ತೊಡಕ ನೀ ಲೋಕದ ಜನರೆತ್ತ ಬಲ್ಲರೈ, ರಾಮನಾಥ*

– ಈ ವಚನದ ಮೊದಲನೆಯ ಸಾಲು ಲಿಂಗ ಅಸಮಾನತೆಯ ಬಗ್ಗೆ, ನಂತರದ ಸಾಲುಗಳ ಒಡೆಯರು–ಕಡೆಯವರು ಎಂಬ ನುಡಿಗಳು ಆರ್ಥಿಕ ಅಸಮಾನತೆಯ ಬಗ್ಗೆ ಮತ್ತು ಯಜ್ಞೋಪವೀತ–ಹಿಡಿಗೋಲ ಎಂಬ ನುಡಿಗಳು ಜಾತಿ ಅಸಮಾನತೆ ಬಗ್ಗೆ, ಅಂತ್ಯಜ ಅನ್ನುವುದು ಸಾಂಸ್ಕೃತಿಕ ತಾರತಮ್ಯದ ಬಗ್ಗೆ ಬೆಳಕು ಚೆಲ್ಲುತ್ತವೆ. ವಚನಗಳನ್ನು ಅರ್ಥ ಮಾಡಿಕೊಳ್ಳುವುದು ಮತ್ತು ವಿಮರ್ಶೆ ಮಾಡುವುದು ಬಹು ಆಯಾಮದ ಚಟುವಟಿಕೆಯಾಗಬೇಕು. ಆಗ ಮಾತ್ರ ನಮಗೆ ವಚನಗಳ ಮಹತ್ವ ತಿಳಿಯುತ್ತದೆ. ಆಗ ಮಾತ್ರ ವಚನಗಳನ್ನು ಅನುಭವಿಸುವುದು ಸಾಧ್ಯ. ಮೇಲಿನ ನಾಲ್ಕು ಸಾಲಿನ ವಚನದಲ್ಲಿ ದಾಸಿಮಯ್ಯ ಅನೇಕ ಬಗೆಯ ಅಸಮಾನತೆಯ ವಿರುದ್ಧ ತಮ್ಮ ವಿಚಾರವನ್ನು ಮಂಡಿಸಿದ್ದಾನೆ. ಈ ಕಾರಣಕ್ಕೇ ಹೇಳಿದ್ದು ವಚನ ಸಂಸ್ಕೃತಿಯು ಪ್ರಥಮತಃ ಸಮಾನತೆಯ ಪ್ರಣಾಳಿಕೆಯಾಗಿದೆ ಎಂದು. ಅದು ಬಹುಳಾಕಾರಿ ಸಿದ್ಧಾಂತ.

ಭಾಗ ೬

**ಆಹ್ವಾನ ಮತ್ತು ವಿಸರ್ಜನೆ : ಯಜ್ಞ–ಯಾಗದ ಪರಿಭಾಷೆ**

ಆಹ್ವಾನ ಮತ್ತು ವಿಸರ್ಜನೆ ಅನ್ನುವುದು ಯಜ್ಞದ ಪರಿಭಾಷೆ. ಅದಕ್ಕೆ ವಚನ ಸಂಸ್ಕೃತಿಯಲ್ಲಿ ಅವಕಾಶವಿಲ್ಲ. ಇದರ ಬಗ್ಗೆ ಬಸವಣ್ಣನ ವಚನ ನೋಡಿ :

*ಆಹ್ವಾನವಿಲ್ಲ ಪ್ರಾಣ ಲಿಂಗವಾದ ಕಾರಣ*
*ವಿಸರ್ಜನವಿಲ್ಲ ಲಿಂಗ ನೆಲೆಗೊಂಡಿಪ್ಪುದಾಗಿ*
*ಇದು ಕಾರಣ ಆಹ್ವಾನವಿಲ್ಲ, ವಿಸರ್ಜನವಿಲ್ಲ*
*ಶರಣರ ಪರಿ ಬೇರೆ*
*ಅಂಗಸಂಗವೇ ಲಿಂಗ, ಲಿಂಗಸಂಗವೇ ಮನ*
*ನಮ್ಮ ಕೂಡಲಸಂಗನ ಶರಣ ಸುಯಿದಾನಿ*

ವಚನ ಸಂಸ್ಕೃತಿಯಲ್ಲಿ ಯಜ್ಞ–ಯಾಗಗಳಿಗೆ, ಹೋಮ–ಹವನಗಳಿಗೆ, ಹವಿಸ್ಸಿನ ಅರ್ಪಣೆಗೆ ಅವಕಾಶವಿಲ್ಲ. ಏಕೆಂದರೆ ಪ್ರಾಣವೇ ಲಿಂಗವಾದ ಕಾರಣ ಯಾರನ್ನು ಆಹ್ವಾನಿಸುವುದು? ಲಿಂಗ ಪ್ರಾಣದಲ್ಲಿ ನೆಲೆಗೊಂಡ ಕಾರಣ ಯಾವುದನ್ನು ವಿಸರ್ಜನ ಮಾಡುವುದು? ಇಲ್ಲಿ ಆಹ್ವಾನಕ್ಕೂ, ವಿಸರ್ಜನಕ್ಕೂ ಅವಕಾಶವಿಲ್ಲ. ಕೂಡಲಸಂಗನ ಶರಣರ 'ಪರಿ ಬೇರೆ' ಎಂಬುದು ಬಸವಣ್ಣನ ಸಂದೇಶ. ವಚನ ಸಂಸ್ಕೃತಿಯಲ್ಲಿ ಲೌಕಿಕ ಮುಖ್ಯ. ಇಲ್ಲಿರುವುದು ಒಂದೇ ಲೋಕ. ಮತ್ತೊಂದು ಲೋಕವಿಲ್ಲ. ಯಜ್ಞ–ಯಾಗಗಳನ್ನು ವಚನ ಸಂಸ್ಕೃತಿಯು, ಲಿಂಗವಂತ ಧರ್ಮವು ತಿರಸ್ಕರಿಸಿದೆ. ಈ ಕಾರಣಕ್ಕೆ ಅದೊಂದು ವೈಚಾರಿಕ ಪ್ರಣಾಳಿಕೆ. ಅತ್ಯಂತ ದುರದೃಷ್ಟದ ಸಂಗತಿಯೆಂದರೆ ಕರ್ನಾಟಕವು ಬಸವಣ್ಣನಿಂದ ದೂರ ಸರಿಯುತ್ತಿರುವಂತೆ ಕಾಣುತ್ತಿದೆ. ಇದನ್ನು ನಾವು ತಡೆಯಬೇಕಾಗಿದೆ. ಬಸವಣ್ಣನು 'ನೀರ ಕಂಡಲ್ಲಿ ಮುಳುಗುವರಯ್ಯಾ, ಮರನ ಕಂಡಲ್ಲಿ ಸುತ್ತುವರಯ್ಯಾ' ಎಂದು ಕುರುಡು ಸಂಪ್ರದಾಯದ ಆಚರಣೆಗಳನ್ನು ಕುರಿತಂತೆ ತೀವ್ರ ಟೀಕೆ ಮಾಡುತ್ತಾನೆ. 'ಹರಸಿ ಮಾಡುವುದು ಹರಕೆಯ ದಂಡ, ನೆರಹಿ ಮಾಡುವುದು ಡಂಬಿನ ಭಕ್ತಿ, ಹರಹ ಬೇಡ, ನೆರಹ ಬೇಡ, ಬಂದ ಬರವನರಿದು ಮಾಡಿದಡೆ ಕೂಡಿಕೊಂಡಿಪ್ಪ ನಮ್ಮ ಕೂಡಲಸಂಗಮದೇವ' ಅನ್ನುತ್ತಾನೆ. ಆದರೆ ಮರಗಳನ್ನು ಸುತ್ತುವುದು, ನೀರಲ್ಲಿ ಮುಳುಗುವುದು, ಹರಕೆ ಕಟ್ಟಿಕೊಳ್ಳುವುದು ಅವ್ಯಾಹತವಾಗಿ ನಡೆದಿದೆ. ನೀರನ್ನು ತೀರ್ಥವೆಂದು ಮಾರಾಟ ಮಾಡಲಾಗುತ್ತಿದೆ. ಸಾವಿರಾರು ಕೋಟಿ ರೂಪಾಯಿ ವಿನಿಯೋಜಿಸಿ ಗುಡಿಗಳನ್ನು ಕಟ್ಟಲಾಗುತ್ತಿದೆ. ಇವೆಲ್ಲ ಬಸವಣ್ಣನಿಂದ ಕರ್ನಾಟಕ ದೂರ ಸರಿಯುತ್ತಿದೆ ಅನ್ನುವುದಕ್ಕೆ ಸಾಕ್ಷಿ. ಅಂಬಿಗರ ಚೌಡಯ್ಯ ಹೇಳುತ್ತಾನೆ : 'ದೇಹಾರ ಮಾಡುವ ಅಣ್ಣಗಳಿರಾ, ಒಂದು ತುತ್ತು ಆಹಾರವನಿಕ್ಕಿರಯ್ಯಾ, ದೇಹಾರಕ್ಕೆ ಆಹಾರವೇ ನಿಚ್ಚಣಿಕೆ, ದೇಹಾರವ ಮಾಡುತ್ತೆ ಆಹಾರವನಿಕ್ಕದಿದ್ದರೆ ಆ ಹರನಿಲ್ಲೆಂದ ಅಂಬಿಗರ ಚೌಡಯ್ಯ'. ಬಸವಾದಿ ಶರಣರು ಹಾಕಿಕೊಟ್ಟ ದಾರಿಯಲ್ಲಿ ಸಾಗುವ ಬಗ್ಗೆ ನಮ್ಮನ್ನು ನಾವು ಸಿದ್ಧಪಡಿಸಿಕೊಳ್ಳಬೇಕಾಗಿದೆ.

**ಡಾ॥ ಟಿ. ಆರ್. ಚಂದ್ರಶೇಖರ**
ಸಮಾಲೋಚಕರು, ನಾಲ್ಕನೆ ರಾಜ್ಯ ಹಣಕಾಸು ಆಯೋಗ, ದಕ್ಷಿಣ ಭಾಗ
ಮೂರನೆ ಮಹಡಿ. ಖನಿಜ ಭವನ, ರೇಸ್‌ಕೋರ್ಸ್ ರೋಡ್, ಬೆಂಗಳೂರು – ೫೬೦ ೦೦೧



## ಹೆಣ್ಣು

ನಾನು ಪತಿಯ
ಪ್ರತಿ ಹೆಜ್ಜೆಯ ಮೇಲೆ
ಹೆಜ್ಜೆಯನ್ನಿಟ್ಟು
ಮುನ್ನಡೆಸುತ್ತಿರುವೆ.

ಏಕೆಂದರೆ
ಇನ್ಯಾವಳೋ ಜೊತೆ
ಓಡಿ ಹೋದಾನು
ಅಂತ ಕಾಯುತ್ತಿರುವೆ.

**ದ್ವಾರನಕುಂಟೆ ಪಾತಣ್ಣ**
ನಾಗಸಂದ್ರ ಅಂಚೆ, ಬೆಂಗಳೂರು–೭೩



ಬಂಗ್ಲಾದೇಶದ ರಾಜಧಾನಿ ಢಾಕಾದ ಹೋಟೆಲೊಂದರ ಮೇಲೆ ನಡೆದ ದಾಳಿ

## ಭಯೋತ್ಪಾದಕರು ಮೆರೆವ ಅಟ್ಟಹಾಸ

**ಇ**ಂದು ಪ್ರಪಂಚದ ಜನರು ಭಯೋತ್ಪಾದನೆಯ ನೆರಳಿನಲ್ಲೇ ಬದುಕಬೇಕಾದ ಸ್ಥಿತಿ ಉಂಟಾಗಿದೆ. ಪ್ರಾಯಶಃ ಇತಿಹಾಸದಲ್ಲಿ ಇಪ್ಪತ್ತೊಂದನೇ ಶತಮಾನ 'ಭಯೋತ್ಪಾದನೆಯ ಶತಮಾನ' ಆದೀತೇನೋ ಎಂಬ ಸಂದೇಹಕ್ಕೆ ಪುಷ್ಟಿ ದೊರೆತಿದೆ ಈವರೆಗಿನ ಘಟನೆಗಳನ್ನು ಅವಲೋಕಿಸಿದರೆ. ಅಮೆರಿಕ ಭಯೋತ್ಪಾದನೆಯ ವಿರುದ್ಧ ಸಮರ ಸಾರಿದ್ದೂ ಕೂಡ ಈ ಶತಮಾನದ ಪ್ರಾರಂಭದ ದಶಕದಲ್ಲೇ, ದುರಾಕ್ರಮಣಕಾರಿ ರಾಜತಂತ್ರದಲ್ಲಿ ಅದು ಹೆಜ್ಜೆ ಇರಿಸಿದ್ದೂ ಆಗಲೆ. ತಾಲಿಬಾನ್, ಅಲ್‌ಖೈದಾ, ಇಸ್ಲಾಮಿಕ್ ಕ್ಯಾಲಿಫೇಟ್ ಮುಂತಾದವು ಹುಟ್ಟಿಕೊಂಡಿದ್ದು ಕೂಡ ಆಗಲೇ. ಎಗ್ಗಿಲ್ಲದೆ ಎಲ್ಲೆಂದರಲ್ಲಿ ದಾಳಿ ನಡೆಸಿ ಅಮಾಯಕ ಜನರ ಅಸು ನೀಗಿಸಿ ಉಪಟಳ ಮಾಡುವ ಸಾಮರ್ಥ್ಯವನ್ನು ಈ ಸಂಘಟನೆಗಳು ಪಡೆದುಕೊಂಡಿವೆ. ಈ ವರ್ಷ ಜುಲೈ ತಿಂಗಳ ಪ್ರಾರಂಭದಲ್ಲಿ ನೆರೆಯ ನಾಡಾದ ಬಂಗ್ಲಾದೇಶ, ಇರಾಕ್‌ಗಳಲ್ಲಿ ಜರುಗಿದ ಹತ್ಯಾಕಾಂಡ, ಫ್ರಾನ್ಸ್‌ನ ನೈಸ್ ಎಂಬಲ್ಲಿ ಸಂತಬ್ಯಾಸಲಿಕ್ ಉತ್ಸವದ ಸಮಯದಲ್ಲಿ ಉಗ್ರನೋರ್ವ ನಡೆಸಿದ ದಾಳಿ ಅದಕ್ಕೆ ಸಾಕ್ಷಿ. ಈ ಮೂರೂ ದುರ್ಘಟನೆಗಳಲ್ಲಿ ಮಡಿದವರಿಗೆ 'ಹೊಸತು' ನಮನ ಸಲ್ಲಿಸುತ್ತದೆ, ಅವರ ಕುಟುಂಬ ವರ್ಗದವರಿಗೆ ಸಂತಾಪ ಸೂಚಿಸುತ್ತದೆ.

ಬಂಗ್ಲಾದೇಶದ ರಾಜಧಾನಿ ಢಾಕಾದ ಹೋಟೆಲೊಂದರ ಮೇಲೆ ನಡೆದ ದಾಳಿಯಲ್ಲಿ ೨೦ ಮಂದಿ ಹತರಾದರು. ಇವರ ಪೈಕಿ ಭಾರತದ ಯುವತಿಯೊಬ್ಬಳು ಹತಳಾದಳು... ಇಸ್ಲಾಮಿಕ್ ಸ್ಟೇಟ್‌ನ ಪ್ರೇರಣೆಯಿಂದ ಏಳು ಮಂದಿ ಬಂದೂಕುದಾರಿಗಳ ಪೈಕಿ ಆರು ಮಂದಿ ಹತರಾದರೆ, ಒಬ್ಬ ಗಾಯಾಳು ಸೆರೆ ಸಿಕ್ಕಿದ್ದಾನೆ. ಬಂಗ್ಲಾದೇಶ ಸರಕಾರ ನೇರವಾಗಿ ಪಾಕಿಸ್ತಾನದ ಗೂಢಚಾರ ಸಂಘಟನೆ (ಐಎಸ್‌ಐ) ಈ ದುರ್ಘಟನೆಯ ಹಿಂದಿದೆ ಎಂದು ಆಪಾದಿಸಿದೆ. ಸ್ಥಳೀಯ ಉಗ್ರಗಾಮಿಗಳು ಈ ಬಗೆಯ ಚರ್ಯೆಗಳಲ್ಲಿ ತೊಡಗಿಕೊಂಡಿರುವ ಸಾಧ್ಯತೆ ಇದೆ. ದಾಳಿಯಲ್ಲಿ ಮಡಿದವರಲ್ಲಿ ವಿದೇಶೀಯರೇ ಹೆಚ್ಚು. ಘಟನೆ ಸಂಭವಿಸಿದ್ದು ಕೂಡ ಢಾಕಾದ ರಾಜತಾಂತ್ರಿಕ ವರ್ಗದವರಿರುವ ಬಡಾವಣೆಯಲ್ಲಿ, ಜುಲೈ ೩ರಂದು ರಾತ್ರಿ ಸುಮಾರು ೯ ಗಂಟೆ ಹೊತ್ತಿನಲ್ಲಿ. ಇದು ಈಚಿನ ವರ್ಷಗಳಲ್ಲಿ ಬಂಗ್ಲಾದೇಶದಲ್ಲಿ ಸಂಭವಿಸಿದ ಭಾರಿ ದುರ್ಘಟನೆ. ಕಳೆದ ಒಂದು ವರ್ಷದಿಂದ ಬಂಗ್ಲಾದೇಶದಲ್ಲಿ ವಿದೇಶೀಯರ ಮೇಲೆ ಆಗಾಗ ಹಲ್ಲೆಗಳು ನಡೆಯುತ್ತಲೇ ಇವೆ ಇಸ್ಲಾಮಿಕ್ ಉಗ್ರವಾದಿಗಳಿಂದ. ಸರಕಾರ ಅವನ್ನು ಹತ್ತಿಕ್ಕುವುದರಲ್ಲಿ ವಿಫಲಗೊಂಡಿದೆ ಈವರೆಗೆ. ಒಂದೇ ವಾರದ ಅವಧಿಯಲ್ಲಿ ಭಯೋತ್ಪಾದಕರು ಈಗ ಹಬ್ಬದ ದಿನ ಮಸೀದಿಯೊಂದರ ಮೇಲೆ ದಾಳಿ ನಡೆಸಿದ್ದಾರೆ.

ಮರುದಿನವೇ ಇರಾಕಿನ ರಾಜಧಾನಿ ಬಾಗ್ದಾದ್‌ನಲ್ಲಿ ಸಂಭವಿಸಿದ ಆತ್ಮಾಹುತಿ ಕಾರು ಬಾಂಬ್ ಸ್ಫೋಟ ಇನ್ನೂರಕ್ಕೂ ಹೆಚ್ಚು ಮಂದಿಯನ್ನು ಬಲಿ ತೆಗೆದುಕೊಂಡಿತು. ಮುಸಲ್ಮಾನರು ಆಚರಿಸುವ ರಂಜಾನ್ ದಿನಗಳಲ್ಲಿ ಜನನಿಬಿಡವಾದ ರಸ್ತೆಯೊಂದರಲ್ಲಿ ಸಂಭವಿಸಿದ ದುರ್ಘಟನೆ ಅದು. ಇಸ್ಲಾಮಿಕ್ ರಾಜ್ಯದ ಸಂಘಟನೆ ಈ ದಾಳಿಯ ಹೊಣೆ ಹೊತ್ತಿದೆ. ಇರಾಕಿ ಸೇನೆ ಒಂದು ವಾರದ ಹಿಂದೆ ಇಸ್ಲಾಮಿಕ್ ಕ್ಯಾಲಿಫೇಟ್ ಉಗ್ರರ ವಶದಲ್ಲಿದ್ದ ಫಲ್ಲೂಜಾ ನಗರವನ್ನು ಪುನರ್ ವಶಪಡಿಸಿಕೊಂಡಿದ್ದಕ್ಕೆ ಪ್ರತೀಕಾರವಾಗಿ ಈ ದಾಳಿ ನಡೆದಿದೆ. ಇರಾಕ್‌ನ ಮೊಸುರ್ ಪ್ರಾಂತ ಇನ್ನೂ ಉಗ್ರರ ವಶದಲ್ಲಿಯೇ ಇದೆ. ಈ ದೇಶದಲ್ಲಿ ಈ ವರ್ಷ ನಡೆದಿರುವ ದಾಳಿಗಳಲ್ಲಿ ಹದಿಮೂರನೆಯದು ಹಾಗೂ ದೊಡ್ಡ ಪ್ರಮಾಣದ್ದು ಇದು. ಈ ವರ್ಷ ಜನವರಿ ತಿಂಗಳಿಂದ ಆರು ತಿಂಗಳಲ್ಲಿ ನಡೆದ ಉಗ್ರರ ದಾಳಿಗಳಲ್ಲಿ ಐದುನೂರಕ್ಕೂ ಹೆಚ್ಚು ಮಂದಿ ಹತರಾಗಿದ್ದಾರೆ. ಘಟನೆಗಳಲ್ಲಿ ಮಡಿದವರಲ್ಲಿ ಹೆಚ್ಚಿನವರು ಷಿಯಾ ಮುಸ್ಲಿಮರು. ಅಮೆರಿಕ ದುರಾಕ್ರಮಣ ನಡೆಸಿದ ನಂತರದ ಕಾಲಾವಧಿಯಲ್ಲಿ ಈ ದೇಶದಲ್ಲಿ ಒಂದಲ್ಲ ಒಂದು ದುರ್ಘಟನೆ ಸಂಭವಿಸುತ್ತಲೇ ಇದೆ. ಅಮೆರಿಕ ಇರಾಕನ್ನು ಆಕ್ರಮಿಸಿಕೊಂಡ ನಂತರದ ಕಾಲದಲ್ಲಿ ಇಡೀ ಪಶ್ಚಿಮ ಏಶಿಯ ಅಸ್ಥಿರಗೊಂಡಿದೆ. ಸಿರಿಯ, ಲಿಬಿಯ, ಜೋರ್ಡಾನ್, ಲೆಬನಾನ್ ಮುಂತಾದ ದೇಶಗಳಲ್ಲಿ ಅಂತರ್ಯುದ್ಧ ಪರಿಸ್ಥಿತಿ ಉಂಟಾಗಿದೆ. ಇದೇ ಸಂದರ್ಭದಲ್ಲಿ ಟರ್ಕಿಯಲ್ಲಿ ಸಂಭವಿಸಿದ ಉಗ್ರರ ದಾಳಿಯನ್ನು ನೆನಪಿಸಿಕೊಳ್ಳಬೇಕಿದೆ. ಒಂದು ರೀತಿಯಲ್ಲಿ ಭಯೋತ್ಪಾದಕರು ಸ್ವೇಚ್ಛೆಯಾಗಿ ಬೇಕೆಂದಲ್ಲಿ ದಾಳಿ ನಡೆಸಬಹುದಾದ ಸ್ಥಿತಿ ಉಂಟಾಗಿದೆ.

*   *   *

## ಬ್ರೆಕ್ಸಿಟ್ ತೀರ್ಮಾನ ತಂದಿರುವ ಬಿಕ್ಕಟ್ಟು

**ಯೂ**ರೋಪಿಯನ್ ಯೂನಿಯನ್ನಿಂದ ಬ್ರಿಟನ್ ಹೊರಬೀಳುವ ಪರ ಜನಮತ ಗಣನೆಯ ಫಲಿತಾಂಶ ಹೊರಬೀಳುತ್ತಿದ್ದ ಹಾಗೆ ಬಂಡವಾಳಶಾಹಿ ಷೇರುಮಾರುಕಟ್ಟೆಯಲ್ಲಿ ಅಲ್ಲೋಲ ಕಲ್ಲೋಲ ಆಯಿತು. ಪೌಂಡ್ ಸ್ಟರ್ಲಿಂಗ್‌ನ ಬೆಲೆ ಕುಸಿಯಿತಾದರೆ ಡಾಲರ್ ಚೇತರಿಸಿಕೊಂಡಿತು. ಭಾರತದಲ್ಲಂತೂ ಷೇರುಮಾರುಕಟ್ಟೆ ದಿಢೀರನೆ ಕುಸಿಯಿತು. ಕಳೆದ ಜೂನ್ ೨೩ರಂದು ನಡೆದ ಜನಮತ ಗಣನೆಯಲ್ಲಿ ಬ್ರಿಟನ್ನಿನ ಜನ ನೀಡಿದ ತೀರ್ಪು ಹೊರಬಿದ್ದ ಮರುದಿನ ಕರಾಳ ದಿನ ಎನಿಸಿಕೊಂಡಿತು. ಮತ್ತೆ ಎರಡು ದಿನ ಕಳೆದ ಮೇಲೆ ನಿಧಾನವಾಗಿ ಮಾರುಕಟ್ಟೆಯಲ್ಲಿ ಚೇತರಿಕೆ. ಇದು ಒಂದು ಬಗೆಯ ಸರಣಿ ಪ್ರತಿಕ್ರಿಯೆ ಬಂಡವಾಳಶಾಹಿ ಮಾರುಕಟ್ಟೆಗಳಲ್ಲಿ ಏನಾದರೂ ಒಂದು ಪ್ರಮುಖ ಘಟನೆ ಸಂಭವಿಸಿದಾಗ.

ಬ್ರಿಟನ್ನಿನಲ್ಲಿ ಭಾರತೀಯರು ಹೂಡಿರುವ ಬಂಡವಾಳಕ್ಕೆ ಹೊಡೆತ ಬಿದ್ದರೂ ವಿದ್ಯಾರ್ಥಿಗಳಿಗೆ, ಪ್ರವಾಸಿಗರಿಗೆ ಸ್ವಲ್ಪ ಅನುಕೂಲ ಪೌಂಡ್ ದರ ಇಳಿಕೆಯಿಂದ. ಬ್ರಿಟನ್ ಯೂರೋಪಿಯನ್ ಯೂನಿಯನ್ನಿನಿಂದಾಗುವ ದೀರ್ಘಾವಧಿ ಪರಿಣಾಮಗಳನ್ನು ಎದುರಿಸಲು ಭಾರತ ಸರಕಾರ ಈಗಲೆ ಎಚ್ಚರಿಕೆ ಕ್ರಮ ಕೈಗೊಳ್ಳುವುದು ಸೂಕ್ತ. ತತ್ಕಾಲದ ಚೇತರಿಕೆಯಿಂದ ನಿರಾಳವಾಗಿರುವಂತಿಲ್ಲ. ಬ್ರಿಟನ್‌ನ ನಿರ್ಧಾರ ಅನಿರೀಕ್ಷಿತವೇನಲ್ಲ. ಕನ್ಸರ್‌ವೇಟಿವ್ ಪಕ್ಷದ ಪ್ರಧಾನಿ ಡೇವಿಡ್ ಕಾಮೆರೂನ್ ಯೂನಿಯನ್ನಿನಲ್ಲಿ ಮುಂದುವರಿಕೆ ಕುರಿತು ಜನಮತ ಗಣನೆಗೆ ಮುಂದಾದಾಗಲೇ ಅನಿಶ್ಚಿತತೆ ಪ್ರಾರಂಭವಾಗಿತ್ತು. ಈಗ ಫಲಿತಾಂಶದಿಂದ ಪ್ರಧಾನಿಪಟ್ಟ ತ್ಯಜಿಸುವುದು ಅವರಿಗೆ ಅನಿವಾರ್ಯವಾಗಿದೆ. ಯೂನಿಯನ್ನಿನಿಂದ ಹೊರಬಿದ್ದರೆ ಬ್ರಿಟನ್ನಿಗೆ ಹೆಚ್ಚು ನಷ್ಟವಾದೀತೆ ಹೊರತು ಬೇರೇನೂ ಆಗದು. ಆದರೆ ಯೂನಿಯನ್ನಿನ ಭವಿಷ್ಯದ ಕುರಿತು ವಿಚಾರ ಮಾಡಬೇಕಾಗಿದೆ. ಇದರಲ್ಲಿ ತಕ್ಕಮಟ್ಟಿಗೆ ಸುಭದ್ರವಾದ ಆರ್ಥಿಕತೆ ಹೊಂದಿರುವುದು, ಬೆನ್ನೆಲುಬಾಗಿರುವುದು ಜರ್ಮನಿಯೊಂದೇ. ಗ್ರೀಸ್, ಸ್ಪೇನ್, ಇಟಲಿ ಈಗಾಗಲೇ ಮುಗ್ಗಟ್ಟನ್ನು ಎದುರಿಸುತ್ತಿವೆ. ಸ್ಕಾಂಡಿನೇವಿಯ ದೇಶಗಳಿಗೆ ಯೂನಿಯನ್ನಿನಲ್ಲಿ ಹೆಚ್ಚಿನ ಆಸಕ್ತಿಯಿಲ್ಲ. ಒಂದು ರೀತಿಯಲ್ಲಿ ಹಗುರವಾಗಿರುವ ಈ ಒಕ್ಕೂಟ ಯಾವಾಗಲಾದರೂ ಮುರಿದುಬೀಳಬಹುದು.

ಬ್ರೆಕ್ಸಿಟ್‌ನಿಂದಾಗಿ ಬ್ರಿಟನ್‌ನ ಸಮಗ್ರತೆಗೆ ಭಂಗ ಉಂಟಾಗುವ ಸಾಧ್ಯತೆ ಇದೆ. ಮುಖ್ಯವಾಗಿ ಸ್ಕಾಟ್ಲೆಂಡ್ ಬ್ರಿಟನ್ನಿನಿಂದ ಕಳಚಿಕೊಳ್ಳುವ ಅಪಾಯವಿದೆ. ಸ್ಕಾಟ್ಲೆಂಡಿನ ಶೇ. ೬೨ ಮಂದಿ ಒಕ್ಕೂಟದ ಪರವಾಗಿ ಮತ ನೀಡಿದ್ದಾರೆ. ಹಿಂದೊಮ್ಮೆ ಸ್ಕಾಟ್ಲೆಂಡ್ ಗ್ರೇಟ್ ಬ್ರಿಟನ್ನಿನಲ್ಲಿ ಮುಂದುವರಿಯಬೇಕೆ ಬೇಡವೆ ಎನ್ನುವ ಬಗ್ಗೆ ಜನಮತ ಗಣನೆ ನಡೆದಾಗ ಬಹಳ ಕಡಿಮೆ ಅಂತರದಲ್ಲಿ ಮುಂದುವರಿಕೆ ಪರಮತ ಬಿದ್ದುದನ್ನು ನೆನಪಿಸಿಕೊಳ್ಳಬಹುದು. ಸ್ಕಾಟ್ಲೆಂಡ್‌ನ ನಾಯಕರುಗಳು ಯೂನಿಯನ್ನಿನಲ್ಲಿ ಮುಂದು ವರಿಯುವುದಾಗಿ ಪ್ರಕಟಿಸಿದ್ದಾರೆ. ಹೆಚ್ಚು ಕಡಿಮೆ ಇದೇ ಸ್ಥಿತಿ ವೇಲ್ಸ್ ಮತ್ತು ನಾರ್ದರ್ನ್ ಐರ್‌ಲೆಂಡಿನಲ್ಲೂ ಇದೆ. ಹಾಗಾಗಿ ಇಂಗ್ಲೆಂಡ್ ಏಕಾಂಗಿಯಾಗುವ ಸಾಧ್ಯತೆಗಳೇ ಹೆಚ್ಚು. ಬ್ರೆಕ್ಸಿಟ್‌ನಿಂದಾಗಿ ಪ್ರಧಾನಿ ಡೇವಿಡ್ ಕ್ಯಾಮರೂನ್ ಪದಚ್ಯುತರಾಗಿ, ಥೆರೆಸಾ ಮೇ ಎಂಬ ಮಹಿಳೆ ಪ್ರಧಾನಿಯಾಗಿದ್ದಾರೆ.

**ಸೀಯಾರ್ಕೆ**




# ಸಾವಂತ್ರಿ

**ಮಾರುತಿ ದಾಸಣ್ಣವರ**

೧

ಎಗ್ಗಿಲ್ಲದೆ ತಣ್ಣಗೆ ಹರಿಯುತ್ತಿದ್ದ ಘಟಪ್ರಭಾ ನದಿಯನ್ನು ದಾಟಿದೆ. ನಂತರದ್ದೆಲ್ಲವೂ ಪರಿಚಿತವೇ. ಅಲ್ಲಿಂದ ನನ್ನೂರಿನ ಸರಹದ್ದು. ದೇಸಾಯರ ಹುಲ್ಲಿನ ಗದ್ದೆ, ಕಬ್ಬಿನ ತೋಟ, ಕಳ್ಳಿ ಮರಡಿ, ಅಲ್ಲಿ ಓಡಾಡುವ ಮೊಲ, ಮುಂಗುಸಿಗಳನ್ನು ನೋಡುತ್ತ ರತ್ನ ಪಕ್ಷಿ, ಬೆಳ್ಳಕ್ಕಿಗಳನ್ನು ಮಾತನಾಡಿಸುತ್ತ ಕೈಗೆ ಸಿಕ್ಕ ಕಲ್ಲು, ಕಟ್ಟಿಗೆ ತುಂಡುಗಳನ್ನು ಎಸೆಯುತ್ತ, ಬೇಲಿ ಮೇಲಿನ ಹೂವಿನ ಪರಿಮಳವನ್ನು ಹೀರುತ್ತಾ "ನಗು ನಗುತಾ ನಲಿ ನಲಿ, ಏನೇ ಆಗಲಿ" ಎಂದು ಯಾವಾಗಲೂ ಹಾಡುತ್ತ ಹೋಗುತ್ತಿದ್ದವನಿಗೆ ಅಂದಿನ ಆ ಪಯಣ ತುಂಬ ಪ್ರಯಾಸದಾಯಕ ಎನಿಸತೊಡಗಿತ್ತು. ಹಾಡು ಗುನುಗುನಿಸುವ ಮನಸ್ಸಿಲ್ಲ; ಹಾದಿ ಬದಿ ಪ್ರಾಕೃತಿಕ ಸೋಜಿಗಗಳನ್ನು ನೋಡುವ ಉಲ್ಲಾಸವಿಲ್ಲ.

ದಾರಿ ಸಾಗುತ್ತಿದ್ದರೂ ಹೆಜ್ಜೆಗಳು ಭಾರವಾಗಿದ್ದವು. ಪ್ರತಿ ಶನಿವಾರ ಊರಿಗೆ ಹೊರಟಾಗ ಇರುತ್ತಿದ್ದ ಹುರುಪು, ಹುಮ್ಮಸ್ಸು ಅಂದು ಇರಲಿಲ್ಲ. ಆತಂಕದ ಬಂಡೆಯಡಿ ಸಿಕ್ಕಿ ಜಿಬ್ಬೆಯಾಗಿದ್ದವು. ಅವ್ವ ಹೇಳಿಕಳಿಸಿದ್ದಳು "ನೀ ಏನೂ ಅಂಜಬ್ಯಾಡ, ಬಂದು ಹೋಗು" ಎಂದು. ಈ 'ಅಂಜಬ್ಯಾಡ' ಎಂಬ ಮಾತೇ ಮತ್ತೆ ಮತ್ತೆ ಅಂಜಿಕೆ ಹುಟ್ಟಿಸುತ್ತಿತ್ತು. ಯಾಕೆ ಅಂಜಬೇಡ ಎಂದು ಹೇಳಿಕಳಿಸಿದ್ದಾಳೆ ಎಂಬ ಪ್ರಶ್ನೆ ಮನಸ್ಸನ್ನು ಕೊರೆಕೊರೆದು ತೂತು ಮಾಡುತ್ತಿತ್ತು. ನಾನು ಕಾಲೇಜು ಕಲಿಯುತ್ತಿದ್ದ ಮೂಡಲಗಿಯಿಂದ ನಮ್ಮೂರಿಗೆ ಆಗ ಬಸ್ಸು ಇರಲಿಲ್ಲ. ನಡೆದುಕೊಂಡೇ ಹೋಗಬೇಕಿತ್ತು.

ಕಳೆದ ಎರಡು ವಾರಗಳಿಂದ ಅದೆಷ್ಟು ಸಂತೋಷದಿಂದಿದ್ದೆ ನಾನು. ನನ್ನ ಗುರುಗಳೆಲ್ಲ ಕಂಗ್ರ್ಯಾಟ್ಸ್ ಹೇಳಿದ್ದೇ ಹೇಳಿದ್ದು. ಪ್ರಿನ್ಸಿಪಾಲರಂತೂ ಚೇಂಬರಿಗೆ ಕರೆಸಿ ಕೈ ಕುಲುಕಿ, "ಆಯ್ ಆಮ್ ಪ್ರೌಡ್ ಆಫ್ ಯು ಮೈ ಸನ್. ಕಂಗ್ರ್ಯಾಜುಲೇಶನ್ಸ್" ಎಂದು ಹೇಳಿದ್ದರು. ನಾನು ದ್ವಿತೀಯ ಪಿ.ಯು.ಸಿ.ಯಲ್ಲಿ ಕಾಲೇಜಿಗೇ ಮೊದಲ ರ್‍ಯಾಂಕ್ ಬಂದಿದ್ದೆ. ಅದೇ ಈ ಮಾನ, ಸನ್ಮಾನಗಳಿಗೆ ಕಾರಣ. ಇದುವರೆಗೆ ಅಪರಿಚಿತನಂತೆ ಇದ್ದ ಹಳ್ಳಿ ಹೈದ ಈಗ ಎಲ್ಲರಿಗೂ ಚಿರಪರಿಚಿತನಾಗಿದ್ದೆ. ನನ್ನ ಕಡೆಗೆ ಒಂದೇ ಒಂದು ಕಿರುನೋಟವನ್ನೂ ಬೀರದ ಹುಡುಗಿಯರು ಈಗ ಹತ್ತಿರ ಬಂದು ಮಾತನಾಡುವಷ್ಟು, ನೋಟ್ಸ್ ಕೇಳುವಷ್ಟು, ಧಾರಾಳತನವನ್ನು ತೋರಿಸತೊಡಗಿದ್ದರು. ಈ ಎಲ್ಲ ಸಂತೋಷವನ್ನೂ ಅಮ್ಮನೊಂದಿಗೆ ಹಂಚಿಕೊಳ್ಳಬೇಕೆಂದುಕೊಂಡಿದ್ದವನಿಗೆ ದಿಢೀರನೇ ಬಂದೆರಗಿದ ಈ ಸುದ್ದಿಯಿಂದಾಗಿ ಗಂಟಲಲ್ಲಿ ಏನೋ ಸಿಕ್ಕಿಕೊಂಡಂತಾಗಿತ್ತು.

✴ ✴ ✴

"ನೋಡ್ರಿ, ಮಾತಿಗಿ ಮಾತು ಬೆಳಿಸಿದರ ಏನೂ ಉಪಯೋಗಿಲ್ಲಾ. ಹುಡಗಾ ಇನ್ನೂ ಸಾಲಿ ಕಲ್ಯಾಕ ಹತ್ಯಾನ; ಇನ್ನೂ ಒಂದ ನೌಕರೀನೂ ಇಲ್ಲ. ಅಂವಾ ಭಾಳ ಶಾಣ್ಯಾನೂ ಅದಾನ. ಅಂಥಾದ್ದರಾಗ ಈಗ ಹುಡಿಗಿನ್ನ ಕರಕೊಂಡ ಬರ್ರಿ ಅಂದ್ರ ಹೆಂಗ ಆಗ್ತೈತಿ ?" ಎಂದು ಕೆಲವರು, "ಅದು ಹ್ಯಾಂಗಾಗ್ತೈತ್ರಿ ? ಹುಡಿಗಿ ದೊಡ್ಡಾಕ್ಯಾಗ್ಯಾಳ. ಆಕಿನ್ನ ಮನ್ಯಾಗ ಇಟಗೊಂಡು ಹೆಂಗ ಕುಂಡ್ರೂದು ? ಮದುವಿ ಮಾಡಿಕೊಂಡಾರಂದ ಮ್ಯಾಲ ಕರಕೊಂಡ ಬರಬೇಕು" ಎಂದು ಇನ್ನು ಕೆಲವರು, ಹೀಗೆ ಮಾತುಗಳ ಗುದ್ದಾಟ ನಡೆದಿತ್ತು. ಅಪ್ಪ ತಲೆಮೇಲೆ ಕೈ ಹೊತ್ತು ಕುಳಿತುಬಿಟ್ಟಿದ್ದ. ಅಜ್ಜಿ ಹೊರಗಡೆ ಅಮ್ಮನ ತಂದೆ(ಅಜ್ಜ)ಗೆ ಶಾಪ ಹಾಕುತ್ತ ಕುಳಿತಿದ್ದಳು. ಅವ್ವ "ಇದು ನಮ್ಮಪ್ಪ ಮಾಡಿದ್ದು, ಹ್ಯಾಂಗಾರಾ ಮಾಡಿ ಇದನ್ನು ಸರಿ ಮಾಡಾಕಬೇಕು" ಎಂಬ ತಲೆಬಿಸಿಯಲ್ಲಿ ಓಡಾಡುತ್ತಿದ್ದಳು. ಅಂತೂ ಅದೂ ಇದೂ ಮಾತುಗಳು ಏರಿಳಿತದ ಲಯದಲ್ಲಿ ಮತ್ತೆ ಮತ್ತೆ ಹರಿದಾಡಿ ಕೊನೆಗೆ ಸೋಡ ಚೀಟಿಗೆ ಬಂದು ನಿಂತವು. ನನಗೆ ಈ ಸೋಡ ಚೀಟಿ ಎಂಬುದು ಇಷ್ಟೊಂದು ಸುಲಭವೇ ? ಎಷ್ಟು ಬೇಗ ಇಂಥ ನಿರ್ಣಯಕ್ಕೆ ಬಂದರಲ್ಲ ಇವರು ? ಎಂದು ಆಶ್ಚರ್ಯವಾಯಿತು. ಆದರೂ ಏನೋ ಒಂದು ರೀತಿಯ ಸಮಾಧಾನ.

✴ ✴ ✴

೨

ಬಡತನದ ಬೇಗುದಿಯಲ್ಲಿ ಬೇಯುತ್ತಿದ್ದ ನಮಗೆ ಅವ್ವನ ಮನೆ ಕಡೆಯಿಂದ ಆಗಾಗ ಒಂದಿಷ್ಟು ಸಹಾಯ ಸಿಗುತ್ತಿತ್ತು. ತಾನು ಸಹಾಯ ಮಾಡುತ್ತೇನೆಂಬ ಒಂದು ದರ್ಪದ ಗತ್ತು ಅಜ್ಜ (ಅಮ್ಮನ ತಂದೆ)ನ ವರ್ತನೆಯಲ್ಲೂ ಮತ್ತು ಏನೋ ಪಡೆದುಕೊಳ್ಳುತ್ತೇನೆಂಬ ಧನ್ಯದ ದೈನ್ಯತೆ ಅಪ್ಪನ ವರ್ತನೆಯಲ್ಲೂ ಕಾಣುತ್ತಿದ್ದವು. ಇದು ಅಜ್ಜಿಗೆ ಒಂದಿಷ್ಟೂ ಇಷ್ಟವಾಗುತ್ತಿರಲಿಲ್ಲ. ಅವಳ ಇಷ್ಟ ಕಷ್ಟಗಳನ್ನು ಕೇಳಿ ನಡೆಯುವ ತಾಳ್ಮೆಯಾಗಲೀ, ಅನುಕೂಲವಾಗಲೀ ಅಪ್ಪನಿಗಿರಲಿಲ್ಲ.



ಒಂದು ದಿನ ಇದ್ದಕ್ಕಿದ್ದಂತೆ ಅಜ್ಜನ ಮನೆಗೆ ಹೊರಟಿತು ನಮ್ಮ ಸವಾರಿ. ಆಗ ನಾನು ಎರಡನೇ ತರಗತಿಯಲ್ಲಿ ಓದುತ್ತಿದ್ದ ಹುಡುಗ. ನಾನೇ ನಮ್ಮ ಶಾಲೆಯ ಕ್ಯಾಪ್ಟನ್ ಕೂಡ. ಶಾಲೆಯಲ್ಲಿ ಪ್ರಾರ್ಥನೆ ಮಾಡಿಸುವುದು, ವ್ಯಾಯಾಮ ಮಾಡಿಸುವುದು, ಶಾಲೆಗೆ ಬಾರದ ಮಕ್ಕಳು ಯಾರ್‍ಯಾರೆಂದು ಗುರುಗಳಿಗೆ ವರದಿ ಒಪ್ಪಿಸುವುದು, ಏನಾದರೂ ಬರೆಯುವುದಿದ್ದರೆ ಗುರುಗಳಿಗೆ ಸಹಾಯ ಮಾಡುವುದು, ಕಸದ ಪಾಳಿಯ ಲಿಸ್ಟು ಮಾಡುವುದು, ಅದರಂತೆ ಕಸ ಗುಡಿಸಿಸುವದು ಈ ಎಲ್ಲ ಕೆಲಸಗಳೂ ನನ್ನವೇ. "ಇನ್ನು ಅದೆಲ್ಲ ಯಾರು ಮಾಡಿಸುತ್ತಾರೆ" ಎಂಬ ಮಹಾ ಚಿಂತೆಯ ಮೂಟೆಯನ್ನು ಹೊತ್ತುಕೊಂಡೇ ಹೊರಟೆ. ಅಲ್ಲಿ ಮಾವಂದಿರ (ಅಮ್ಮನ ತಮ್ಮಂದಿರ) ಮದುವೆ. ಆ ಸಂಭ್ರಮದ ಗದ್ದಲದಲ್ಲಿ ಎಲ್ಲವನ್ನು ಮರೆತೂಬಿಟ್ಟೆ.




ಕೋಟಿ ಕೋಟಿ ಕಪ್ಪು ಹಣ
ಸುಡುವಿರೇನದಲಿ ನಿಮ್ಮ ಹೆಣ
ಬೆಳೆಸಿಕೊಳ್ಳಿ ಹಿಂದೆ – ಮುಂದೆ ಮಣ
ಹೊತ್ತುಕೊಳ್ಳಿ ಕೋಟಿ ಬಡವರ ಋಣ

**ಶಿವಪ್ರಸಾದ ಮಲ್ಲರಬಾಣವಾಡಿ**
ಪ್ರಸಾದ್ ಆರ್ಟ್ಸ್, ನೆಲಮಂಗಲ – ೫೬೨೧೨೩

ಮದುವೆ ಹಂದರ ಹಾಕಿದ್ದರು. ನೆಂಟರಿಷ್ಟರಿಂದ ಇಡೀ ಹಂದರ ತುಂಬಿ ತುಳುಕಾಡುತ್ತಿತ್ತು. ಕೊರವರ ಶಹನಾಯಿ, ತಾಸೇ, ದಿಮ್ಮು, ತಾಳಗಳ ಸಪ್ಪಳ ಆ ಮದುವೆಗೊಂದು ವಿಶೇಷ ಕಳೆಯನ್ನು ತಂದುಕೊಟ್ಟಿದ್ದವು. ಮಾವಂದಿರೊಂದಿಗೆ ನನ್ನನ್ನೂ (ಹಸೆ ?) ಮಣೆಯ ಮೇಲೆ ಕೂರಿಸಿದರು. ಅವರ ಪಕ್ಕದಲ್ಲಿ ಮದುವೆ ಯಾಗುವ ಯುವತಿಯರಿದ್ದರೆ ನನ್ನ ಪಕ್ಕದಲ್ಲಿ ಒಬ್ಬ ಹೆಂಗಸು ಸುಮಾರು ಎರಡು ಮೂರು ವರ್ಷದ ಹೆಣ್ಣುಮಗುವನ್ನು ಎತ್ತಿಕೊಂಡು ಕುಳಿತಿದ್ದಳು. ಎಲ್ಲರಿಗೂ ಸ್ನಾನ ಮಾಡಿಸಿದರು ನನಗೂ. ಅಲ್ಲಿ ವಯಸ್ಸಾದ ಅಜ್ಜ ಒಬ್ಬ ಏನೇನು ಮಾಡಬೇಕು ಎಂಬುದನ್ನು ನಿರ್ದೇಶಿಸುತ್ತಿದ್ದ. ಆತ ಹೇಳಿದಂತೆ ಚಾಚೂ ತಪ್ಪದೇ ಮಾಡುತ್ತ ಒಬ್ಬ ಶಿಸ್ತಿನ ವಿದ್ಯಾರ್ಥಿಯಂತೆ ವರ್ತಿಸುತ್ತಿದ್ದ ನನ್ನನ್ನು ಕಂಡ ಅಲ್ಲಿನ ಹಲವಾರು ಹೆಂಗಸರು, ಅವ್ವನ ಓರಗಿತ್ತಿಯರು ಬಂದು ಅಕ್ಕರೆಯಿಂದ ನನ್ನ ಗಲ್ಲ ಸವರಿ (ಕೆಲವರು ಚಿವುಟಿ,) ನೆಟಿಕೆ ಮುರಿಮುರಿದು ತಮ್ಮ ಮೆಚ್ಚುಗೆಯನ್ನು ಪ್ರದರ್ಶಿಸುತ್ತಿದ್ದರು. ನನಗೋ ಒಳಗೊಳಗೇ ಖುಷಿ ನನ್ನನ್ನು ಎಷ್ಟೊಂದು ಜನ ಮೆಚ್ಚಿಕೊಳ್ಳುತ್ತಿದ್ದಾರಲ್ಲ ಎಂಬ ಸಂಭ್ರಮ ! ಅವ್ವ ತನ್ನ ಮುಂದೆ ಯಾರೂ ಇಲ್ಲವೇ ಇಲ್ಲವೆಂಬ ಉಮೇದಿನಲ್ಲಿ ಓಡಾಡುತ್ತಿದ್ದಳು. ಅಂತೂ ಅರಿಶಿಣ, ಸುರಿಗೆ, ಅಕ್ಷತೆ ನಡೆದುಹೋದವು. ಆ ದಿನ ನನ್ನದೂ ಮದುವೆಯಾಯಿತು ಎಂಬುದು ಇತ್ತೀಚೆಗಷ್ಟೇ ನನಗರ್ಥವಾಗಿತ್ತು.

ಮನಸ್ಸು ಕೆಟ್ಟುಹೋಗಿತ್ತು. "ಥೂ ಈ ಹಿರಿಯರೆನ್ನಿಸಿಕೊಂಡವರು ತಮ್ಮ ಗೌರವ, ಪ್ರತಿಷ್ಠೆಗಳ ಮೆರವಣಿಗೆಯಲ್ಲಿ ಒಮ್ಮೊಮ್ಮೆ ಏನೆಲ್ಲ ರಾಡಿ ಹಿಡಿಸಿ ಬಿಡುತ್ತಾರಲ್ಲ ?" ಎಂದು ಪ್ರಕಟವಾಗೇ ಗೊಣಗಿದೆ. ಐದಾರು ತಿಂಗಳ ಹಿಂದಷ್ಟೇ ತೀರಿಕೊಂಡಿದ್ದ ಅಜ್ಜನ ಫೋಟೋ ಗೋಡೆಯ ಮೇಲೆ ನೇತಾಡುತ್ತಿತ್ತು. ಅದನ್ನು (ಅವ್ವ ತಂದು ಹಾಕಿದ್ದಳು) ತೆಗೆದು ಎಸೆದುಬಿಡಬೇಕೆನಿಸಿತು. ತನ್ನ ಹರೆಯದ ಮಕ್ಕಳೊಂದಿಗೆ ನನ್ನ ಮದುವೆಯನ್ನೂ ಮುಗಿಸಿ ನಮ್ಮ ತಂದೆ ತಾಯಿಗೆ ಮಹದುಪಕಾರ ಮಾಡಿದ್ದವನೇ ಅವನು. ಅಪ್ಪ ಅವನ ನಿರ್ಧಾರವನ್ನು ಪ್ರಶ್ನಿಸುತ್ತಿರಲಿಲ್ಲ. ಆಗ ಯಾಕೋ ಅಜ್ಜಿ ಅವನನ್ನು ಯಾವಾಗಲೂ ಬೈಯುತ್ತಿದ್ದುದೇ ಸರಿ ಎಂದು ಅನಿಸತೊಡಗಿತು ಮೊದಲ ಬಾರಿಗೆ. ನನ್ನ ಮನಃಸ್ಥಿತಿಯನ್ನರಿತು ಕೊಂಡಂತೆ ಅವ್ವ ಅವಸರವಸರವಾಗಿ ಬಂದವಳು, "ಅಯ್ಯss ನೀ ಯಾಕ ಚಿಂತಿ ಮಾಡ್ತೀ ? ಬಿಡss ಮಗನ. ಹ್ಯಾಂಗೂ ಹರಕೊಂಡ ಹೋತಲ್ಲಾ, ಛಲೋ ಆತು" ಎಂದು ಸಮಾಧಾನಪಡಿಸುತ್ತ ಇನ್ನೂ ಹತ್ತಿರ ಬಂದು ಕಿವಿಯಲ್ಲಿ, " ಆ ಹುಡಿಗಿ ಯಾಂವಗೋ ಬಸರಾಗಿತ್ತಂತ, ಅದಕ್ಕss ಅವರು ಅಷ್ಟ ಅಂವಸರಾ ಮಾಡಿದರು" ಎಂಬ ಸ್ಫೋಟಕ ಸಂಗತಿಯನ್ನೂ ಅತ್ಯಂತ ಸಲೀಸಾಗಿ ಹೇಳಿಬಿಟ್ಟಳು. ಹೇಳಿಕೊಳ್ಳ ಲಾಗದ ವಿಚಿತ್ರ ಕಸಿವಿಸಿ, ತಳಮಳ ಮನಸ್ಸನ್ನಾವರಿಸಿತು. ಹೇಗೆ ಪ್ರತಿಕ್ರಿಯಿಸ ಬೇಕೆಂಬುದೇ ಅರ್ಥವಾಗಲಿಲ್ಲ. ಆದರೂ ಯಾವುದೋ ಗಂಡಾಂತರದಿಂದ ಪಾರಾದವನ ಸಮಾಧಾನ. ಮತ್ತವೇ ಕಾಲೇಜು, ಕಂಗ್ರ್ಯಾಟ್ಸ್‌ಗಳು, ಓದು, ಬರಹ, ಉಪನ್ಯಾಸಕನಾಗುವ ಕನಸುಗಳು ತಲೆತುಂಬ ತುಂಬಿಕೊಂಡವು.

೩

ಈ ಮಧ್ಯೆ ಅವಳಿಗೆ ಗಂಡು ಹುಡುಕುತ್ತಿದ್ದಾರೆಂಬ ಸುದ್ದಿ. ಸದ್ಯ ಅವಳ ಮದುವೆಯಾದರೆ ಸಾಕಪ್ಪ ಎಂದು ಮನಸ್ಸು ಒಳಗೊಳಗೇ ಪ್ರಾರ್ಥಿಸುತ್ತಿತ್ತು. ಮುಂದೆ ನನ್ನ ಓದು ಮುಗಿದು ಕೆಲಸ, ಮದುವೆ, ಮಕ್ಕಳು ಅಂತ ಬದುಕಿನ ಸಂಗತಿಗಳ ಸಂತೆಯಲ್ಲಿ, ವಿಚ್ಛೇದನ ಆದ ಘಟನೆ ಮರೆತೇಹೋಯಿತು.

✶ ✶ ✶

ನನ್ನೂರಿನಿಂದ ಸುಮಾರು ೨೦೦ ಕಿ. ಮೀ. ದೂರವಿದ್ದ ವಸತಿ ಶಾಲೆಯೊಂದರಲ್ಲಿ ನಾನು ಕೆಲಸ ಮಾಡುತ್ತಿದ್ದೆ. ಏನಾದರೂ ಹಬ್ಬ ಹರಿದಿನಗಳು, ಮದುವೆಯಂಥ ಬಹುಮುಖ್ಯ ಸಮಾರಂಭಗಳಿದ್ದಾಗ ಮಾತ್ರ ನನ್ನ ಹೆಂಡತಿ ಮಕ್ಕಳೊಂದಿಗೆ ಊರಿಗೆ ಬಂದು ಒಂದೆರಡು ದಿನ ಇದ್ದು ಹೋಗುತ್ತಿದ್ದೆ. ಹೀಗಿರುವಾಗ ನಮ್ಮೂರಿನ ಪಕ್ಕದ ಊರಲ್ಲಿದ್ದ ಅಕ್ಕನಿಂದ ಒಂದು ಸುದ್ದಿ ಬಂತು. ಅಕ್ಕನ ಮಗನ ಮದುವೆ ನಿಶ್ಚಯವಾಗಿತ್ತು. ಅಕ್ಕ ಒಂದೆರಡು ದಿನ ಮುಂಚೆಯೇ ಬರಬೇಕೆಂದು ಫೋನ್ ಮಾಡಿಸಿದ್ದಳು.

ಮದುವೆ ಮನೆ ಅಂದ ಮೇಲೆ ನೆಂಟರಿಷ್ಟರೆಲ್ಲ ಬರುವುದು ಸ್ವಾಭಾವಿಕವಾಗೇ ನಡೆದಿತ್ತು. ಅಲ್ಲಿ ಮದುವೆಯ ಹಿಂದಿನ ದಿನ ಅದೇ ಹೊಸದಾಗಿ ಮದುವೆಯಾದ ಜೋಡಿಯೊಂದು ಬಂತು. ಆ ಹುಡುಗ ನನ್ನನ್ನು ಚಿಕ್ಕಪ್ಪ ಎಂದೂ ನನ್ನ ಶ್ರೀಮತಿಯನ್ನು ಚಿಕ್ಕಮ್ಮ ಎಂದೂ ಸಂಬೋಧಿಸುತ್ತಿದ್ದ. ಅದುವರೆಗೆ ಎಲ್ಲಿಯೂ ನೋಡಿರದ ಆತನ ಕುರಿತು ಕುತೂಹಲ ಉಂಟಾಗಿ ಅಕ್ಕನನ್ನು ಕರೆದು ಕೇಳಿದೆ. ಆಗ ಅವಳು "ಅಂವಾ ರಮೇಶ ಅಲ್ಲೇನ ?" ಎಂದಳು. "ಯಾವ ರಮೇಶಾ ?" ನನ್ನ ಪ್ರಶ್ನೆ. "ಹ್ಞಾ ನಿನಗ ಗೊತ್ತಿಲ್ಲಲ್ಲಾ, ಅದೇ ಆ ಸಾವಂತ್ರಿ ಮಗಾ ರಮೇಶಾ" ಅಂದಳು. "ಸಾವಂತ್ರೀ ? ಯಾವ ಸಾವಂ,, ಂತ್ರಿ,, ??" ನನ್ನ ಪ್ರಶ್ನೆ ಪೂರ್ಣವಾಗುವುದರೊಳಗೇ ಅದೇ ನನ್ನ ಮನಸ್ಸಿನ ಪಾತಾಳದ ಬಾವಿಯಿಂದ ಉತ್ತರವನ್ನೂ ಹೆಕ್ಕಿ ತೆಗೆಯುವ ಪ್ರಯತ್ನವನ್ನು ಮಾಡತೊಡಗಿತ್ತು. ಆಗಲೇ ಅಕ್ಕ "ಹ್ಞಾ ಹ್ಞಾ ಆಕೇ ನಿನ್ನ ಮದಿವಿ ಆಗಿದ್ಲಲ್ಲಾ ಅದೇ ಸಾವಂತ್ರಿ, ಇಂವಾ ಆಕಿ ಮಗಾ" ಎಂದಳು. ಓಹ್ !! ಎದೆಯಲ್ಲಿ ತಣ್ಣನೆಯ ಕತ್ತಿಯನ್ನು ತೂರಿಸಿದ ಅನುಭವ ! ಅವಳೆಲ್ಲಿ ? ಅವಳ ಮದುವೆ ಯಾವಾಗ ಆಯ್ತು ? ಮಕ್ಕಳೆಷ್ಟು ? ಅವಳ ಗಂಡ ಏನು ಮಾಡುತ್ತಾನೆ ? ಎಂಬಿತ್ಯಾದಿ ಪ್ರಶ್ನೆಗಳು ಕ್ಯೂನಲ್ಲಿ ನಿಂತು ಕಾಡತೊಡಗಿದವು. ಮದುವೆ ಗದ್ದಲದಲ್ಲಿ ಈ ಪ್ರಶ್ನೆಗಳನ್ನು ಕೇಳುವುದಾದರೂ ಹೇಗೆ? ಉತ್ತರಿಸಲು ಅಕ್ಕನಿಗೆ ಸಮಯವಾದರೂ ಎಲ್ಲಿ ? ಎಲ್ಲಾ ಮುಗಿದು, ನೆಂಟರಿಷ್ಟರೆಲ್ಲಾ ಹೋದ ಮೇಲೆ ಅಕ್ಕನನ್ನು ಆ ಕುರಿತು ಕೇಳಿದೆ. ಆಗ ಅವಳು ಹೇಳಿದ ಸಂಗತಿಗಳು ನನ್ನನ್ನು ಬೆಚ್ಚಿಬೀಳಿಸಿದವು.

ಸಾವಂತ್ರಿ ಅವರಪ್ಪ ಅವ್ವನಿಗೆ ಒಬ್ಬಳೇ ಮಗಳು. ಹಾಗಾಗಿ ಪ್ರೀತಿ ಸ್ವಲ್ಪ ಅತಿಯಾಯಿತೇನೋ ಬಾಲ್ಯದಿಂದಲೂ ಅವಳು ಹಟಮಾರಿಯಾಗಿಯೇ ಬೆಳೆದಳು. "ನಿನ್ನ ಗಂಡ ಛಲೋ ಓದಾಕ ಹತ್ಯಾನಂತ ನೀನೂ ಓದು" ಎಂದು ಯಾರಾದರೂ ಹೇಳಿದರೆ ಚೂರುಪಾರು ಓದುತ್ತಿದ್ದುದನ್ನೂ ಬಿಟ್ಟುಬಿಡುತ್ತಿದ್ದಳು. "ನಿನ್ನ ಗಂಡ ಒಳ್ಳೆಯವನಂತ ನೀನೂ ಒಳ್ಳೆಯವಳಾಗು" ಅಂದರೆ, "ಇಲ್ಲ ನಾ ಕೆಟ್ಟಾಕಿ ಆಗತೀನಿ" ಎನ್ನುತ್ತಿದ್ದಳು. ಅವಳ ಈ ವರ್ತನೆ ಬಾಲ್ಯದಲ್ಲಂತೂ ಅವಳ ತಂದೆ ತಾಯಿಗೆ, ಅಕ್ಕಪಕ್ಕದವರಿಗೆ ಮಾತಾಡಿಕೊಂಡು ನಗುವ ವಿಷಯಗಳೇ ಆಗಿದ್ದವು. ಆದರೆ ಬರುಬರುತ್ತ ಅವೇ ಬಲಿತು ಅವಳ ಕೌಮಾರ್ಯವನ್ನೂ ಆವರಿಸಿಕೊಂಡಾಗ ಅವಳ ಪೋಷಕರಿಗೆ ಚಿಂತೆಯಾಗತೊಡಗಿತು. ಒಂದು ಸಲ "ಹುಡಗಾ ಸಾಲಿ ಕಲ್ಯಾಕ ಹತ್ಯಾನಂತ, ಹುಡಿಗಿನ್ನೂ ಸಾಲಿಗಿ ಕಳಸರಿ" ಎಂದು ಯಾರೋ ಬುದ್ಧಿವಾದ ಹೇಳಿದರು. ಆಗ ಹಟಕ್ಕೆ ಬಿದ್ದು ಆಕೆ ಶಾಲೆಗೆ ಹೋಗುವುದನ್ನೇ ನಿಲ್ಲಿಸಿಬಿಟ್ಟಳು. ಅವರ ತಂದೆ ತಾಯಿ ಅನಕ್ಷರಸ್ಥರು. ಹಾಗಾಗಿ ಅವರೂ ಅದನ್ನು ಅಷ್ಟು ಗಂಭೀರವಾಗಿ ಪರಿಗಣಿಸಲಿಲ್ಲ. "ನೀ ಮದುವಿಯಾಗಿರೂ ಹುಡಿಗಿ ಹಿಂಗ ಗಂಡುಬೀರಿ ಹಂಗ ತಿರಿಗ್ಯಾಡಬ್ಯಾಡಾ" ಎಂದು ಒಮ್ಮೆ ಅವಳ ತಾಯಿ ಅಂದಿದ್ದಕ್ಕೆ "ನಾ ಹೀಂಗss ಇರಾಕಿ ನೋಡಬೇ" ಅಂದು ಗಂಡುಬೀರಿಯಂತೆಯೇ ತಿರುಗಾಡಿದಳು. ಅವರಿವರೊಡನೆ ಜಗಳವಾಡಿ ಅವರಿವರ ಹಿಂದೆ ಹೋಗಿ

ಏನೇನೋ ಎಡವಟ್ಟುಗಳನ್ನು ಮಾಡಿಕೊಳ್ಳುತ್ತ ಕೊನೆಗೊಂದು ದಿನ ಬಸುರಿಯೂ ಆಗಿಬಿಟ್ಟಳು. ಆಗಲೇ ಅವಳ ತಂದೆ ತಾಯಿಗೆ ಎಚ್ಚರವಾದದ್ದು. ಆಗಲೇ ಹುಡುಗಿಯನ್ನು ಗಂಡನ ಮನೆಗೆ ಅಟ್ಟಿ ಕೈತೊಳೆದುಕೊಳ್ಳಬೇಕೆಂಬ ವಿಚಾರವೂ ಬಂದಿದ್ದು. ಆದರೆ ಅವಳ ಆ ಎಲ್ಲ ಸಂಗತಿಗಳು ಗೊತ್ತಿದ್ದ ಕೆಲವರು ಈ ರೀತಿ ಪೂರ್ವ ನಿಶ್ಚಿತ ವಿಚ್ಛೇದನದ ನಾಟಕ ಆಡಿ ಅವಳನ್ನು ನನ್ನಿಂದ ದೂರ ಮಾಡಿದ್ದರು. ಮುಂದೆ ಬಸುರನ್ನೇನು ಮಾಡುವುದೆಂಬ ಆತಂಕದಲ್ಲಿದ್ದಾಗ ಆ ಹುಡುಗನಿಗೇ ದುಂಬಾಲು ಬಿದ್ದರಂತೆ. ಆದರೆ ಆತ ಗೌಡರ ಮಗ. ತನಗೂ ಇದಕ್ಕೂ ಸಂಬಂಧವೇ ಇಲ್ಲ, ತನಗೇನೂ ಗೊತ್ತೇಯಿಲ್ಲ ಅಂದನಂತೆ. ಪಾಪ ಪೊಲೀಸು, ಕಂಪ್ಲೇಂಟು ಎಂಬುದನ್ನು ಅವರಿಂದ ಕಲ್ಪಿಸಿಕೊಳ್ಳಲೂ ಸಾಧ್ಯವಿರಲಿಲ್ಲ. ಹೊಟ್ಟೆಯಲ್ಲಿರುವ ಮಗುವನ್ನಾದರೂ ತೆಗೆಸಿಬಿಡೋಣವೆಂದು ಹೋದರೆ ವೈದ್ಯರು ಈಗ ಹಾಗೇನಾದರೂ ಮಾಡಿದರೆ ತಾಯಿಯ ಜೀವಕ್ಕೇ ಅಪಾಯ ಎಂದು ಹೇಳಿದರು. ಹಟಕ್ಕೆ ಬಿದ್ದ ಆಕೆ ಜನರ ಚುಚ್ಚುಮಾತುಗಳಿಂದ ಚುಚ್ಚಿಸಿಕೊಂಡೂ ಮಗುವನ್ನು ಹೆತ್ತಳು. ಆ ಮಗುವೇ 'ರಮೇಶ'. ಕೂಲಿನಾಲಿ ಮಾಡುತ್ತಿದ್ದ ಅವಳ ಅಪ್ಪ ಕುಡಿತಕ್ಕೆ ಗಂಟುಬಿದ್ದು, ಕುಡಿದು ಕುಡಿದು ಸಣ್ಣ ಕರುಳಿಗೆ ಹುಣ್ಣಾಗಿ ಒಂದು ದಿನ ಸತ್ತೇಹೋದ. ಹೊಟ್ಟೆ ಹೊರೆಯುವುದು ಹೇಗೆ ? ಎಂಬ ಚಿಂತೆ ಬೃಹದಾಕಾರವಾಗಿ ಬೆಳೆಯತೊಡಗಿತು. ಆಗ ಯಾರೋ ಬಿಟ್ಟಿ ಸಲಹೆ ಕೊಟ್ಟರು "ಮುತ್ತು ಕಟ್ಟಸರಿ" ಎಂದು. ಮುತ್ತು ಕಟ್ಟಿಸುವುದೆಂದರೆ ಎಲ್ಲಮ್ಮ ದೇವರಿಗೆ ಬಿಡುವುದು ಎಂದರ್ಥ. ಅಂದರೆ ದೇವದಾಸಿಯನ್ನಾಗಿಸುವುದು. ಆಗ ಅವಳು ಜೋಗಾಡಿಕೊಂಡು ಹೊಟ್ಟೆ ಹೊರೆಯಬಹುದು. ಆಕೆಯನ್ನು ಯಾರು ಬೇಕಾದರೂ ಇಟ್ಟುಕೊಳ್ಳಲೂಬಹುದು. ಆದರೆ ಈ ಪದ್ಧತಿಯ ವಿರುದ್ಧ ಸರಕಾರ ಅದಾಗಲೇ ಹಲವಾರು ಕಾಯಿದೆ ಕಾನೂನುಗಳನ್ನು ಮಾಡಿತ್ತು. ಸಂಘ ಸಂಸ್ಥೆಗಳು, ಮಹಿಳಾ ಸಂಘಟನೆಗಳು ಅಂಥ ಘಟನೆಗಳನ್ನು ಕೂಡಲೇ ಸರಕಾರದ ಗಮನಕ್ಕೆ ತರುತ್ತಿದ್ದವು ಕೂಡ.

ಒಂದು ದಿನ ಇದ್ದಕ್ಕಿದ್ದ ಹಾಗೆ ಆ ಕಾನೂನು ಕಟ್ಟಳೆಗಳ ನಡುವೆಯೂ ಗುಡ್ಡಕ್ಕೆ ಹೋಗಿ ಕದ್ದು ಮುತ್ತು ಕಟ್ಟಿಸಿಕೊಂಡು ಬಂದರು. ಆಕೆ ಜೋಗಿತಿಯಾಗಿ ಜೋಗಾಡಿದಳು. ಗೋಕಾವಿಗೆ, ಬೆಳಗಾವಿಗೆ, ಗೋವಾಕ್ಕೆ ಹೋಗಿಬಂದಳು. ಆದರೆ ಪರಿಸ್ಥಿತಿಯಲ್ಲಿ ಅಂಥ ಬದಲಾವಣೆಗಳೇನೂ ಆಗಲಿಲ್ಲ. ನಂತರ ಎರಡು ವರ್ಷದ ತನ್ನ ಮಗುವನ್ನು ತಾಯಿಯ ಹತ್ತಿರ ಬಿಟ್ಟು ಮುಂಬೈಗೆ ಹೋದಳು. ಬರುವಾಗ ಪೆಂಡಿ ಪೆಂಡಿ ದುಡ್ಡು ತರತೊಡಗಿದಳು. ಅವಳ ತಾಯಿಗೆ ಖುಷಿಯೋ ಖುಷಿ. ಹಸಿವಿನ ಮುಂದೆ ಮಾನಾಪಮಾನ, ಘನತೆ ಗೌರವಗಳ ಸಂಗತಿ ತೀರಾ ಗೌಣವಾಗಿ ಸದ್ಯ ಹೊಟ್ಟೆ ತುಂಬಿದರೆ ಸಾಕು ಎನ್ನುವ ಸ್ಥಿತಿಯಲ್ಲಿದ್ದ ಅವಳಿಗೆ ಇವಳು ತಂದ ಗರಿ ಗರಿ ನೋಟುಗಳು ಬದುಕಲು ಧೈರ್ಯ ತಂದಿತ್ತವು. ಊರಿಗೆ ಬಂದಾಗಲೆಲ್ಲ ಮೈತುಂಬಾ ಹೊರೆಗಟ್ಟಲೇ ಒಡವೆ ಹಾಕಿಕೊಂಡು ದೊಡ್ಡ ದೊಡ್ಡ ಶ್ರೀಮಂತ ಹೆಂಗಸರೂ ಉಡಲು ಸಾಧ್ಯವಿಲ್ಲದ ಕಿಮ್ಮತ್ತಿನ ಸೀರೆಗಳನ್ನುಟ್ಟು ಮೆರೆದಾಡಿ ಒಂದು ರೀತಿ ಸೇಡು ತೀರಿಸಿಕೊಂಡಳು ಸಾವಂತ್ರಿ. ತನ್ನನ್ನು ಹಾಳುಮಾಡಿದ ಗಂಡಸರನ್ನು ಪ್ರಕಟವಾಗಿಯೇ ಬಯ್ಯುತ್ತಿದ್ದಳು. ತಮ್ಮ ಸತಿಯರೆದುರು ತಮ್ಮ ಹೂರಣ ಬಯಲಾದೀತೆಂಬ ಭಯದಿಂದ ಅವರು ಇವಳನ್ನು ಕಂಡರೆ ಅಷ್ಟು ದೂರ ಹಾಯ್ದು ಹೋಗುತ್ತಿದ್ದರು. ಇಲ್ಲವೇ ಮುಖ ತಪ್ಪಿಸುತ್ತಿದ್ದರು. ದಿನವೆಲ್ಲಾ ಅಟ್ಟಹಾಸದಿಂದ ಮೆರೆಯುತ್ತಿದ್ದ ಸಾವಂತ್ರಿ ರಾತ್ರಿ ಹೊತ್ತು ಮಾತ್ರ ಸಾವಂತ್ರಿ ಯಾಕೋ ಕುಡಿದು ಒಬ್ಬಳೇ ಅಳುತ್ತಿದ್ದಳು, ಬಿಕ್ಕಿ ಬಿಕ್ಕಿ.

✶ ✶ ✶

ಅಪ್ಪ ತೀರಿಕೊಂಡು ಮೂರು ವರ್ಷವಾಗಿತ್ತು. ಪ್ರತಿವರುಷದಂತೆ ಈ ವರ್ಷವೂ ಅವನ ಪುಣ್ಯ ತಿಥಿಗೆಂದು ಮೊನ್ನೆ ಊರಿಗೆ ಹೋದಾಗ ಅಕ್ಕ ಹತ್ತಿರ ಬಂದು ಕೂತು ಯಾವುದೋ ರಹಸ್ಯವೊಂದನ್ನು ಹೇಳುವವಳಂತೆ 'ತಮ್ಮಾ' ಎಂದಳು. ನಾನು ಕುತೂಹಲವಾಗಿ 'ಏನಕ್ಕಾ'? ಎಂದೆ. ಅವಳು 'ಆಕಿ ಸತ್ತಳಲ್ಲಾ' ಎಂದಳು. 'ಯಾರು ?' ಎಂದೆ. 'ಆಕಿನss ಸಾವಂತ್ರಿ' ಎಂದಾಗ "ಹ್ಞಾ !! ಹ್ಯಾಂಗ ?? ಏನಾಗಿತ್ತು ?" ಎಂದೆ. 'ಆಕಿಗೆ ಯಾವುದೋ ದೊಡ್ಡ ರೋಗ ಆಗಿತ್ತಂತ ಅದೇನೋ ಏಡ್ಸಂತ' ಎಂದಳು. ಹೇಗೆ ಪ್ರತಿಕ್ರಿಯಿಸಬೇಕೋ ತಿಳಿಯಲಿಲ್ಲ... ತಕ್ಷಣ ನನ್ನ ದೃಷ್ಟಿ ಗೋಡೆಯ ಮೇಲೆ ಹೋಯಿತು. ಅಲ್ಲಿ ಅಜ್ಜಿಯ ಮತ್ತು ಅಪ್ಪನ ಫೋಟೋಗಳು ಮಾಲೆ ಹಾಕಿಸಿಕೊಂಡು ತೂಗಾಡುತ್ತಿದ್ದವು. ಯಾಕೋ ಅಪ್ಪ ವಿಷಾದದಿಂದ ಮುಖ ತಗ್ಗಿಸಿ ಕೂತಿದ್ದಂತೆ ಭಾಸವಾಯಿತು. ಅಜ್ಜಿಯ ಮುಖದಲ್ಲಿ ಎಂದಿನ ಸಿಟ್ಟು ರಾರಾಜಿಸುತ್ತಿತ್ತು. ಅಜ್ಜ (ಅವ್ವನ ತಂದೆಯ)ನ ಫೋಟೋ ಮಾಯವಾಗಿತ್ತು. ಯಾರೋ ಮಾಡಿದ ತಪ್ಪಿಗೆ ಒಂದು ಜೀವ ಹೀಗೆ ಗೊತ್ತು ಗುರಿಯಿಲ್ಲದೆ ಅಲೆದಲೆದು ಕಳೆದುಹೋಯಿತಲ್ಲಾ ಎಂದು ಜೀವ ಮರುಗಿತು. ಹೇಗಿದ್ದಳು ಆಕೆ ?? ಮುಖವನ್ನು ನೆನಪಿಸಿಕೊಳ್ಳಲು ಯತ್ನಿಸಿದೆ, ಮಸಕು ಮಸಕಾಗಿ ಕಂಡರೂ ಪೂರ್ಣ ಚಿತ್ರ ಮೂಡಲಿಲ್ಲ.

**ಮಾರುತಿ ದಾಸಣ್ಣವರ**
ಜವಾಹರ ನವೋದಯ ವಿದ್ಯಾಲಯ, ತೇವಾ (ಮಂಜಾನ್ಪುರ್)
ಕೌಶಾಂಬಿ ಜಿಲ್ಲೆ, ಉತ್ತರಪ್ರದೇಶ, ಪಿನ್ – ೨೧೨ ೨೦೮

# ದಾಳಿಂಬೆ ಹಣ್ಣಿನ ಔಷಧೀಯ ಮೌಲ್ಯಗಳು



೧. ದಾಳಿಂಬೆ ಹಣ್ಣಿನ ಸಿಪ್ಪೆಯನ್ನು ಒಣಗಿಸಿ, ಪುಡಿಮಾಡಿ ಸ್ವಲ್ಪ ಮೆಣಸಿನಪುಡಿ ಹಾಗೂ ಉಪ್ಪನ್ನು ಅದರೊಂದಿಗೆ ಮಿಶ್ರಮಾಡಿಟ್ಟುಕೊಂಡರೆ ಅದೊಂದು ಉತ್ತಮ ದಂತಮಂಜನವಾಗುತ್ತದೆ. ಅದರ ಲೇಪನದಿಂದಾಗಿ ವಸಡುಗಳು ಸದೃಢಗೊಳ್ಳುತ್ತವೆಯಲ್ಲದೆ, ವಸಡಿನಿಂದ ರಕ್ತಸ್ರಾವವಾಗುವುದು ನಿಲ್ಲುತ್ತದೆ. ಹಲ್ಲುಗಳನ್ನು ಸ್ವಚ್ಛವಾಗಿಡುವುದಲ್ಲದೆ ದೀರ್ಘಕಾಲದವರೆಗೆ ಹಲ್ಲುಗಳು ಬೀಳದಂತೆ ಗಟ್ಟಿಗೊಳಿಸುತ್ತದೆ.

೨. ಜ್ವರದಿಂದ ಬಳಲುವವರಿಗೆ ಆಗುವ ಬಾಯಾರಿಕೆಯನ್ನು ಹೋಗಲಾಡಿಸಲು ದಾಳಿಂಬೆ ರಸಕ್ಕೆ ಸ್ವಲ್ಪ ಅರಿಶಿನವನ್ನು ಸೇರಿಸಿ ಕೊಡಬೇಕು.

೩. ಪಿತ್ತನಾಶಕ್ಕೆ ಸಿಹಿ ದಾಳಿಂಬೆ ಹಣ್ಣಿನ ಜ್ಯೂಸ್ ಸೇವನೆ ಹಿತಕಾರಿ. ಇದರ ಬೀಜಗಳನ್ನು ಅಗಿದು ರಸ ಸೇವಿಸಿ ಉಳಿದಿದ್ದನ್ನು ಉಗುಳುವುದರಿಂದಲೂ ಪಿತ್ತ ನಾಶವಾಗುತ್ತದೆ.

೪. ದಾಳಿಂಬೆ ಬೀಜಗಳನ್ನು ಅರೆದು ತಣ್ಣೀರಿನಲ್ಲಿ ಸೇವಿಸಿದರೆ ಆಮಶಂಕೆ ಭೇದಿ ನಿಲ್ಲುವುದು.

೫. ದಾಳಿಂಬೆ ಗಿಡದ ಬೇರು ಹಾಗೂ ಕಾಂಡದ ಭಾಗಗಳು ಕರುಳಿನ ಪರಾವಲಂಬಿ ಹುಳುಗಳನ್ನು ನಾಶಪಡಿಸುತ್ತದೆ.

೬. ಒಂದು ಚಮಚದಷ್ಟು ದಾಳಿಂಬೆಯ ಬೀಜವನ್ನು ನುಣ್ಣಗೆ ಅರೆದು, ಪೇಸ್ಟ್‌ನಂತೆ ಮಾಡಿಕೊಂಡು, ಒಂದು ಲೋಟದಷ್ಟು ಹುರುಳಿಕಾಳಿನ ಸೂಪ್ ಜೊತೆಗೆ ಸೇರಿಸಿ ರೋಗಿಗೆ ನೀಡಬೇಕು. ಹೀಗೆ ಮಾಡುವುದರಿಂದ ಮೂತ್ರಕೋಶದಲ್ಲಿನ ಕಲ್ಲುಗಳು ಕರಗುತ್ತವೆ.

೭. ಒಂದು ಚಮಚ ದಾಳಿಂಬೆ ಹಾಗೂ ಒಂದು ಚಮಚ ಜೇನುತುಪ್ಪದೊಂದಿಗೆ ಕ್ರಮವಾಗಿ ಸೇವಿಸುವುದರಿಂದ ನೇತ್ರ ಸಂಬಂಧಿ ದೋಷಗಳು ನಿವಾರಣೆಗೊಳ್ಳುತ್ತವೆ ಹಾಗೂ ಮಾನಸಿಕ ಒತ್ತಡದಿಂದಾಗುವ ತಲೆನೋವು ದೂರವಾಗುತ್ತದೆ.

**ರಾಮಪ್ರಸಾದ ಬಿ.**
ನಂ. ೩೬೯, ೨೫ನೇ ವಾರ್ಡ್, ಕಂಚಾಗರ್ ಪೇಟೆ
ವಾದಕರಾಯ ದೇವಸ್ಥಾನ, ಹೊಸಪೇಟೆ – ೫೮೩ ೨೦೧, ಬಳ್ಳಾರಿ ಜಿಲ್ಲೆ



# ಗ್ರಹಗಳ ಓಟ

**ಸಂ**ಜೆಯ ಆಕಾಶದಲ್ಲಿ ಹಾಜರಾಗಿರುವ ಐದೂ ಗ್ರಹಗಳು ಈ ತಿಂಗಳಲ್ಲಿ ಒಳ್ಳೆಯ ನೋಟಗಳನ್ನು ಒದಗಿಸಲಿವೆ. ಅವುಗಳಲ್ಲಿಯೇ ಪರಸ್ಪರ ಸಮಾಗಮ ಮತ್ತೆ ವಿದಾಯ ನಡೆಯುವುದನ್ನು ತಿಂಗಳುದ್ದಕ್ಕೂ ಅವಕಾಶ ಸಿಕ್ಕಾಗಲೆಲ್ಲಾ ಗಮನಿಸುತ್ತಿರಬಹುದು. ಪಶ್ಚಿಮದ ಅಂಚಿನಲ್ಲಿ ಸಂಜೆ ಬುಧ, ಶುಕ್ರ ಮತ್ತು ಗುರು ಕಾಣುತ್ತವೆ. ಬುಧ ಬಹಳ ವೇಗವಾಗಿ ತನ್ನ ಸ್ಥಾನ ಬದಲಿಸುತ್ತದೆ. ಶುಕ್ರ ಅದಕ್ಕಿಂತ ಸ್ವಲ್ಪ ನಿಧಾನವಾಗಿ ಚಲಿಸುತ್ತದೆ. ಆದರೆ ಗುರುಗ್ರಹದ ಚಲನೆ ಗೋಚರವಾಗದಷ್ಟು ನಿಧಾನ. ಇದನ್ನು ಈ ತಿಂಗಳು ಕಂಡುಹಿಡಿಯಬಹುದು. ಇವೆರಡೂ ಗುರು ಗ್ರಹವನ್ನು ಸಮೀಪಿಸುತ್ತವೆ. ೧೬ರಂದು ಬುಧದ ಗರಿಷ್ಠ ಕೋನೋನ್ನತಿ. ಆ ಮುಂದೆ ಅವು ಪರಸ್ಪರ ದೂರ ಸರಿಯುವಂತೆ ಕಾಣುತ್ತವೆ. ಶುಕ್ರ ಗುರುವಿನತ್ತ ಚಲನೆಯನ್ನು ಮುಂದುವರಿಸಿ ೨೭ರಂದು ಒಂದು ಡಿಗ್ರಿಗೂ ಕಡಿಮೆ ಅಂತರದಲ್ಲಿ ಅದನ್ನು ಹಾದು ಹೋಗುತ್ತದೆ. ದೂರದರ್ಶಕ ಇರುವವರಿಗೆ ಇದು ಛಾಯಾ ಗ್ರಹಣಕ್ಕೆ ಮತ್ತು ವೀಕ್ಷಣೆಗೆ ಅಪೂರ್ವ ಅವಕಾಶ.

ನೆತ್ತಿಯ ಮೇಲೆ ಕಾಣುವ ಮಂಗಳ ಮತ್ತು ಶನಿ ಕೂಡ ಹೀಗೆ ಆಟದಲ್ಲಿ ತೊಡಗಿವೆ. ಅಲ್ಲಿ ಅವುಗಳಲ್ಲಿ ಯಾವುದು ವೇಗವಾಗಿ ಚಲಿಸುತ್ತಿದೆ ಎಂದು ತಿಳಿಯಲು ಜ್ಯೇಷ್ಠಾ ನಕ್ಷತ್ರವೇ ಸಹಾಯ ಮಾಡುತ್ತದೆ. ದಿನೇ ದಿನೇ ಮಂಗಳ ಮತ್ತು ಜ್ಯೇಷ್ಠಾದ ನಡುವಿನ ಅಂತರ ಕಡಿಮೆಯಾಗುತ್ತಾ ಬಂದು ೨೪ರಂದು ಕನಿಷ್ಠವಾಗುತ್ತದೆ. ಆ ರಾತ್ರಿ ಜ್ಯೇಷ್ಠಾ, ಶನಿ ಮತ್ತು ಮಂಗಳ ಒಂದೇ ಗೆರೆಯ ಮೇಲೆ ಇದ್ದ ಹಾಗೆ ಕಾಣುತ್ತವೆ. ಮರುರಾತ್ರಿ ಮಂಗಳ ಪುನಃ ದೂರ ಸರಿಯುತ್ತದೆ. ಶನಿಯ ಚಲನೆ ಈ ಅವಧಿಯಲ್ಲಿ ಬರಿಗಣ್ಣಿಗೆ ಗೋಚರಿಸದಷ್ಟು ನಿಧಾನ.

ರಾತ್ರಿ ಆಕಾಶದ ಮಾರ್ಗದರ್ಶಿ ಚಂದ್ರ, ಈ ಎರಡೂ ಗುಂಪುಗಳನ್ನು ಹಾದು ಹೋಗುವ ಸಂದರ್ಭಗಳು ಆಕರ್ಷಣೀಯವಾಗಿರುತ್ತವೆ. ೪–೫–೬ ಈ ಅವಧಿಯಲ್ಲಿ ರೇಖಾ ಚಂದ್ರ ಪಶ್ಚಿಮದ ಅಂಚಿನಲ್ಲಿ ಕಾಣುವಾಗ ಅದರೊಡನೆ ಮೂರೂ ಗ್ರಹಗಳನ್ನು ಗುರುತಿಸಬಹುದು. ಆ ಮುಂದೆ ಅಲ್ಲಿ ಚಂದ್ರನಿಲ್ಲದಿದ್ದಾಗಲೂ ಅವುಗಳ ಚಲನೆಯನ್ನು ಕಾಣಬಹುದು. ೪ರಂದು ಚಂದ್ರ ಬುಧಗ್ರಹವನ್ನು ಮರೆ ಮಾಡುವ ಆಚ್ಛಾದನೆ ನಡೆಯುತ್ತದೆ. ೬ರಂದು ಗುರುಗ್ರಹದ ಆಚ್ಛಾದನೆ ಇದೆ. ಆದರೆ ಆ ಘಟನೆಗಳ ಸಮಯ ನಮ್ಮ ದೇಶಕ್ಕೆ ಅನುಕೂಲಕರವಾಗಿಲ್ಲ. ೧೧–೧೨ರ ಅವಧಿಯಲ್ಲಿ ಅರ್ಧ ಚಂದ್ರ ನೆತ್ತಿಯ ಮೇಲೆ ಮಂಗಳ, ಶನಿ ಗ್ರಹಗಳ ಗುಂಪಿಗೆ ಸೇರುತ್ತದೆ. ಈ ಘಟನೆಯೂ ಛಾಯಾಗ್ರಹಣಕ್ಕೆ ಸೂಕ್ತವಾಗಿದೆ. ೧೯ರಂದು ಕ್ಷೀಣವಾದ ನೆಪ್ಚೂನ್ ಗ್ರಹವನ್ನೂ ಚಂದ್ರ ಮರೆ ಮಾಡುತ್ತದೆ. ಆದರೆ ಹುಣ್ಣಿಮೆಯ ಪ್ರಕಾಶದಲ್ಲಿ ಆ ಕ್ಷೀಣ ಗ್ರಹವನ್ನು ಕಂಡುಹಿಡಿಯುವುದು ಕಷ್ಟ.



೪ರ ಸಂಜೆ ಶುಕ್ರ – ಗುರು – ಬುಧ ಇವುಗಳೊಡನೆ ಚಂದ್ರ

ಇದಲ್ಲದೆ ಚಂದ್ರ ಸೂರ್ಯನನ್ನೇ ಮರೆಮಾಡುವ ಕಂಕಣ ಗ್ರಹಣವು ಸೆಪ್ಟೆಂಬರ್ ೧ರಂದು ನಡೆಯಲಿದೆ. ಆಫ್ರಿಕಾ ಮತ್ತು ಹಿಂದೂ ಮಹಾಸಾಗರಗಳ ಮೂಲಕ ನೆರಳು ಹಾದುಹೋಗುತ್ತದೆ. ಅದು ಭಾರತಕ್ಕೆ ಗೋಚರಿಸುವುದಿಲ್ಲ. ಅದರ ಹಿಂದಿನ ಮತ್ತು ಮುಂದಿನ ಹುಣ್ಣಿಮೆಗಳಲ್ಲಿ ಚಂದ್ರಗ್ರಹಣದ ಸಾಧ್ಯತೆ ಇದೆ. ಆಗಸ್ಟ್ ೧೮ರಂದು ಚಂದ್ರ ಭೂಮಿಯ ನೆರಳಿನ ಮಂದಭಾಗವನ್ನು , ಅಂದರೆ ಪಾರ್ಶ್ವ ಛಾಯೆಯನ್ನು ಮಾತ್ರ ಹಾದುಹೋಗುತ್ತದೆ. ಇದರಿಂದ ಬೆಳಕಿನಲ್ಲಿ ಹೆಚ್ಚೇನೂ ವ್ಯತ್ಯಾಸವಾಗುವುದಿಲ್ಲ. ಆದ್ದರಿಂದ ಭೂಮಿಯ ನೆರಳಲ್ಲಿ ಚಂದ್ರ ಇದೆ ಎಂಬುದು ತಿಳಿಯುವುದಿಲ್ಲ. (ಸೆಪ್ಟೆಂಬರ್ ೧೬ರಂದೂ ಇದೇ ರೀತಿಯ ಪಾರ್ಶ್ವ ಛಾಯಾಗ್ರಹಣವಿದೆ).

ಈ ತಿಂಗಳಲ್ಲಿ ೧೦ರಂದು ಸಂಜೆ ಮತ್ತು ೨೨ರ ಮುಂಜಾವು ಅರ್ಧ ಚಂದ್ರನ ಛಾಯಾಚಿತ್ರ ತೆಗೆದು ಹೋಲಿಸಿ; ಅದೇ ಕ್ಯಾಮೆರಾ ಬಳಸಿ ತೆಗೆದರೆ ಗಾತ್ರದಲ್ಲಿ ಸಣ್ಣ ವ್ಯತ್ಯಾಸ ಕಾಣುತ್ತದೆ. ಕನಿಷ್ಠ ಮತ್ತು ಗರಿಷ್ಠ ದೂರಗಳ ಪರಿಣಾಮ ಇದು.

ಆಗಸ್ಟ್ ತಿಂಗಳ ೧೨ರಂದು ಪರ್ಸಿಯೈಡ್ ಉಲ್ಕಾವೃಷ್ಟಿ ಗರಿಷ್ಠ ಅಂದರೆ ಗಂಟೆಗೆ ೫೦ರಷ್ಟು ಕಾಣುವ ಸಾಧ್ಯತೆ ಇದೆ. ಈ ಉಲ್ಕೆಗಳು ಪರ್ಸಿಯುಸ್ (ಪಾರ್ಥ) ಪುಂಜದಿಂದ ಹೊರಟಂತೆ ಕಾಣುವುದರಿಂದ ಈ ಹೆಸರಿದೆ.

**ಖಗೋಳ ದಿನಚರಿ**

೩ ಅಮಾವಾಸ್ಯೆ ೦೨:೧೫ಕ್ಕೆ
೪ ಶುಕ್ರ – ಚಂದ್ರ – ಬುಧ ಇವುಗಳ ಪುಟ್ಟ ಗುಂಪು *
೬ ಚಂದ್ರ – ಗುರು ಜೋಡಿ *
೧೦ ಭೂಮಿ – ಚಂದ್ರ ಇವೆರಡರ ನಡುವೆ ಗರಿಷ್ಠ ದೂರ
ಚಾಂದ್ರಮಾಸದ ಮೊದಲ ಪಾದ – ಚಂದ್ರಾಸ್ತ ನಡು ರಾತ್ರಿಗೆ
೧೧ ಮಂಗಳ–ಚಂದ್ರ ಇವೆರಡರ ಜೋಡಿ *
೧೨ ಶನಿ – ಚಂದ್ರ ಜೋಡಿ; ಪರ್ಸಿಯೈಡ್ ಉಲ್ಕಾವೃಷ್ಟಿ *
೧೬ ಬುಧ ಗ್ರಹದ ಗರಿಷ್ಠ ಕೋನೋನ್ನತಿ *
೧೮ ಹುಣ್ಣಿಮೆ ೧೪:೫೭ಕ್ಕೆ; ಪಾರ್ಶ್ವ ಛಾಯಾಗ್ರಹಣ (ಭಾರತಕ್ಕೆ ಕಾಣುವುದಿಲ್ಲ)
೨೨ ಭೂಮಿ – ಚಂದ್ರ ನಡುವೆ ಕನಿಷ್ಠ ದೂರ
೨೪ ಮಂಗಳ – ಜ್ಯೇಷ್ಠಾ ಜೋಡಿ *
೨೫ ಚಾಂದ್ರಮಾಸದ ಕೊನೆಯ ಪಾದ
ಚಂದ್ರೋದಯ ನಡುರಾತ್ರಿಗೆ
೨೭ ಶುಕ್ರ – ಗುರು ನಡುವೆ ಕನಿಷ್ಠ ಕೋನ (ದುರ್ಬೀನುಗಳಲ್ಲಿ ಕಾಣುತ್ತದೆ) *
ಸೆಪ್ಟೆಂಬರ್ ೧ ಸೂರ್ಯಗ್ರಹಣ – ಭಾರತಕ್ಕೆ ಕಾಣುವುದಿಲ್ಲ

(* ಛಾಯಾಗ್ರಹಣಕ್ಕೆ ಸದವಕಾಶ)

**ಡಾ॥ ಬಿ. ಎಸ್. ಶೈಲಜಾ**
ಜವಾಹರ್‌ಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ಶೈಲಿ ಶಾಸ್ತ್ರ: ಒಂದು ವಿವರಣಾತ್ಮಕ ಟಿಪ್ಪಣಿ

**ಶೈ**ಲಿ – ಇದು ಮೂಲತಃ ಸಾಹಿತ್ಯೇತರ ಪರಿಕಲ್ಪನೆ. ಇದನ್ನು ಇಂದು ಮತ್ತು ಎಂದಿನಿಂದಲೂ ಜೀವನದ ಎಲ್ಲ ಕ್ಷೇತ್ರಗಳಲ್ಲಿ, ಜ್ಞಾನಶಾಖೆಗಳಲ್ಲಿ, ಪ್ರತೀ ಮನುಷ್ಯರಲ್ಲಿ, ಪ್ರತೀ ವೃತ್ತಿಯಲ್ಲಿ ಗುರುತಿಸಬಹುದು. ಇದನ್ನು ಅನಂತರದಲ್ಲಿ ಸಾಹಿತ್ಯ ಮೀಮಾಂಸೆ (ಕಾವ್ಯಮೀಮಾಂಸೆ)ಯು ಪ್ರತ್ಯೇಕವಾಗಿ ಚರ್ಚಿಸಿದೆ. ಇದು ಮೊದಲಿಗೆ ಪಾಶ್ಚಾತ್ಯ ಕಾವ್ಯಮೀಮಾಂಸೆಯಲ್ಲಿ ಒಂದು ಸಾಹಿತ್ಯಕ ಪರಿಕಲ್ಪನೆಯಾಗಿ, ಪರಿಭಾಷೆಯಾಗಿ ಮೂಡಿಬಂದಿತು. ಇದೇ ಕಾಲದಲ್ಲಿ ಭಾರತೀಯ ಕಾವ್ಯಮೀಮಾಂಸೆಯಲ್ಲಿ ಇದಕ್ಕೆ ಸಂವಾದಿಯಾಗಿ 'ರೀತಿ' ಎಂಬ ಪರಿಕಲ್ಪನೆಯಿತ್ತು. ಆದರೂ ಮೂಲತಃ ಶೈಲಿ ಮತ್ತು ರೀತಿ ಎರಡೂ ಪರಸ್ಪರ ಭಿನ್ನವೇ; ಎರಡರ ನಡುವೆ ಅನೇಕ ಸಾಮ್ಯಾಂಶಗಳು ಇದ್ದಾಗಲೂ ಇಂತಹ ಎರಡೂ ಪರಿಕಲ್ಪನೆಗಳು ಇಂದು ಭಾರತೀಯ ಕಾವ್ಯ ಮೀಮಾಂಸೆಯಲ್ಲಿ ಚರ್ಚೆಯಲ್ಲಿವೆ.

'ರೀತಿ'ಯನ್ನು ಹೀಗೆ ಗುರುತಿಸಬಹುದು: ಮಾತಿಗೊಂದು ರೀತಿ, ಬರಹಕ್ಕೊಂದು ರೀತಿ; ಅಂತೆಯೇ ಗದ್ಯಕ್ಕೊಂದು ರೀತಿ, ಪದ್ಯಕ್ಕೊಂದು ರೀತಿ... ಹೀಗೆ ಇದನ್ನು ಸ್ಥೂಲವಾಗಿ ಗುರುತಿಸುತ್ತಾ ಹೋಗಬಹುದು. ಇದನ್ನು ಶೈಲಿ ಎಂದು ಸಹ ಸ್ಥೂಲವಾಗಿ ಗುರುತಿಸಲಾಗಿದೆ. ಆಳದಲ್ಲಿ ಪದ್ಯಕ್ಕೆ ಒಂದು ರೀತಿ; ಅದರಲ್ಲಿಯೂ ಒಂದೊಂದು ಛಂದೋಲಯಕ್ಕೆ ಒಂದು ರೀತಿ ಎಂಬುದನ್ನು ಗುರುತಿಸಬಹುದಾದರೂ ಆ ಒಂದೊಂದು ನಿರ್ದಿಷ್ಟ ಛಂದೋಲಯದಲ್ಲಿ ಬರುವ ಒಬ್ಬೊಬ್ಬ ಮುಖ್ಯ ಕವಿಯೂ ಒಂದೊಂದು ಪ್ರತ್ಯೇಕ ಶೈಲಿಯನ್ನು ಹೊಂದಿರುವುದನ್ನು ಗುರುತಿಸಬಹುದು. ಅದು ಪಂಪನ ಶೈಲಿ, ರನ್ನನ ಶೈಲಿ, ಬಸವಣ್ಣನ ಶೈಲಿ, ಅಲ್ಲಮನ ಶೈಲಿ, ಹರಿಹರನ ಶೈಲಿ, ಕುಮಾರವ್ಯಾಸನ ಶೈಲಿ, ಸರ್ವಜ್ಞನ ಶೈಲಿ, ಕುವೆಂಪು ಶೈಲಿ, ಬೇಂದ್ರೆ ಶೈಲಿ, ರಾಜರತ್ನಂ ಶೈಲಿ, ಕೆ.ಎಸ್.ನ. ಶೈಲಿ, ಬಿ.ಆರ್.ಎಲ್. ಶೈಲಿ, ದೊರಂಗೌ ಶೈಲಿ... ಹೀಗೆ. ಮೇಲ್ನೋಟಕ್ಕೆ ವಿವಿಧ ಶೈಲಿಗಳನ್ನು ಗುರುತಿಸಬಹುದು. ಆದರೆ ಇವುಗಳನ್ನು ವಿವರಿಸುವುದು ಹೇಗೆ ? ಈ ನಿಟ್ಟಿನಲ್ಲಿ ಪಂಪನ ಶೈಲಿಯಲ್ಲಿ ಗಂಭೀರ ವಚನ ರಚನೆಯನ್ನು, ರನ್ನನ ಶೈಲಿಯಲ್ಲಿ ನಾಟಕೀಯತೆಯನ್ನು, ಕುಮಾರವ್ಯಾಸನಲ್ಲಿ ದೇಸೀ ಭಾಷೆ, ನುಡಿಗಟ್ಟು, ರೂಪಕಗಳನ್ನು, ಬೇಂದ್ರೆಯವರಲ್ಲಿ ಉತ್ತರ ಕರ್ನಾಟಕದ ದೇಸೀ ಭಾಷೆ, ದೇಸೀ ಲಯ, ಕುವೆಂಪು ಅವರಲ್ಲಿ ಸಂಸ್ಕೃತ ಭೂಯಿಷ್ಠ ಭಾಷೆ.... ಹೀಗೆ ಗುರುತಿಸುತ್ತಾ ಹೋಗಬಹುದು.

ಒಟ್ಟಾರೆ, ಒಬ್ಬೊಬ್ಬ ಕವಿಯಲ್ಲಿಯೂ ಒಂದೊಂದು ಶೈಲಿಯನ್ನು ಗುರುತಿಸಬಹುದು. ಇಂತಹ ಶೈಲಿ ತನ್ನೊಳಗೆ ಅನೇಕ ಒಳ ಶೈಲಿಗಳನ್ನು ಸಹ ಪ್ರಕಟಿಸಬಹುದು. ಕಾರಣ ಒಬ್ಬ ವ್ಯಕ್ತಿ ಅಥವಾ ಕವಿ ತನ್ನ ದೀರ್ಘ ಜೀವಮಾನದಲ್ಲಿ ವಿಭಿನ್ನ ಅನುಭವ, ಸಂಸ್ಕಾರಗಳ ಹಿನ್ನೆಲೆಯಲ್ಲಿ ವಿಭಿನ್ನ ಪ್ರಕಾರಗಳ ಕಾವ್ಯ ರಚನೆಯಲ್ಲಿ ವಿಭಿನ್ನ ಶೈಲಿಗಳನ್ನು ಪ್ರಕಟಿಸಲು ಸಾಧ್ಯವಿದೆ. ಹಾಗಾಗಿ ಶೈಲಿಯಲ್ಲಿ ಅನೇಕ ಒಳ ಶೈಲಿಗಳಿರುವುದು ವಾಸ್ತವವಾಗಿದೆ. ಈ ನೆಲೆಯಲ್ಲಿ ಶೈಲಿ ಎಂಬುದು ಸಂಕೀರ್ಣವಾದ ಕಲ್ಪನೆಯಾಗಿದೆ. ಆದರೂ ಈ ಅನೇಕ 'ಶೈಲಿ'ಗಳಿಂದ ಒಂದು

**ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ**

ಸಾಮಾನ್ಯ ಶೈಲಿಯನ್ನು ಒಬ್ಬ ಬರಹಗಾರನ ಮಟ್ಟಿಗೆ ಗುರುತಿಸಬಹುದು. ಈ ನೆಲೆಯಲ್ಲಿ ಎಸ್. ವಿ. ರಂಗಣ್ಣನವರ ಶೈಲಿ–೧, ಶೈಲಿ–೨, ಶೈಲಿ–೩ ಎಂಬ ಕಾವ್ಯ ವಿಮರ್ಶಾ ಸಂಪುಟಗಳನ್ನು ಗುರುತಿಸಬಹುದು. ಈ ಹಿನ್ನೆಲೆಯಲ್ಲಿಯೇ ಶೈಲಿಶಾಸ್ತ್ರ ಸಹ ಅಸ್ತಿತ್ವ ಪಡೆದಿರುವುದು.

ಒಟ್ಟಾರೆ ಜೀವನವ್ಯಾಪಿ, ಸಮಾಜವ್ಯಾಪಿಯಾದ ಈ ಶೈಲಿಯಲ್ಲಿ ಸಾಹಿತ್ಯದ್ದು ಸಹ ಒಂದು ಶೈಲಿಯಿದೆ.

**ಸಾಹಿತ್ಯ ಶೈಲಿ :** ಒಟ್ಟು ಜ್ಞಾನ ಶಾಖೆಗಳಲ್ಲಿಯೇ ಸಾಹಿತ್ಯ ಶೈಲಿಯನ್ನು ಪ್ರತ್ಯೇಕವಾಗಿ ಗುರುತಿಸಬಹುದು. ಅದರ ಒಂದು ನೆಲೆ ಇಲ್ಲಿ ಓದಿನ ಅನುಭವ ಆಪ್ಯಾಯಮಾನವಾಗಿರುತ್ತದೆ. ಇಂತಹ ಗುಣ ಇತರೆ ಜ್ಞಾನಶಾಖೆಗಳ ಬರಹಗಳಿಗೆ ಇರುವುದಿಲ್ಲ. ಹಾಗಾಗಿ ಅವು ಶಾಸ್ತ್ರಕೃತಿಗಳೆಂದು ಅಥವಾ ಸಾಹಿತ್ಯೇತರ ಕೃತಿಗಳೆಂದು ಕರೆಯಲ್ಪಟ್ಟಿರುವುದು. ಉದಾಹರಣೆಗೆ ಅರ್ಥಶಾಸ್ತ್ರ, ಸಸ್ಯಶಾಸ್ತ್ರದ ಬರವಣಿಗೆ ಅಥವಾ ಮಾತು. ಇದರ ಓದನ್ನು ನಾವು ಪ್ರಜ್ಞಾಪೂರ್ವಕವಾಗಿಯೇ ಸಾಧ್ಯವಾಗಿಸಿಕೊಳ್ಳಬೇಕು. ಇಂತಹ ಓದನ್ನು ಆರಾಮ ಕುರ್ಚಿಯಲ್ಲಿ ಕುಳಿತೋ, ಹಾಸಿಗೆಯಲ್ಲಿ ದಿಂಬಿಗೆ ಒರಗಿಯೋ ಓದುವಂತಿಲ್ಲ. ಹಾಗೆ ಮಾಡಿಕೊಳ್ಳುವ ಓದು ಪೂರ್ಣ ಸಾರ್ಥಕವಲ್ಲ. ಆದರೆ ಕತೆ, ಕಾದಂಬರಿ, ನಾಟಕ, ಕವಿತೆ ಇತ್ಯಾದಿಗಳನ್ನು ಹಾಗೆ ಓದಬಹುದು ಅಥವಾ ಆಸ್ವಾದಿಸಬಹುದು. ಈ ಮಾತು ಸಾಹಿತ್ಯದ ಎರಡು ಭಾಗಗಳಲ್ಲಿ ಒರಟಾದ ಶಾಸ್ತ್ರ ಸಾಹಿತ್ಯಕ್ಕೆ ಅನ್ವಯವಾಗುವುದಿಲ್ಲ. ವ್ಯಾಕರಣ, ಛಂದಸ್ಸು ಇತ್ಯಾದಿಗಳನ್ನು ಹಾಗೆ ಓದಲಾಗುವುದಿಲ್ಲ. ಆದ್ದರಿಂದ ಸಾಹಿತ್ಯದ ಈ ಭಾಗವನ್ನು ಸೃಜನೇತರ ಬರಹದ ಗುಂಪಿಗೆ ಸೇರಿಸುವುದು.

ಒಟ್ಟಾರೆ, ಸಾಹಿತ್ಯ ಶೈಲಿಯ ಒಂದು ಮುಖ್ಯ ನೆಲೆ ಆಪ್ಯಾಯಮಾನತೆ. ಸಾಹಿತ್ಯ ಮೀಮಾಂಸಕರ ಹೇಳಿಕೆಯಂತೆ ಇದು ಕಾಂತೆಯ ಹಾಗೆ ಉಪದೇಶವನ್ನು ನೀಡುತ್ತದೆ. ಅಂತೆಯೇ ಇದರ ಇನ್ನೊಂದು ಮುಖ್ಯನೆಲೆ, ಅದು ಕೆ. ವಿ. ನಾರಾಯಣ ಅವರು ಗುರುತಿಸುವಂತೆ, ದೈನಂದಿನ ಭಾಷಾ ಪ್ರಯೋಗಗಳಿಗಿಂತ ಭಿನ್ನ ಭಾಷಾ ಪ್ರಯೋಗಗಳನ್ನು ಸಾಹಿತ್ಯದಲ್ಲಿ ನಾವು ಕಾಣುತ್ತೇವೆ. ಈ ಪ್ರಭಾವ ಕೆಲವೊಮ್ಮೆ ಮಂದವಾಗಿ ಸಾಹಿತಿಗಳ ದೈನಂದಿನ ಭಾಷೆಯಲ್ಲಿ ಸಹ ಪ್ರಕಟವಾಗಬಹುದು.

ಒಟ್ಟಾರೆ, ಸಾಹಿತ್ಯ ಶೈಲಿಯನ್ನು ಈ ಎರಡು ನೆಲೆಗಳ ಮೂಲಕ ಸ್ಥೂಲವಾಗಿ ಗುರುತಿಸಬಹುದು. ಈ ಹಿನ್ನೆಲೆಯಲ್ಲಿ ಇದರ ಭಾಗವಾದ ಕಾವ್ಯ ಶೈಲಿಯನ್ನು ಮೊದಲಿಗೆ ಗುರುತಿಸಬಹುದು.

**ಕಾವ್ಯ ಶೈಲಿ :** ಕಾವ್ಯವು ಸಾಹಿತ್ಯದ ಇತರೆ ಪ್ರಕಾರಗಳಂತೆ ತನ್ನದೇ ಆದ ಶೈಲಿಯನ್ನು ಹೊಂದಿದೆ. ಇದನ್ನು ಹೀಗೆ ಗುರುತಿಸಬಹುದು. ಕಾವ್ಯದಲ್ಲಿ ಪದಗಳು ಗದ್ಯದಂತೆ ಹೆಚ್ಚು ಪ್ರತ್ಯಯಗಳನ್ನು ಹೊಂದಿರುವುದಿಲ್ಲ.

ಪದ್ಯ ಅಥವಾ ಕಾವ್ಯದಲ್ಲಿ ಪದಗಳಿಗೆ ಗದ್ಯದ ಪ್ರತ್ಯಯಗಳು ಹತ್ತುವ ಪ್ರಮಾಣದಲ್ಲಿ ಹತ್ತಲಾರವು. ಇದು ಒಂದು ನೆಲೆ. ಇನ್ನೊಂದು ನೆಲೆ – ಪದ್ಯದಲ್ಲಿ ವಾಕ್ಯಗಳು ಸಂಕ್ಷಿಪ್ತವಾಗಿರುತ್ತವೆ. ಅಥವಾ ಇವುಗಳನ್ನು ಅಧ್ಯಾಹಾರಗೊಂಡ ವಾಕ್ಯಗಳು ಎಂದೂ ಕರೆಯಬಹುದು. ಉದಾಹರಣೆಗೆ, ನಾನು ಬಡವಿ ಎಂಬುದು ನಾನು ಬಡವಿಯಾಗಿದ್ದೇನೆ ಎಂಬ ಗದ್ಯದಲ್ಲಿನ ವಾಕ್ಯಕ್ಕೆ ಒಟ್ಟಿದ ಅಧ್ಯಾಹಾರಗೊಂಡ ವಾಕ್ಯವಾಗಿದೆ. ಅಂತೆಯೇ ಬಳಸಿಕೊಂಡೆವದನೆ ನಾವು ಎಂಬುದು ಸಹ ಅಧ್ಯಾಹಾರಗೊಂಡ ವಾಕ್ಯವೇ. ಇಂತಹ ಉದಾಹರಣೆಗಳ ಸಾಲಿನಲ್ಲಿ ಲಂಕೇಶರ 'ಅವ್ವ' ಕವಿತೆಯ ಸಾಲುಗಳನ್ನು ಸಹ ಸದ್ಯಕ್ಕೆ ಇಲ್ಲಿ ಉದಾಹರಿಸಬಹುದು. ಉದಾಹರಣೆಗೆ, 'ನನ್ನವ್ವ ಫಲವತ್ತಾದ ಕಪ್ಪು ನೆಲ.' ಇದು ನನ್ನವ್ವ ಫಲವತ್ತಾದ ಕಪ್ಪು ನೆಲವಾಗಿದ್ದಾಳೆ ಎಂಬ ವಾಕ್ಯಕ್ಕೆ ಒಟ್ಟಿದ ಅಧ್ಯಾಹಾರಗೊಂಡ ವಾಕ್ಯವಾಗಿದೆ.

ಇನ್ನೊಂದು ನೆಲೆಯಲ್ಲಿ ಹೇಳುವುದಾದರೆ, ಪ್ರತ್ಯಯವಿರದ ಪದವಾವುದೂ ಇಲ್ಲ. ಆದರೂ ಇವುಗಳ ಬಳಕೆಯ ಪ್ರಮಾಣ ಪದ್ಯದಲ್ಲಿ ಗದ್ಯದಷ್ಟು ಇಲ್ಲ ಎಂದು ನಿಖರವಾಗಿ ಹೇಳಬಹುದು. ಉದಾಹರಣೆಗೆ, ಕಾವ್ಯದ ಯಾವುದೇ ವಾಕ್ಯದಲ್ಲಿ ವಿವಿಧ ಪ್ರತ್ಯಯಗಳು ವಿವಿಧ ಪದಗಳೊಂದಿಗೆ, ಅದರಲ್ಲಿಯೂ ಕೆಲವೊಮ್ಮೆ ಎರಡೆರಡು ಪ್ರತ್ಯಯಗಳು ಒಂದೊಂದು ಪದಗಳಿಗೆ ಹತ್ತುವುದೂ ಇದೆ. ಉದಾಹರಣೆಗೆ, ಮೂಡಣದೊಳಗಿಂದ. ಇಲ್ಲಿ 'ಂ' (ಶೂನ್ಯ ಪ್ರತ್ಯಯ), 'ಇಂದ' ಎಂಬ ಎರಡು ಪ್ರತ್ಯಯಗಳನ್ನು ಒಂದು ಪದದೊಂದಿಗೆ ನೋಡಬಹುದು. ಆದರೆ ಇಂತಹ ಪ್ರತ್ಯಯಗಳು ದೊಡ್ಡ ಪ್ರಮಾಣದಲ್ಲಿ ಪದ್ಯದ ಪದಗಳಲ್ಲಿ ಬರುವುದಿಲ್ಲ.

ಉದಾಹರಣೆ :

ನಾನು ಬಡವಿ ಆತ ಬಡವ
ಒಲವೆ ನಮ್ಮ ಬದುಕು
ಬಳಸಿಕೊಂಡೆವದನೆ ನಾವು
ಅದಕು ಇದಕು ಎದಕು

ಇಲ್ಲಿ 'ಬಡವಿ', 'ಬಡವ', 'ಬದುಕು' ಮುಂತಾದ ಪದಗಳಿಗೆ ಗದ್ಯದ ನೆಲೆಯಲ್ಲಿ ಕೆಲವು ಪ್ರತ್ಯಯಗಳು ಹತ್ತುವುದು ಸಾಧ್ಯವಿದೆ. ಉದಾಹರಣೆ : ನಾನು ಬಡವಿ ಯಾಗಿದ್ದೇನೆ, ಆತ ಬಡವನಾಗಿದ್ದಾನೆ, ನಮ್ಮ ಬದುಕು ಒಲವಿನದಾಗಿದೆ. ಹೀಗೆ ಇಲ್ಲಿಯ ಪದಗಳನ್ನು ವಿಸ್ತರಿಸ ಬಹುದಿತ್ತು. ಆದರೆ ಇದು ಪದ್ಯವಾಗಿರುವುದರಿಂದ ವಿವಕ್ಷಿತ ಪ್ರತ್ಯಯಗಳು ಈ ಪದಗಳಿಗೆ ಹತ್ತಿಲ್ಲ.

ಹಾಗಾಗಿ, ಪದ್ಯ ಅಥವಾ ಕಾವ್ಯದಲ್ಲಿ ಪದಗಳಿಗೆ ಗದ್ಯದ ಪ್ರತ್ಯಯಗಳು ಹತ್ತುವ ಪ್ರಮಾಣದಲ್ಲಿ ಹತ್ತಲಾರವು. ಇದು ಒಂದು ನೆಲೆ. ಇನ್ನೊಂದು ನೆಲೆ – ಪದ್ಯದಲ್ಲಿ ವಾಕ್ಯಗಳು ಸಂಕ್ಷಿಪ್ತವಾಗಿರುತ್ತವೆ. ಅಥವಾ ಇವುಗಳನ್ನು ಅಧ್ಯಾಹಾರಗೊಂಡ ವಾಕ್ಯಗಳು ಎಂದೂ ಕರೆಯಬಹುದು. ಉದಾಹರಣೆಗೆ, 'ನಾನು ಬಡವಿ' ಎಂಬುದು 'ನಾನು ಬಡವಿಯಾಗಿದ್ದೇನೆ' ಎಂಬ ಗದ್ಯದಲ್ಲಿನ ವಾಕ್ಯಕ್ಕೆ ಒಡ್ಡಿದ ಅಧ್ಯಾಹಾರಗೊಂಡ ವಾಕ್ಯವಾಗಿದೆ. ಅಂತೆಯೇ 'ಬಳಸಿಕೊಂಡೆವದನೆ' ನಾವು ಎಂಬುದು ಸಹ ಅಧ್ಯಾಹಾರಗೊಂಡ ವಾಕ್ಯವೇ. ಇಂತಹ ಉದಾಹರಣೆಗಳ ಸಾಲಿನಲ್ಲಿ ಲಂಕೇಶರ 'ಅವ್ವ' ಕವಿತೆಯ ಸಾಲುಗಳನ್ನು ಸಹ ಸದ್ಯಕ್ಕೆ ಇಲ್ಲಿ ಉದಾಹರಿಸಬಹುದು. ಉದಾಹರಣೆಗೆ, 'ನನ್ನವ್ವ ಫಲವತ್ತಾದ ಕಪ್ಪು ನೆಲ.' ಇದು 'ನನ್ನವ್ವ ಫಲವತ್ತಾದ ಕಪ್ಪು ನೆಲವಾಗಿದ್ದಾಳೆ' ಎಂಬ ವಾಕ್ಯಕ್ಕೆ ಒಡ್ಡಿದ ಅಧ್ಯಾಹಾರಗೊಂಡ ವಾಕ್ಯವಾಗಿದೆ.

ಒಟ್ಟಾರೆ, ಗದ್ಯದಲ್ಲಿ ಸಾಮಾನ್ಯ ವಾಕ್ಯಗಳನ್ನು ನಾವು ಸಾಮಾನ್ಯವಾಗಿ ಕಂಡರೆ ಪದ್ಯದಲ್ಲಿ ಸಾಮಾನ್ಯವಾಗಿ ಕಾಣುವುದು ಅಧ್ಯಾಹಾರಗೊಂಡ ವಾಕ್ಯಗಳನ್ನೇ. ಈ ವಾಕ್ಯಗಳು ಕೆಲವೊಮ್ಮೆ ಒಂದೇ ಪದದ ರೂಪದಲ್ಲಿಯೂ ಇರುತ್ತವೆ. ಹಾಗಾಗಿ ಕಾವ್ಯದ ಶೈಲಿಯನ್ನು 'ಪ್ರತ್ಯಯರಹಿತ ಪದ' ಎಂಬ ಮೊದಲ ನೆಲೆಯಂತೆ, ಅಧ್ಯಾಹಾರಗೊಂಡ ವಾಕ್ಯ 'ವಿಶೇಷ' ಎಂಬುದನ್ನು ಎರಡನೆಯ ನೆಲೆಯನ್ನಾಗಿ ಗುರುತಿಸಬಹುದು.

## ಅಂತರ

ಬೆಳಕಲಿ
ನಿನ್ನಾ ನೆರಳು
ನಿನ್ನಾ ಹಿಂಬಾಲಕ.
ಕತ್ತಲಲಿ
ಅಡಗಿ ಕುಳಿತ
ಸಂಚಾಲಕ.

ದ್ವಾರಕನಕುಂಟೆ ಪಾತಣ್ಣ
ಬೆಂಗಳೂರು – ೭೩

ಮೂರನೆಯ ನೆಲೆಯೆಂದರೆ, ಸದ್ಯದಲ್ಲಿ ಕರ್ತೃ, ಕರ್ಮ, ಕ್ರಿಯೆ ಎಂಬ ಕ್ರಮದಲ್ಲಿ ಸಾಮಾನ್ಯವಾಗಿ ವಾಕ್ಯ ರಚನೆಗಳಿರುತ್ತವೆ. ಆದರೆ ಈ ಕ್ರಮ ಪದ್ಯದಲ್ಲಿ ಹೆಚ್ಚು ವ್ಯತ್ಯಯವಾಗುತ್ತದೆ. ಇಲ್ಲಿ ಕೆಲವು ಸಾಲುಗಳು ಕರ್ತೃ ಪದದೊಂದಿಗೆ, ಇನ್ನೂ ಕೆಲವು ಸಾಲುಗಳು ಕರ್ಮ ಪದದೊಂದಿಗೆ ಮತ್ತು ಕೆಲವು ಸಾಲುಗಳು ಕ್ರಿಯಾ ಪದದೊಂದಿಗೆ ಆರಂಭಗೊಳ್ಳುವುದುಂಟು. ಕವಿ ವಹಿಸುವ ಸೃಜನಶೀಲ ಸ್ವಾತಂತ್ರ್ಯ ಮತ್ತು ಯಾವ ಸಂದರ್ಭದಲ್ಲಿ ಯಾವ ನಿಶ್ಚಿತ ಪದಕ್ಕೆ ಆದ್ಯತೆ ಕೊಡಬೇಕು ಎಂಬ ನಿರ್ಣಯದಲ್ಲಿ ಇದು ಸಾಧ್ಯವಾಗುತ್ತದೆ. ಇದಕ್ಕೆ ಉದಾಹರಣೆ, ರಾಯರು ಬಂದರು ಮಾವನ ಮನೆಗೆ (ಇಲ್ಲಿ ಕರ್ತೃ ಮೊದಲು), ಕಂಗಳ ತೊಳೆಯಿ ಕಂಪಿನಲಿ (ಇಲ್ಲಿ ಕರ್ಮ ಮೊದಲು), ನೋಡಲ್ಲಿ ಮುಸ್ಸಂಜೆ ರಂಗು ಚೆಲ್ಲಿದೆ (ಇಲ್ಲಿ ಕ್ರಿಯಾ ಮೊದಲು).

ಹೀಗೆ ನಿರ್ದಿಷ್ಟ ಸ್ಥಾನಗಳಲ್ಲಿ ಸಾಮಾನ್ಯವಾಗಿ ಬರುವ ವಾಕ್ಯ ಘಟಕಗಳು ಅಥವಾ ಪದಗಳು ಗದ್ಯಕ್ಕಿಂತ ಹೆಚ್ಚು ಪದ್ಯದಲ್ಲಿ ವ್ಯತ್ಯಸ್ಥಗೊಂಡ ಸ್ಥಾನಗಳಲ್ಲಿ ಬರುತ್ತವೆ.

ಇನ್ನು ನಾಲ್ಕನೆಯ ನೆಲೆಯೆಂದರೆ ಕಾವ್ಯ ಅಥವಾ ಪದ್ಯವು ಗದ್ಯಕ್ಕಿಂತ ಸಂಕೀರ್ಣ. ಇದರ ಗಾತ್ರ ಸಹ ಗದ್ಯದ ಕತೆ, ಕಾದಂಬರಿ, ನಾಟಕ ಇತ್ಯಾದಿಗಳಿಗಿಂತ ಶರೀರವಾಗಿ ಚಿಕ್ಕದಾಗಿರುವುದರಿಂದ ಇದರ ಶಾರೀರ ಸಹ ಹೆಚ್ಚು ಸೂಕ್ಷ್ಮ. ಆದ್ದರಿಂದಲೇ ಇದರ ಗಾತ್ರ ಚಿಕ್ಕದಾದರೂ ಇದರ ಆಸ್ವಾದನೆಗೆ ಗದ್ಯಕ್ಕಿಂತ ಹೆಚ್ಚಿನ ಪರಿಶ್ರಮ ಬೇಕು. ಆದ್ದರಿಂದಲೇ ಸರ್ಕ್ಯುಲೇಟಿಂಗ್ ಲೈಬ್ರರಿಗಳಲ್ಲಿ ಪದ್ಯಕ್ಕೆ ಜಾಗ ಇಲ್ಲವೇ ಇಲ್ಲ ಎನ್ನುವಷ್ಟು ಕಡಿಮೆ. ಕಾರಣ, ಇಲ್ಲಿಯ ಓದುಗರು ಸುಲಭ ಓದಿನ ಸಂಸ್ಕಾರಕ್ಕೆ ಪಕ್ಕಾಗಿರುವವರಾಗಿದ್ದಾರೆ. ಏನೇ ಆದರೂ ಗದ್ಯದ ಯಾವುದೇ ಪ್ರಕಾರಗಳಿಗಿಂತ ಪದ್ಯ ಅಥವಾ ಕಾವ್ಯದ ಶರೀರ ಮತ್ತು ಶಾರೀರ ಹೆಚ್ಚು ಸೂಕ್ಷ್ಮ. ಇದು ಇದರ ನಾಲ್ಕನೆಯ ನೆಲೆ ಎಂಬುದಾಗಿ ಸದ್ಯಕ್ಕೆ ಗುರುತಿಸಿಕೊಳ್ಳಬಹುದು.

ಐದನೆಯ ನೆಲೆ ಅಥವಾ ಈ ಹಿಂದಿನ ನೆಲೆಗೆ ಪೂರಕವಾಗಿ ಗುರುತಿಸುವುದಾದರೆ ಕತೆ, ಕಾದಂಬರಿ, ನಾಟಕ ಮುಂತಾದ ಯಾವುದೇ ಪ್ರಕಾರಗಳಿಗಿಂತ ಕಾವ್ಯ ಪ್ರಕಾರದಲ್ಲಿ ಹೆಚ್ಚು ಪ್ರತಿಮೆಗಳನ್ನು ಕಾಣುತ್ತೇವೆ. ಕೆಲವೊಮ್ಮೆ ಒಂದು ಅಥವಾ ಒಂದೆರಡು ಪದಗಳೇ ಒಂದು ಕಾವ್ಯ ಪ್ರತಿಮೆಯಾಗಿಬಿಡಬಹುದು. ಉದಾಹರಣೆಗೆ, 'ನನ್ನವ್ವ ಫಲವತ್ತಾದ ಕಪ್ಪು ನೆಲ'. ಈ ಒಂದು ಸಾಲೇ ಒಂದು ಕಾವ್ಯ ಪ್ರತಿಮೆಯಾಗಿದೆ. ಇದು ದೇಸೀ ಮೂಲದ ತಾಯಿಯ ಸಮೃದ್ಧ ವ್ಯಕ್ತಿತ್ವಕ್ಕೆ ಒಡ್ಡಿದ ಪ್ರತಿಮೆಯಾಗಿದೆ. ಇದರ ಭಾಗವಾಗಿ ಇವಳಲ್ಲಿ ಕೊರತೆಯಾಗದಷ್ಟು ಪ್ರೀತಿ, ಮಮಕಾರ, ವಾತ್ಸಲ್ಯ ಗಳಿರುವಂತೆ ಅಡ್ಡದಾರಿ ಹಿಡಿದ ಗಂಡ ಮತ್ತು ಮಕ್ಕಳ ಬಗೆಗೆ ಅಷ್ಟೇ ಸಿಟ್ಟು, ರೋಷ ಇತ್ಯಾದಿ ಸಹ ಇವೆ. ಇದಕ್ಕೆ ಯಾವುದೇ ಮುಲಾಜು ಇಲ್ಲ.

ಹೀಗೆ ಒಂದು ಪದ ಅಥವಾ ಒಂದೆರಡು ಪದಗಳನ್ನೊಳಗೊಂಡ ಕೆಲವು ವಾಕ್ಯಗಳೇ ಕೆಲವು ಪದ್ಯಗಳಲ್ಲಿ ಅನೇಕ ಸಾಲುಗಳ ವಿವರಣೆಯನ್ನು ಬೇಡುವಷ್ಟು ಸೂಕ್ಷ್ಮವಾಗಿ ಪ್ರತಿಮಾತ್ಮಕವಾಗಿ ಇರುತ್ತವೆ. ಆದ್ದರಿಂದ ಪದ್ಯಗಳಲ್ಲಿ ಅನೇಕ ಪದಗಳು ನಿಘಂಟಿನ ಅರ್ಥವನ್ನು ದಾಟಿದ ನೆಲೆಯಲ್ಲಿ ತಮ್ಮ ಅರ್ಥವನ್ನು ಪ್ರಕಟಿಸುವ ವ್ಯಾಪಕತೆಯನ್ನು ಕಾಣಬಹುದು.

**ಕಥನ ಶೈಲಿ :** ಕತೆಯಲ್ಲಿ ಹೆಚ್ಚಾಗಿ ಉತ್ತಮ ಪುರುಷ ಹೇಳುವ ಕ್ರಮವೇ ಕಾಣುತ್ತದೆ. ಅಪರೂಪಕ್ಕೆ ಈ ಸ್ಥಾನದಲ್ಲಿ ಪ್ರಥಮ ಪುರುಷ ಕಾಣುತ್ತಾನೆ. ಇದು ವ್ಯಕ್ತಿಯಾದರೂ ಆಗಿರಬಹುದು. ಪತ್ರ, ವಸ್ತು ಇತರೆ ಯಾವುದೇ ಆಗಿರಬಹುದು. ಆಗ ಭಾಷೆಯಲ್ಲಿ ವ್ಯತ್ಯಾಸ ಆಗಬಹುದು ಅಥವಾ ಆಗದೆಯೂ ಇರಬಹುದು. ಉದಾಹರಣೆಗೆ, ನಿರೂಪಕನ ಭಾಷಾ ವಿನ್ಯಾಸ ಶಿಷ್ಟ ಭಾಷೆ ಆಗಿರಬಹುದು. ಆಗ ನಿರೂಪಕನ ನಂತರದಲ್ಲಿ ಮಾತನಾಡುವ ಪಾತ್ರ ದೇಸೀ ಭಾಷೆಯನ್ನಾಡಬಹುದು. ಇದಕ್ಕೆ ಉದಾಹರಣೆ ಯನ್ನು 'ಭುಜಂಗಯ್ಯನ ದಶಾವತಾರ'ದಲ್ಲಿ ನೋಡ ಬಹುದು. ಅಂತೆಯೇ ಇದಕ್ಕೆ ವಿರುದ್ಧ ಸ್ಥಿತಿಯಲ್ಲಿ ಒಡಲಾಳ, ಕುಸುಮಬಾಲೆ ಇತ್ಯಾದಿಗಳನ್ನು ನೋಡಬಹುದು.

**ನಾಟಕ ಶೈಲಿ :** ಯಾವುದೇ ಸಾಹಿತ್ಯ ಕೃತಿಯ ಭಾಷೆ ಅನುಭವದಿಂದ ಕೃತಕವಾದರೂ ಪರಿಣಾಮದಿಂದ ಸಹಜವಾಗಿರುತ್ತವೆ. – ಕಿ. ರಂ. ನಾಗರಾಜ

ನಾಟಕಗಳಲ್ಲಿ ಪಾತ್ರಗಳೇ ನೇರವಾಗಿ ಮಾತನಾಡುವುದರಿಂದ ಹೆಚ್ಚು ಪ್ರತ್ಯಕ್ಷ ವಾಕ್ಯಗಳು ಇರುತ್ತವೆ. ಅಂತೆಯೇ ಉತ್ತಮ ಪುರುಷ ನುಡಿಗಳೇ ಇರುತ್ತವೆ.

ಇಂತಹ ನುಡಿಗಳೇ ಕಥನವನ್ನು ನಿರ್ಮಿಸುತ್ತವೆ. ಇಲ್ಲಿ ನಿರೂಪಕ ನೇರವಾಗಿ ಇರದೆ ಅಪ್ರತ್ಯಕ್ಷನಾಗಿ ಇರುತ್ತಾನೆ. ಈತ ಕೆಲವೊಮ್ಮೆ ಭಾಗವತರು, ಮೇಳ ಇತ್ಯಾದಿ ರೂಪಗಳಲ್ಲಿ ಪ್ರವೇಶಿಸುವುದುಂಟು.

ನಾಟಕದ ಭಾಷೆ ಇತರೆ ಪ್ರಕಾರಗಳಂತೆ ವಾಚನಕ್ಕೆ ಪೂರಕವಾಗದೆ 'ಆಂಗಿಕ'ಕ್ಕೆ (ಅಭಿನಯಕ್ಕೆ) ಪೂರಕವಾಗಿರುತ್ತದೆ.

ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ವಿಭಾಗ, ಸ್ನಾತಕೋತ್ತರ ಕೇಂದ್ರ ಬೆಂಗಳೂರು ವಿಶ್ವವಿದ್ಯಾಲಯ, ಮಂಗಸಂದ್ರ
ಕೋಲಾರ – ೫೬೩ ೧೦೨




# ಟಿ. ವಿ. ಲೋಕ
# ಕಾರ್ಯಕ್ರಮಗಳಲ್ಲಿ ಮೂಢನಂಬಿಕೆಗೆ ಮಣೆ

**ಸಿ. ಆರ್. ಕೃಷ್ಣರಾವ್**

**ಮೊ**ನ್ನೆ ಸುದ್ದಿವಾಹಿನಿಯೊಂದರಲ್ಲಿ ಕಾರ್ಯಕ್ರಮ ವೀಕ್ಷಿಸುತ್ತಿದ್ದಾಗ ವಿಶೇಷ ಪ್ರಕಟಣೆಯೊಂದು ಹರಿದಾಡಿತು. ಅದು ಗೋಮೂತ್ರದಿಂದ ಬಂಗಾರ ತಯಾರಿಸುವ ಸಂಶೋಧನೆ ಕುರಿತಾಗಿತ್ತು. ಕುತೂಹಲ ಉಂಟಾಗಿ ರಾತ್ರೆ ಸುದ್ದಿ ಪ್ರಸಾರಾನಂತರ ವಿಶೇಷ ಕಾರ್ಯಕ್ರಮ ನೋಡಲು ಕುಳಿತೆ. ಗೋಮಾತೆಯ ಪಾವಿತ್ರ್ಯದ ಗುಣಗಾನವಾದ ಮೇಲೆ ಗೋಮೂತ್ರದ ಔಷಧೀಯ ಗುಣಗಳನ್ನು ವಿವರಿಸಿ, ಅದರಿಂದ ಬಂಗಾರ ತಯಾರಿಸುವ ಬಗ್ಗೆ ನಡೆಯುತ್ತಿರುವ ಸಂಶೋಧನೆ ವಿಚಾರ ಮಾಹಿತಿ ನೀಡಲಾಯಿತು. ಗೋಮೂತ್ರದಿಂದ ಬಂಗಾರ ತಯಾರಿಸುವುದರಲ್ಲಿ 'ವಿಜ್ಞಾನಿಗಳು' ಯಶಸ್ವಿಯಾಗಿದ್ದಾರಂತೆ. ಯಾವ ವಿಜ್ಞಾನಿಯೋ ಹೆಸರು ಮಾತ್ರ ಗೋಪ್ಯ. ಇನ್ನು ಯಾರೂ ಚಿಂತಿಸಬೇಕಿಲ್ಲ. ಏಕೆಂದರೆ ಗಂಜಲ ಸಂಗ್ರಹಿಸಿಟ್ಟುಕೊಂಡರೆ ಬಂಗಾರ ಮಾಡಿ ಶ್ರೀಮಂತರಾಗಬಹುದು. ಕಾರ್ಯಕ್ರಮದಲ್ಲಿ ಪ್ರಯೋಗಾಲಯವನ್ನು ಚಿತ್ರಿಸಲಾಗಿತ್ತು. ಇಂಥ ಮೂಢನಂಬಿಕೆ ಹರಡುವುದರಲ್ಲಿ ಪ್ರಖ್ಯಾತರಾಗಿರುವ ಬಾಬಾ ರಾಮ್‌ದೇವ್‌ರ ಸಮರ್ಥನೆಯೂ ಇತ್ತು. ಹಾಗಾಗಿ ಇನ್ನು ಬಡತನ ನಿರ್ಮೂಲನವಾದಂತೆಯೇ. ಪವಿತ್ರ ಗೋವು ಒಂದನ್ನು ಕಟ್ಟಿಕೊಂಡರೆ ಸಾಕು, ವೈದ್ಯರನ್ನು ಕಾಣಬೇಕಾಗಿಲ್ಲ, ಸಾಕಷ್ಟು ಬಂಗಾರವೂ ದೊರೆತೀತು. ಇಂಥ ಕಾರ್ಯಕ್ರಮಗಳಿಗೆ ಧ್ವನಿ ನೀಡುವವರೂ ಕೆಟ್ಟ ದೊಡ್ಡ ಗಂಟಲಲ್ಲಿ ಅಬ್ಬರಿಸುತ್ತಾರೆ.

ಮಧ್ಯಾಹ್ನದ ವೇಳೆ ಗೃಹಿಣಿಯರನ್ನು ಆಕರ್ಷಿಸಲು ಅಡುಗೆ ಕಾರ್ಯಕ್ರಮಗಳು ಹಲವು ಚಾನೆಲ್‌ಗಳಲ್ಲಿರುತ್ತವೆ. ಅವುಗಳ ಪೈಕಿ ಅತ್ಯಂತ ಜನಪ್ರಿಯವಾಗಿರುವ ಒಂದರಲ್ಲಿ ಗಡ್ಡಧಾರಿ 'ಗುರೂಜಿ' ಒಬ್ಬರು ಬರುತ್ತಾರೆ. ಈತ ಎಣ್ಣೆ, ಬೆಣ್ಣೆ ಉಪಯೋಗಿಸದೆ ಮಾಡುವ ಪದಾರ್ಥಗಳನ್ನು ಕಲಿಸಿಕೊಡುತ್ತಾರೆ. ಆರೋಗ್ಯವರ್ಧನೆಗೆ ಒಳ್ಳೆಯದು ಎಂದು ಹೇಳುವ ಈತ ನಿಮ್ಮನ್ನು ಪೂರ್ವಜನ್ಮಕ್ಕೆ ಕೊಂಡೊಯ್ಯುತ್ತಾರೆ. ದೂರವಾಣಿ ಮೂಲಕವೋ, ಪತ್ರಮುಖೇನವೋ ನೀವು ಬಳಲುತ್ತಿರುವ ಕಾಯಿಲೆ ತೋಡಿಕೊಂಡರೆ ಪರಿಹಾರ ಸೂಚಿಸುತ್ತಾರೆ. ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಗಳಿಂದ ನೀವು ಈಗ ರೋಗಪೀಡಿತರಾಗಿರುತ್ತೀರಿ. ಇದಕ್ಕೆ 'ಗುರೂಜಿ'ಯ ಚಿಕಿತ್ಸಾಲಯಕ್ಕೆ ಹೋದರೆ ಸಮ್ಮೋಹನ ವಿದ್ಯೆಯಿಂದ ಗುಣಮುಖರಾಗಬಹುದು. ಪೂರ್ವಜನ್ಮದ ಬಗ್ಗೆಯೂ ತಿಳಿದುಕೊಳ್ಳಬಹುದು. ಅದೇ ವಾಹಿನಿಯಲ್ಲಿ, ಅದೇ ಅಡುಗೆ ಕಾರ್ಯಕ್ರಮದಲ್ಲಿ ಹೊಸದಾಗಿ ಒಬ್ಬರು ದ್ರಾಕ್ಷಿಮಾಲೆ ಧರಿಸಿರುವ ಜ್ಯೋತಿಷಿ ಪ್ರತ್ಯಕ್ಷನಾಗುತ್ತಾನೆ. ಈತನ ಮುಂದೆ ಹಲವು ಚಿಕ್ಕ ಬಟ್ಟಲುಗಳಲ್ಲಿ ವಿವಿಧ ಬಗೆಯ ಧಾನ್ಯಗಳು ತುಂಬಿರುತ್ತವೆ. ಈತ ಯಾವತ್ತು ಯಾವ ಧಾನ್ಯ ತಿಂದರೆ ಒಳ್ಳೆಯದಾಗುತ್ತದೆ, ಇಲ್ಲ ಕೆಟ್ಟದಾಗುತ್ತದೆ ಎಂದು ಹೇಳುತ್ತಾನೆ. ಸುಮಾರು ಹತ್ತು ನಿಮಿಷಗಳಲ್ಲಿ ಈ ಜ್ಯೋತಿಷಿ ಪಟಪಟನೆ ವಿದ್ಯಾರ್ಥಿಗಳು, ಉದ್ಯಮಿಗಳು, ಉದ್ಯೋಗಿಗಳು ಎಂದು, ಏನು ಧಾನ್ಯ ತಿನ್ನುವುದರಿಂದ ಉತ್ತಮ ಫಲಿತಾಂಶ ದೊರೆಯುತ್ತದೆ, ಇಲ್ಲವೆ ಹಾನಿಯಾಗುತ್ತದೆ ಎಂದು ತಿಳಿವಳಿಕೆ ನೀಡುತ್ತಾನೆ.

ಇಂಥ ಮೂಢನಂಬಿಕೆ ಹರಡುವ ಕಾರ್ಯಕ್ರಮಗಳು ಖಾಸಗಿ ವಾಹಿನಿಗಳಲ್ಲಿ ಬೇಕಾದಷ್ಟಿರುತ್ತವೆ. ಬೆಳಗಿನ ಹೊತ್ತಿನಲ್ಲಂತೂ ಅಧ್ಯಾತ್ಮ ಚಿಂತನೆ, ದೇವಾಲಯಗಳ

ಕೆಲವೊಂದು ಸೀರಿಯಲ್ಲುಗಳು ಅರ್ಥಾತ್ ಧಾರಾವಾಹಿಗಳು ಜನಪ್ರಿಯವಾಗಿರುತ್ತವೆ, ನಿಜವಾದ ಅರ್ಥದಲ್ಲಿ. ಅಂಥವು ವಿರಳ. ಇರುವ ಹತ್ತಿಪ್ಪತ್ತು ಚಾನೆಲ್‌ಗಳಿಗೆ ಧಾರಾವಾಹಿಗಳನ್ನು ಒದಗಿಸಬೇಕಲ್ಲ, ಅದೇನೂ ಸುಲಭವಲ್ಲ. ಈ ಧಾರಾವಾಹಿಗಳಿಂದಾಗಿ ನೂರಾರು ಕಲಾವಿದರು ಬೆಳಕಿಗೆ ಬಂದಿದ್ದಾರೆ. ಸೀರಿಯಲ್ಲುಗಳಲ್ಲಿ ಪಾತ್ರವಹಿಸಿ ಬದುಕು ಸಾಗಿಸುತ್ತಿದ್ದಾರೆ. ಚಿತ್ರೀಕರಣ ದಿನಕ್ಕೆ ಹನ್ನೆರಡು ಗಂಟೆಕಾಲ ಬೆಳಗ್ಗೆ ೯ರಿಂದ ರಾತ್ರಿ ೯ರವರೆಗೆ ನಡೆಯುತ್ತದೆ. ಕಲಾವಿದರ ಜನಪ್ರಿಯತೆ, ಪಾತ್ರದ ಮೇಲೆ ಸಂಭಾವನೆ ನೀಡುತ್ತಾರೆ ತಯಾರಕರು. ದಿನಕ್ಕೆ ೬೦೦ ರೂಪಾಯಿಗಳಿಂದ ೮೦೦೦ರವರೆಗೆ ಸಂಭಾವನೆ ಕೊಡುತ್ತಾರೆ. ಜನಪ್ರಿಯ ನಟರಿಗೆ ಇಂತಿಷ್ಟು ಮೊತ್ತ ಎಂದು ನಿಗದಿಪಡಿಸುತ್ತಾರೆ. ಅದು ಸುಮಾರು ೨೦ ಸಾವಿರ ರೂ.ಗಳವರೆಗಿರುತ್ತದೆ.

ದರ್ಶನ, ದಿನದ ಭವಿಷ್ಯವಾಣಿ ಇವುಗಳು ತುಂಬಿರುತ್ತವೆ. ಹೆಚ್ಚು ಕಡಿಮೆ ಎಲ್ಲ ಚಾನೆಲ್‌ಗಳಲ್ಲೂ ಇಂಥವೇ ಕಾರ್ಯಕ್ರಮಗಳು ಪ್ರಸಾರವಾಗುತ್ತವೆ. ಸರಕಾರಿ ವಾಹಿನಿ ದೂರದರ್ಶನ ಕೂಡ ಇದಕ್ಕೆ ಹೊರತಲ್ಲ. ಮತ್ತೆ ಅದು ಇತರ ಎಲ್ಲ ಸರಕಾರಿ ಸಂಸ್ಥೆಗಳಂತೆಯೇ ಭ್ರಷ್ಟಾಚಾರದಲ್ಲಿ ಮುಳುಗಿದೆ. ಖಾಸಗಿ ವಾಹಿನಿಗಳಲ್ಲಿ ಪ್ರತ್ಯಕ್ಷವಾಗುವ ಜ್ಯೋತಿಷಿಗಳು, ಬಾಬಾಗಳು ಪ್ರಚಾರಕ್ಕಾಗಿ ವಾಹಿನಿಗಳಿಗೆ ಹಣ ತೆರುವುದೂ ಉಂಟು. ಟಿಆರ್‌ಪಿಯ ಮೇಲೆ ಅವಲಂಬಿತವಾಗಿರುವ ಖಾಸಗಿ ವಾಹಿನಿಗಳು ಪೈಪೋಟಿಯ ಮೇಲೆ ಮೂಢನಂಬಿಕೆ ಹರಡುವುದರಲ್ಲಿ ಮುಂದಾಗುತ್ತವೆ. ರಾಜ್ಯದ ಮುಖ್ಯಮಂತ್ರಿಗಳೇನೋ ಮೂಢನಂಬಿಕೆ ವಿರುದ್ಧ ಕಾಯಿದೆ ತರುವುದಾಗಿ ಹೇಳುತ್ತಲೇ ಇದ್ದಾರೆ. ಅದು ಬಂದರೂ ಅಂಥ ದೊಡ್ಡ ಬದಲಾವಣೆ ಆಗದು. ಕಾರ್ಯಕ್ರಮಗಳು ಪ್ರಸಾರವಾಗುವುದರಲ್ಲೂ ವಾಹಿನಿಗಳಲ್ಲಿ ಹೆಚ್ಚಿನ ವ್ಯತ್ಯಾಸವೇನಿರುವುದಿಲ್ಲ. ಯಾವುದೇ ಚಾನೆಲ್ ನೋಡಿದರೂ ಒಂದೇ ತೆರನಾಗಿರುತ್ತವೆ. ಬೆಳಿಗ್ಗೆ ದೇವತಾ ದರ್ಶನ, ಸಾಮಾನ್ಯವಾಗಿ ಪಂಚಾಮೃತ ಅಭಿಷೇಕದ ದೃಶ್ಯಾವಳಿ. ಅನಂತರ ದಿನದ ಭವಿಷ್ಯದ ಕುರಿತು ಜ್ಯೋತಿಷಿಯಿಂದ ಪಠನ, ಅಧ್ಯಾತ್ಮ ಚಿಂತನೆ (ಇದಕ್ಕೆ ಸಾಕಷ್ಟು ಜನ ಇದ್ದಾರೆ). ೯ ಗಂಟೆ ಮೇಲೆ ಮನರಂಜನೆ, ಅಧಿಕವಾಗಿ ಸಿನಿಮಾ ಆಧಾರಿತವಾದ್ದು. ಕೆಲವೊಮ್ಮೆ ದೇವರನಾಮದ ಕಾರ್ಯಕ್ರಮ ಇರುತ್ತದೆ, ಇಲ್ಲವೆ ಸೀರಿಯಲ್ಲುಗಳು ಪ್ರಾರಂಭ. ಹನ್ನೊಂದು, ಹನ್ನೆರಡು ಗಂಟೆಗೆ ಅಡುಗೆ ಅರ್ಧಗಂಟೆ ಅಥವಾ ಒಂದು ಗಂಟೆ ಕಾಲ. ಇದಾದ ನಂತರ ಸಾಮಾನ್ಯವಾಗಿ ಯಾವುದಾದರೂ ಹಳೆಯ ಚಿತ್ರಗಳ ಪ್ರದರ್ಶನ. ಚಿತ್ರವೊಂದು ಬಿಡುಗಡೆಯಾದ ನಂತರ ಐದು ವರ್ಷಗಳಾದ ಮೇಲೆ ಟಿ.ವಿ.ಯಲ್ಲಿ ಪ್ರದರ್ಶಿಸಬಹುದು ಎಂಬ ನಿಯಮ ಇದೆ. ಈ ನಿಯಮದ ಪರಿಪಾಲನೆಗಿಂತ ಉಲ್ಲಂಘನೆಯೇ ಹೆಚ್ಚು. ಬಾಕ್ಸ್ ಆಫೀಸಿನಲ್ಲಿ ವಿಫಲಗೊಂಡಿರುವ ಚಿತ್ರಗಳು ಅಗ್ಗ ದರದಲ್ಲಿ ಕಿರುತೆರೆಗೆ ಮಾರಾಟವಾಗಿರುತ್ತವೆ, ಚಲನಚಿತ್ರ ಚಾನೆಲ್‌ಗಳಿಗೆ ಮೂರು ನಾಲ್ಕು ಗಂಟೆವರೆಗೆ ಅನುವು ಮಾಡಿಕೊಡುತ್ತದೆ, ಮಧ್ಯೆ ಮಧ್ಯೆ ಜಾಹೀರಾತುಗಳೂ ಸೇರಿ. ಜಾಹೀರಾತಿಗೆ ನೀಡುವ ದರ ಕೂಡ ಚಾನೆಲ್‌ಗಳ ಜನಪ್ರಿಯತೆಗೆ ಅನುಗುಣವಾಗಿರುತ್ತದೆ. ಇದು ದಿನದಲ್ಲಿ ಬೆಳಗ್ಗೆ, ಮಧ್ಯಾಹ್ನ ಬೇರೆಯೇ ಆಗಿರುತ್ತದೆ. ಸಂಜೆ ಪ್ರೈಮ್‌ಟೈಮ್ ಎನಿಸಿಕೊಳ್ಳುವ ಅವಧಿಯಲ್ಲಿ. ಜಾಹೀರಾತಿನ ರೇಟ್ ಸ್ವಲ್ಪ ಹೆಚ್ಚಾಗಿರುತ್ತದೆ. ಸಂಜೆ ೬ ಗಂಟೆಯಿಂದ ೯ ರವರೆಗೆ ಎಲ್ಲ ಟಿ.ವಿ. ಚಾನೆಲ್‌ಗಳಿಗೂ ಪ್ರೈಮ್‌ಟೈಮ್. ಅಂದರೆ ಹೆಚ್ಚು ಜನ ವೀಕ್ಷಿಸುತ್ತಾರೆ ಎನ್ನುವ ಅಂದಾಜು. ಎಲ್ಲ ಸೀರಿಯಲ್ಲುಗಳೂ ಪ್ರದರ್ಶನವಾಗುವುದು ಈ ಅವಧಿಯಲ್ಲಿ. ಅರ್ಧ ಗಂಟೆ ಇರುವ ಈ ಕಾರ್ಯಕ್ರಮಗಳ ವರಸೆಯೇ ಬೇರೆ. ಕೆಲವು ಸೀರಿಯಲ್ಲುಗಳು ವರ್ಷಗಟ್ಟಳೆ ಆದರೂ




ಮುಗಿಯುವುದೇ ಇಲ್ಲ. ಜಾಹೀರಾತಿನ ಪೋಷಣೆ ಇರುವವರೆಗೆ ಕತೆ ಬೆಳೆಯುತ್ತಾ ಹೋಗುತ್ತದೆ. ಕೆಲವೊಮ್ಮೆ ಅರ್ಧದಲ್ಲೇ ನಿಲ್ಲುವುದೂ ಉಂಟು, ಟಿಆರ್‌ಪಿ ಕಡಿಮೆಯಾದರೆ. ಈ ಸೀರಿಯಲ್ಲುಗಳಲ್ಲೂ ಕೂಡ ಮೂಢನಂಬಿಕೆ ಹರಡುವ ಪ್ರಸಂಗಗಳಿರುತ್ತವೆ. ಕೆಲವು ದೇವಿ ಮಹಿಮೆ ಸಾರುವ ಸೀರಿಯಲ್ಲುಗಳೂ ಇವೆ. ಸಾಮಾನ್ಯವಾಗಿ ಎಲ್ಲ ಸೀರಿಯಲ್ಲುಗಳೂ ಸಿನಿಮಾದಂತೆ ಒಂದು ಚೌಕಟ್ಟಿಗೆ ಒಳಪಟ್ಟಿರುತ್ತವೆ. ಕತೆಯ ಹಂದರವನ್ನು ಎಳೆಯುವುದಕ್ಕೆ ಇಲ್ಲಿ ಅವಕಾಶ ಹೆಚ್ಚು. ಚರ್ವಿತ ಚರ್ವಣದ ಸಂಭಾಷಣೆ. ಎಲ್ಲವೂ ತ್ರಿಕೋಣ ಪ್ರೇಮಕತೆಯ ಸುತ್ತ ಇರುತ್ತದೆ. ಪತ್ನಿಗೆ ಪತಿಯ ಬಗ್ಗೆ ಇರುವ ಸಂಶಯ, ಅಪನಂಬಿಕೆ, ಅತ್ತೆ ಸೊಸೆ ಮನಸ್ತಾಪ, ಒಟ್ಟಾರೆ ಸಂಬಂಧಗಳ ಸುತ್ತ ಕತೆ ಹೆಣೆದಿರುತ್ತಾರೆ. ಹೆಂಗಳೆಯರಲ್ಲಿ ಕಣ್ಣೀರು ತರಿಸುವ ದೃಶ್ಯಗಳೇ ಹೆಚ್ಚು. ಸೀರಿಯಲ್ಲುಗಳನ್ನು ನೋಡುವವರಲ್ಲಿ ಕೂಡ ಅವರೇ ಅಧಿಕ.

ಕೆಲವೊಂದು ಸೀರಿಯಲ್ಲುಗಳು ಅರ್ಥಾತ್ ಧಾರಾವಾಹಿಗಳು ಜನಪ್ರಿಯವಾಗಿರುತ್ತವೆ, ನಿಜವಾದ ಅರ್ಥದಲ್ಲಿ. ಅಂಥವು ವಿರಳ. ಇರುವ ಹತ್ತಿಪ್ಪತ್ತು ಚಾನೆಲ್‌ಗಳಿಗೆ ಧಾರಾವಾಹಿಗಳನ್ನು ಒದಗಿಸಬೇಕಲ್ಲ, ಅದೇನೂ ಸುಲಭವಲ್ಲ. ಈ ಧಾರಾವಾಹಿಗಳಿಂದಾಗಿ ನೂರಾರು ಕಲಾವಿದರು ಬೆಳಕಿಗೆ ಬಂದಿದ್ದಾರೆ. ಸೀರಿಯಲ್ಲುಗಳಲ್ಲಿ ಪಾತ್ರವಹಿಸಿ ಬದುಕು ಸಾಗಿಸುತ್ತಿದ್ದಾರೆ. ಚಿತ್ರೀಕರಣ ದಿನಕ್ಕೆ ಹನ್ನೆರಡು ಗಂಟೆಕಾಲ ಬೆಳಿಗ್ಗೆ ೯ರಿಂದ ರಾತ್ರಿ ೯ರವರೆಗೆ ನಡೆಯುತ್ತದೆ. ಕಲಾವಿದರ ಜನಪ್ರಿಯತೆ, ಪಾತ್ರದ ಮೇಲೆ ಸಂಭಾವನೆ ನೀಡುತ್ತಾರೆ ತಯಾರಕರು. ದಿನಕ್ಕೆ ೬೦೦ ರೂಪಾಯಿಗಳಿಂದ ೮೦೦ ರವರೆಗೆ ಸಂಭಾವನೆ ಕೊಡುತ್ತಾರೆ. ಜನಪ್ರಿಯ ನಟರಿಗೆ ಇಂತಿಷ್ಟು ಮೊತ್ತ ಎಂದು ನಿಗದಿಪಡಿಸುತ್ತಾರೆ. ಅದು ಸುಮಾರು ೨೦ ಸಾವಿರ ರೂ.ಗಳವರೆಗಿರುತ್ತದೆ. ಟೆಲಿವಿಷನ್ ಸೀರಿಯಲ್ಲುಗಳು ಮೂರು ಬಗೆ : (೧) ಪ್ರಾಯೋಜಿತ ಇಂಗ್ಲಿಷಿನಲ್ಲಿ ಸ್ಪಾನ್ಸರ್ಡ್. ಇದು ಟಿ.ವಿ. ಚಾನೆಲ್‌ನಲ್ಲಿ ಸ್ಲಾಟ್ ಪಡೆದುಕೊಂಡು, ಅಂದರೆ ಪ್ರದರ್ಶನದ ಅವಧಿಯನ್ನು ಪಡೆದು ಕೊಂಡು ತಯಾರಿಸುವ ಧಾರಾವಾಹಿ. ಇದರ ಸಂಪೂರ್ಣ ಹೊಣೆ ತಯಾರಕರದ್ದು. ಅಗತ್ಯವಾದ ಜಾಹೀರಾತುಗಳನ್ನು ಹೊಂದಿಸಿಕೊಳ್ಳುವುದು ತಯಾರಕರ ಹೊಣೆ. ಇವುಗಳಿಗೇ ಅಧಿಕ ಪ್ರಾಶಸ್ತ್ಯ. ಇದರಲ್ಲಿ ಚಾನೆಲ್‌ಗಳವರು ತಲೆಕೆಡಿಸಿಕೊಳ್ಳಬೇಕಾದ ಪ್ರಮೇಯವಿಲ್ಲ, ಅಗತ್ಯವಾದ ಸ್ಲಾಟ್ ಒದಗಿಸಿದರೆ ಮುಗಿಯಿತು. (೨) ಚಾನೆಲ್‌ನವರೇ ಒಪ್ಪಿಸುವ ಧಾರಾವಾಹಿ. ಇಂಥವುಗಳಿಗೆ ತಯಾರಕ ಹೊಣೆ ಏನಿರುವುದಿಲ್ಲ. ಚಾನೆಲ್‌ನವರು ಸಮ್ಮತಿಸುವ ಕತೆಯನ್ನು ಆಧರಿಸಿ, ಅವರು ಹೇಳಿದಂತೆ ಚಿತ್ರೀಕರಿಸಬೇಕು, ಅಷ್ಟೆ. ಇದಕ್ಕೆ ತಗಲುವ ಎಲ್ಲ ವೆಚ್ಚವನ್ನು ಕೂಡ ಚಾನೆಲ್‌ನವರೇ ವಹಿಸಿಕೊಳ್ಳುತ್ತಾರೆ. ಎಪಿಸೋಡ್‌ಗೆ ಇಂತಿಷ್ಟು ಎಂದು ಹಣ ನೀಡುತ್ತಾರೆ. (೩) ರಾಯಧನ ನೀಡಿಕೆ. ಇದು ಪ್ರಮುಖ, ಅಂದರೆ ಹೆಸರು ಗಳಿಸಿರುವ ನಿರ್ಮಾಪಕರಿಗೆ ಗೌರವಧನ ನೀಡಿ ನಿರ್ವಹಿಸುವಂಥದ್ದು. ಇದರ ಜವಾಬ್ದಾರಿಯನ್ನೆಲ್ಲ ಚಾನೆಲ್‌ನವರೇ ವಹಿಸಿಕೊಳ್ಳುತ್ತಾರೆ. ಇವೆಲ್ಲ ಚಾನೆಲ್‌ಗಳ ಮರ್ಜಿ, ಆರ್ಥಿಕ ಸ್ಥಿತಿ, ಜನಪ್ರಿಯತೆ ಮುಂತಾದವುಗಳ ಮೇಲೆ ಅವಲಂಬಿತ.

ಸಾವಿರಾರು ಕೋಟಿ ರೂ.ಗಳ ವಹಿವಾಟಿನ ಈ ಟೆಲಿವಿಷನ್ ಉದ್ಯಮ ಸಾವಿರಾರು ಕಲಾವಿದರುಗಳಿಗೆ, ತಾಂತ್ರಿಕ ವರ್ಗದವರಿಗೆ, ಇತರರಿಗೆ ಉದ್ಯೋಗ ಒದಗಿಸಿದೆ. ಪ್ರಾಯಶಃ ಐಟಿಬಿಟಿಯ ನಂತರ ಸೃಷ್ಟಿಯಾಗಿರುವ ಬೃಹತ್ ಉದ್ಯಮ ಇದು. ಭಾರತದ ಒಂದೊಂದು ಭಾಷೆಯಲ್ಲೂ ಮೂವತ್ತರಿಂದ ನಲವತ್ತು ಚಾನೆಲ್‌ಗಳಿವೆ. ಹತ್ತಿರ ಹತ್ತಿರ ಒಂದು ಸಾವಿರ ಚಾನೆಲ್‌ಗಳು ಇವೆ. ಇದರ ಜೊತೆಗೆ ಟಿ.ವಿ. ಕಾರ್ಯಕ್ರಮಗಳನ್ನು ಮನೆಮನೆಗೆ ಒದಗಿಸುವ ಕೇಬಲ್ ನೆಟ್‌ವರ್ಕ್‌ಗಳ ಜಾಲ ಬೇರೆ ಇದೆ. ಒಂದು ಅಂದಾಜಿನ ಪ್ರಕಾರ ದಕ್ಷಿಣ ಭಾರತದಲ್ಲಷ್ಟೇ ೨೦೧೬ರ ವೇಳೆಗೆ ಮನರಂಜನಾ ಉದ್ದಿಮೆಯ ವಹಿವಾಟು ೨೩,೯೦೦ ಕೋಟಿ ರೂಪಾಯಿಗಳಿಂದ ೪೩,೬೦೦ ಕೋಟಿ ರೂಪಾಯಿಗಳಿಗೆ ಹೆಚ್ಚುವ ಸಂಭವವಿದೆ. ಇದರಲ್ಲಿ ಟೆಲಿವಿಷನ್ ಪಾಲು ೧೩,೪೬೦ ಕೋಟಿ ರೂಪಾಯಿಗಳು ಎಂದಾಗ ಇಡೀ ದೇಶದಲ್ಲಿ ಎಷ್ಟಿರಬಹುದು ಊಹಿಸಿಕೊಳ್ಳಿ. ಸಿನಿಮಾ ಉದ್ಯಮದಂತೆಯೇ ಟೆಲಿವಿಷನ್ ಉದ್ಯಮ ಕೂಡ ಏಳುಬೀಳುಗಳನ್ನು ಕಾಣುತ್ತಿರುವಂಥದ್ದು. ಸಾಕಷ್ಟು ಚಾನೆಲ್‌ಗಳು ನಷ್ಟದಲ್ಲಿಯೇ ಓಡುತ್ತಿರುವುದು ಉತ್ಪ್ರೇಕ್ಷೆ ಏನಲ್ಲ. ದೊಡ್ಡ ಮೊತ್ತದಲ್ಲಿ ಕಪ್ಪು ಹಣ ತೊಡಗಲು ಮನರಂಜನಾ ಉದ್ಯಮ ಒಂದು ಹೆಬ್ಬಾಗಿಲು.

***(ಮುಂದುವರಿಯುವುದು)***

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯, ೬ನೇ ಕ್ರಾಸ್
ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ
ಬೆಂಗಳೂರು – ೫೬೦ ೦೮೫

# ನಾಳೆ ಹೇಳುವ ಕಥೆ




ನನ್ನ ಬಾಯಿ ಹೈರಾಣಾಗತೊಡಗಿದಳು. ಬಾಪಾ ಮ್ಯಾಲಿಂದ ಮ್ಯಾಲ ಕುಡ್ದು ಬರೋದು, ಏನೋ ಸಂಕಟದಾಗ ಅದ್ದಿದವನಾಂಗ ಇರೂದು... ಮಾಡತಿದ್ದ. ಬಾಯಿ ಮೊದಲಿನ ಹಾಂಗ ಉಳೀಲಿಲ್ಲ. ಎಂಥದೋ ಭಯ. ನಗಿಯಿಲ್ಲ ಜಿಗಿದಾಟವಿಲ್ಲ. ಹಾಡಿನ ಗುನುಗಿಲ್ಲ. ಕಥಿಯ ಜೋಲಿಯಿಲ್ಲ. ನನಗೂ ರೆಕ್ಕೆ ನೊಂದ ಹಕ್ಕಿಯ ಸ್ಥಿತಿಯಾಗಿತ್ತು. ಬಾಪಾ ಸರಿಗಿದ್ದ ನಾಕ ದಿನ ಎಲ್ಲ ಸರಿ ಇರೂದು. ಅಂವ ಏನಾರ ಈಟ ಅಂದ್ರ ಈಟುದ್ದ ಮಾಡಿ ಬಾಯಿ ಮೂಲಿ ಹಿಡಿಯೋಳು. 'ಹಂಗ್ಯಾಕ ಬಾಯಿ, ನಮ್ಮ ಬಾಪಾನ ಸ್ವಭಾವ ನಮಗೊತ್ತಿಲ್ಲದ್ದ?' ಅಂತ ನಾನೇ ಹಿರೀ ಮನಷ್ಯಾನ ಹಂಗ ಆಡಿದ್ದೆ. "ಇಲ್ಲ ರಾಕೂ, ನಾ ಎಲ್ಲಾ ಬಿಟ್ಟ ಬಂದಾಕಿ. ಯಾಕೋ ಇವನ ವರ್ತನಾ ನೋಡಿದ್ರ ದಿಗಿಲಾಗ್ತದ. ಇದು ನನ್ನ ಮಾನ ಮರ್ಯಾದಿ ಪ್ರಶ್ನೆ ಅದ" ಅಂತಿದ್ದಳು. ನನ್ನ ಬಾಯಿಯ ಚಹರೇನ ಬದಲಾಗತೊಡಗಿತ್ತು. ಹಲ್ಲನೋವಿಗೆ ಗುಳಗಿ ನುಂಗಿ ನೋವು ಮರಿಯೋ ದಿಖಾವಾ ನಡಿಯುತ್ತಲ್ಲ ಹಾಂಗ ಇದ್ದಳು.

**ಡಾ॥ ವಿನಯಾ ಒಕ್ಕುಂದ**

ನಾನು ರಾಕೇಶ, ಗುರುತಾಗಲಿಲ್ವಾ? ನಮ್ಮೂರ ಸರ್ಕಾರಿ ಶಾಲೇಲಿ ಏಳನೇ ಇಯತ್ತೆಯಲ್ಲಿದ್ದೇನಲ್ಲ. ಅದೇ, ಹೋದ ವರ್ಷ ಪ್ರತಿಭಾ ಕಾರಂಜಿಯಲ್ಲಿ ರಾಜ್ಯಮಟ್ಟದ ಪ್ರೈಜ಼್ ತಗೊಂಡಿದ್ದಕ್ಕೆ ನಮ್ಮ ಸರ್ ನನ್ನ ಫೋಟೋ ಪೇಪರಿಗೆ ಹಾಕಿಸಿದ್ರಲ್ಲ. ನಮ್ಮ ಆಟ್ಯಾಪಾಟ್ಯಾ ತಂಡದ ಕ್ಯಾಪ್ಟನ್ ನಾನೇ. ಗುರುತಾಯಿತಾ ? ಈ ವರ್ಷ ನಾನು ಪ್ರತಿಭಾ ಕಾರಂಜಿ ಸ್ಪರ್ಧೆಗೆ ಹೋಗಲೇ ಇಲ್ಲ. ಸರ್‌ಗಳೆಲ್ಲ ಎಷ್ಟು ಹೇಳಿದ್ರೂ ನಾ ಹೋಗ್ಲಿಲ್ಲ. ನನಗೆ ಶಾಲೆಗೆ ಹೋಗಲೂ ಮನಸ್ಸಿಲ್ಲ. ಅದೇ, ನನ್ನ ಬಾಯಮ್ಮ ಆಸ್ಪತ್ರೆಯಲ್ಲಿದ್ದಾಳೆ. ಏನ್ಮಾಡ್ಲಿ ? ಬಾಯಿ ಯಾರು ಗೊತ್ತಿಲ್ವಾ ? ಈಗ ಕೆಲ ತಿಂಗಳ ಹಿಂದೆ ನಮ್ಮೂರಿನ ಬೆಳಗಿನ ಹಾಲ್ಟಿಂಗ್ ಬಸ್ಸಿಗೆ ಕೈಲಿ ವ್ಯಾನಿಟಿ ಬ್ಯಾಗು ಹಿಡ್ದು, ವಾಚು ಕಟ್ಟಿಕೊಳ್ತಾ, ಜಡೆಗೆ ಕ್ಲಿಪ್ಪು ಸಿಕ್ಕಿಸಿಕೊಳ್ತಾ ಓಡುತ್ತಿದ್ದಳಲ್ಲ, ಕಂಡಕ್ಟರ ಭಾಗ್ಯವತಿ ಸುತ್ರಾವೆ. ಅವಳೇ ನನ್ನ ಬಾಯಿ. ನಾನು ಅವಳ ಮಗ ರಾಕೇಶ.

ಆಗೆಲ್ಲ ನೀವು, ನಿಂತವರು, ನಿಂತು ಕುಂತವರು, ಕುಂತು ನನ್ನ ಬಾಯಮ್ಮನನ್ನು ನೋಡುತ್ತಿದ್ದಿರಿ. 'ಆ ಕಂಡಕ್ಟರಮ್ಮನ ಕಾಣಿ. ಹೆಂಗಸ್ರು ನೌಕರಿ ಮಾಡಿದ್ರೂ ಹಂಗs ಬಾಳೇವು ಮಾಡ್ಬೇಕು' ಅಂತ ತಂತಮ್ಮ ಮನೇ ಹೆಣ್ಮಕ್ಕಳಿಗೆ ಹೇಳದವರು ಯಾರಾದ್ರೂ ಇದ್ದಾರಾ ? ದೊಡ್ಡವರೆಲ್ಲ ನನ್ನ ಬಾಯಿಯ ಚಾಲಾಕನ್ನು, ಹೆಂಗಸರೆಲ್ಲ ನನ್ನ ಬಾಯಿಯ ಚಂದದ ಗುಟ್ಟನ್ನು ಮಾತಾಡಿಕೋತಿದ್ದಿರಲ್ಲ. ಪಕ್ಕದ್ಮನೆ ವಸಂತ ಆಂಟಿ, ಆ ಕಿಶೋರನ ಮಮ್ಮಿ ಇವರೆಲ್ಲ 'ಏ ನಿನ್ನ ಮಮ್ಮಿ ಯಾವ ಸೋಪ್

ಹಚ್ತಾರೋ ? ಯಾವ ಕ್ರೀಂ ಹಚ್ತಾರೋ ?' ಅಂತೆಲ್ಲ ಕೇಳ್ತಿದ್ದರು. ಒಮ್ಮೆ ನನ್ನ ಬಾಯಿಗೂ ಹೇಳಿದ್ದೆ. ಅವಳಿಗೆ ಕೋಪ ಕುಣಿದದ್ದೆಂದರೆ... "ಹೇಳೋ ರಾಕು ಅವರಿಗೆ, ಮುಂಜಾನಿ ನೀರ್ ಕಾಣ್ಸಿದ ಮಕಕ್ಕ ರಾತ್ರೀನೇ ನೀರ್ ಕಾಣ್ಸಬೇಕಂತ. ಬೆವರಿನ ಅಂಟಿನ ಮ್ಯಾಲ ಹತ್ತೂರಿನ ಧೂಳು ಕುಂತು ಮಕ ಹಣ್ಣು ಕಳತಾಂಗ ಕಳತ್ರ ಇನ್ನೂ ನಯ್ಸ ಆಗ್ತದಂತ ಹೇಳೋ" ಅಂತ ಸಿಟ್ಟಿನಿಂದ ಹೇಳಹೇಳ್ತಾನೆ ನಕ್ಕುಬಿಟ್ಟಿದ್ದಳು. ನನ್ನ ಬಾಪಾನಂತೂ ತಾಸುಗಟ್ಟಲೆ ನಕ್ಕಿದ್ದ. ಆಮೇಲೆ ಮಾತ್ರ, "ಬಾಗೂ ಹೇಳ್ದಾಂಗ ಹೇಳ್‌ಗೀಳಿಯೋ ಈಶೂ. ಬ್ಯಾಡಾ ಮಗನ. ಮಂದಿ ಸುಕಾಸುಮ್ಮನ ಬಾಳಸಗೊಡವಲ್ಲರು. ಇನ್ನ ವಿರೋಧ ಕಟ್ಟಕಂಡು ಏನಾಗ್ಬೇಕಾಗೇತಿ ? ಯಾರಾದ್ರೂ ಮನಿ ವಿಷ್ಯ ಕೇಳಿದ್ರ ನಂಗೊತ್ತಿಲ್ಲಾರಿ ಅಂತಷ್ಟs ಹೇಳು. ಹೆಚ್ಚಾಗಿ ಯಾರ್ದಾರ ಮನಿ ಒಳಗ ಹೋಗಾಕ ಹೋಗಬ್ಯಾಡ" ಅಂದಿದ್ದ. ನನ್ನ ಬಾಪಾನ ಹಣಿಗಿ ನಿರಿಗಿಗಟ್ಟಿತ್ತು. ಅವನಿಗೆ ಬೇಸರಾದಾಗ ಯಾವಾಗಲೂ ಆಗುತ್ತಲ್ಲ ಹಾಂಗ ಕಣ್ಣು ಸಣ್ಣಾಗಾಗಿತ್ತು. ಕೈ ನನ್ನ ಬೆನ್ನು ಸವರುತ್ತಿತ್ತು. ಬಾಪಾಗೆ ತಮ್ಮೂರು ನೆನಪಾಗಿತ್ತೋ ಏನೋ. ಆಗಾಗ ಆ ಊರು, ಹೊಲ, ಗುಡ್ಡದಾಗಿನ ಮಠ, ಕೊಟ್ಟಿಗಿಯಾಗಿನ ದನ, ಅವನಲ್ಲಿದ್ದಾಗ ಸಾಕಿದ್ದ ನಾಯಿಮರಿ... ಎಲ್ಲ ಸುದ್ದಿ ಹೇಳ್ತಿರತಾನ. ಆಗ ನಾನೂ ಬಾಯಿ ಸುಮ್ಮಗ ಕುಂತ ಆ ಕಥಿ ಕೇಳ್ತಾ ಇರ್ತಿದ್ವಿ. ಆಗ ಬಾಪಾನ ಕಣ್ಣೂ ನೀರಾಡುತ್ತಿತ್ತು. ನನ್ನ ಬಾಯಿ ಬಾಪಾ ತಮಗ ತಾವs ಮದ್ವಿ ಮಾಡ್ಕಂಡು ಆ ಊರ ಬಿಟ್ಟು ಇಲ್ಲಿಗೆ ಬಂದಿದ್ದಂತೆ. ಎಲ್ಲರ ಮನಿಗೋಳಾಂಗ ನಮ್ಮ ಮನಿಗಿ ಸಂಬಂಧಿಕರು ಯಾರೂ ಬರೋದು ಅಪರೂಪ. ಅಪರೂಪ ಏನ್ಬಂತು ? ಬರಾಂಗೇ ಇಲ್ಲ. ನನಗೂ ಅಜ್ಜ-ಅಜ್ಜಿ ಕಾಕಾ ಎಲ್ಲ ಅದಾರ. ಆದ್ರ ಯಾರೂ ನಮ್ಜೋಡಿ ಮಾತಾಡಾಂಗಿಲ್ಲ. ಬಾಯಿ-ಬಾಪಾ ಇಬ್ಬರದೂ ಬೇರೆ ಬೇರೆ ಜಾತಿಯಂತೆ. ಅದಕ್ಕೇ ಅವರನ್ನ ಕೆಟ್ಟವರನ್ನಾಗಿ ಮಾಡಿ ಎಲ್ಲರೂ ದೂರ ಆಗ್ಯಾರಂತ. ಆ ನೋವು ನನ್ನ ಬಾಯಿನ್ನ ಬಾಪಾನ್ನ ಹುರಿದು ತಿಂತದ. ಬಾಯಿಯಂತೂ ಒಮ್ಮೊಮ್ಮೆ ದಿಕ್ಕೆಟ್ಟು ಗೋಳೋ ಅಂತಿರ್ತಿದ್ಲು. "ನಮ್ಮವ್ವ ನಮ್ಮಪ್ಪಗ ನಾ ಏನ ತಲಿಮ್ಯಾಲ ಕಲ್ಲ ಹಾಕಿದ್ನಾ? ನಾ ಹೊಟ್ಟಿಲದೀನಿ ಅಂದ್ರೂ, ಮಗಾ ಹುಟ್ಯಾನ ಅಂದ್ರೂ ಬಾ ಅಂದಿಲ್ಲ. ತಾವರs ಬಂದ ನೋಡಿಲ್ಲ. ನನ್ನ ಪಾಲಿಗವ್ರು ಇದ್ರೇನ ಸತ್ರೇನ?" ಅಂತ ಧುಮಲಗುಡುತ್ತಿದ್ದಳು. ಮತ್ತೆ ಒಮ್ಮೊಮ್ಮೆ, "ನಮ್ಮಪ್ಪಗ ಹುಶಾರಿಲ್ಲಂತ ಸರ್ಕಾರಿ ದವಾಖಾನ್ಯಾಗ ಒಯ್ದು ಇಟ್ಟಾರಂತ..." ಅಂತ ಗೋಳಾಡತಿದ್ಲು. 'ನೀ ಅಳಬ್ಯಾಡಾ ಮಾರಾಯ್ತಿ. ಹೋಗಿ ನೋಡ್ಕಂಬರಾಮು ಬಾ' ಅಂತ ಬಾಪಾ ಹೇಳಿದ ನಂತರ ಅವನ ಮ್ಯಾಲ ಹರಿಹಾಯೋಳು. "ಯಾಕs ಆರಾಂ ಇರಾಕ ಒಲ್ಲಂತಿಯೇನ? ಅಲ್ಲೀ ತನಾ ಹೋಗಿ ಅವರ ನಿಷ್ಠುರಕ್ಕ ತಾಚಾರಕ್ಕ ಈಡಗಾಯ ಆಗೂಣಂತಿಯೇನು? ಖರೇನ ಹುಚ್ಚ ಅದಿ ನೀ. ನಾ ಒಳ್ಳೇ ನೀ ಶಾಣ್ಯಾ ಅಂತ ಬೆನ್ನಹತ್ತಿ ಬಂದ್ನೆಲಾ" ಅಂತಿದ್ಲು. ಹೀಂಗ ಕೈಯಾಗ ಪುಸ್ತಕ ಹಿಡ್ದು ಕುಂತಿದ್ರೂ ಈ ಎಲ್ಲ ಸಮಾರಾಧನ ನನ್ನ ಸುತ್ತ ಹರಿದಾಡತಿತ್ತು. ಯಾಕಂದ್ರ ಮನಿಯಾಗ ಬಾಯಿ-ಬಾಪಾ ಕೂತು ಮಾತಾಡೋದs ರಾತ್ರೀಕ್ಕ. ಬಾಯಿ ಮದ್ವಿ ಆದ್ಮೇಲೆ ಕಂಡಕ್ಟರ ನೌಕರಿಗೆ ಹೋಗಿದ್ಲಂತ. ಇಲ್ಲಾಂದ್ರ ಬಾಪಾನ ಕಂಪನಿ ದುಡಮಿ ಪಗಾರ ಬಂದs ಆಗಿ ಇನ್ನೂ ತ್ರಾಸ ಇರ್ತಿತ್ತೇನೋ.

ಆದ್ರ ನನ್ನ ಬಾಪಾ ಭಾಳ ಒಳ್ಳೇವ ಅದಾನ. ಸಂಜಿ ನಾಲ್ಕಕ್ಕ ಮನಿಗಿ ಬಂದ ಅಂದ್ರ ಮನಿ ಕೆಲ್ಸಾನರಾ ಮಾಡ್ತಾನ. ಇಲ್ಲಂದ್ರ ಮೊಬೈಲ್ ರಿಪೇರಿ, ಪಂಪ್‌ಸೆಟ್ ರಿಪೇರಿ, ವೈರಿಂಗ್ ಕೆಲ್ಸ ಹಿಂಗ ಏನಾರ ಮಾಡ್ತಿರತಾನ. ದಿನಾ ಏನಾರ ಊರ ಮಂದಿ ಬುಲಾವ್ ಇದ್ದೇ ಇರ್ತದ. ನನಗ ಬಾಪಾನ ಜೋಡಿ ಇರಾಕ ಭಾಳ ಆಸೆ ಆಗ್ತದ. ಆದ್ರೆ ಬಾಪಾ, "ಈಶೂ ಈಗ ಬಂದ್ನಿ ಮಗಾ. ಏನಾರ ನಾಕ ಕಾಸ ಆಗ್ತಾವ. ಎರಡ ದಿನದ ಸಂತಿಗಾಕ್ಕೇತಿ" ಅಂತ ಗಂಟಲು ಕಟ್ಟಿ ಹೇಳುವಾಗ, ಅವನನ್ನ ಹಿಡಿದಿಡಾಕ ಮನಸ್ಸಾಗ್ತಿರಲಿಲ್ಲ. ಬರ್ತಾ ಬರ್ತಾ ನಂಗೂ ಎಲ್ಲಾ ತಿಳ್ಯಾಕ ಹತ್ತಿತ್ತು. ಬಾಯಿ ಹೇಳತಿರತಾಳಲ್ಲ, 'ಯಾರಿಲ್ಲದ ಕೂಸುಗೊಳು ಶಾಣ್ಯಾ ಇರ್ತಾವ' ಹಾಂಗ. ನಾನೂ ಶಾಣ್ಯಾ ಆಗತೊಡಗಿದೆ. ಬಾಪಾನ ಕಟಪಿಟಿ, ನನ್ನ ಬಾಯಮ್ಮನ ಒದ್ದಾಟ ಎಲ್ಲಕ್ಕೂ ನಾನೇ, ನನ್ನ ಭವಿಷ್ಯವೇ ಮೂಲವಾಗಿತ್ತು. ಬಾಯಿ ಈಗ್ಲೂ ನನ್ನ ಬಿಟ್ಟ ಹೋಗೂಮುಂದ ವಿಲಿವಿಲಿ ಅಂತಿರ್ತಾಳ. ನಾ ಕೂಸಿದ್ದಾಗ ಪಕ್ಕದ್ಮನಿ ಕಾಶವ್ವತ್ತಿ ಹತ್ರ ಬಿಡತಿದ್ದಳಂತ. ಕಾಶವ್ವತ್ತಿ ಈಗ್ಲೂ 'ನನ್ನ ಮಲಿ ಕುಡ್ದ ಮಗ, ಶಾಣ್ಯಾ ಅದಾನ' ಅಂತs ಅಪ್ಪಿಕೋತಾಳ. ಬಾಯಿ ಕಾಶವ್ವತ್ತಿ ಮುಂದ ಏನೇನೋ ಹೇಳಿಕೊಂಡು ಕಣ್ಣೀರಾಕುವಾಗ, "ಇರ್ಲ ಬಿಡ ಭಾಗೀ, ಧೈರ್ಯ ತಗೋ. ಮಲಿ ಉಣ್ಸೋ ಕೂಸನ್ನ ಎತ್ತಿಟ್ಟು ನೌಕರಿಗಿ ನಡದಾಕಿ ನೀ ಈಗ ಧೈರ್ಯಗೆಟ್ಟರ ಹ್ಯಾಂಗ ಮಾರಾಯಳ ? ಅದೇನೋ ಅಂತಾರಲ್ಲ, ನಗೋರ ಮುಂದ ಜಾರಿಕೊಂಡ ಬಿದ್ದರಂತ.



# ಈ ಇಲ್ಲಿ




ಇಲ್ಲಿ ತಟ್ಟೆಯಲ್ಲಿ ಕನಸುಗಳನ್ನು ಬಿತ್ತಲಾಗುತ್ತದೆ
ಬೆಳೆ ಬರುವ ಮೊದಲೇ ಕೊಯ್ಯಲಾಗುತ್ತದೆ

ಇಲ್ಲಿ ಕಣ್ಣುಗಳಲ್ಲಿ ಬಣ್ಣಗಳನ್ನು ತುಂಬಲಾಗುತ್ತದೆ
ಚಿತ್ರ ಮೂಡುವ ಮೊದಲೇ ನೀರೆರಚಲಾಗುತ್ತದೆ

ಇಲ್ಲಿ ಅಂಗೈಯಲ್ಲಿಯೇ ಆಕಾಶ ತೋರಲಾಗುತ್ತದೆ
ಹಿಡಿಯಲು ಓಡಿದರೆ ಕಾಲೆಳೆದು ಬೀಳಿಸಲಾಗುತ್ತದೆ

ಇಲ್ಲಿ ಪಕ್ಷಿಗಳಿಗೆ ಕಾಳುಗಳನ್ನೆರಚಲಾಗುತ್ತದೆ
ಕಾಳು ತಿನ್ನುವ ಮೊದಲೇ ಚುಂಚನ್ನೇ ಕತ್ತರಿಸಲಾಗುತ್ತದೆ

ಇಲ್ಲಿ ಕಣ್ಮುಂದೆ ಭಕ್ಷ್ಯಗಳ ತಟ್ಟೆಗಳನ್ನಿರಿಸಲಾಗುತ್ತದೆ
ಉಣ್ಣುವ ಮೊದಲೇ ತುತ್ತನ್ನು ಕಸಿಯಲಾಗುತ್ತದೆ

ಇಲ್ಲಿ ಕೆಲವರ ಸೈಕಲ್ ಕಾರಾಗುತ್ತದೆ, ಚಕ್ಕಡಿ ವಿಮಾನವಾಗುತ್ತದೆ
ತೆವಳುತ್ತಿದ್ದ ಕಂಬಳಿ ಹುಳು ದಿಢೀರನೆ ಚಿಟ್ಟೆಯಾಗುತ್ತದೆ

ಕೇಳಬೇಕಾದವರು ಮಾತ್ರ ಸೈಕಲ್ ಒರೆಸುತ್ತಲೇ ಇದ್ದಾರೆ
ಚಕ್ಕಡಿ ಹೊಡೆಯುತ್ತಲೇ ಇದ್ದಾರೆ, ಕಣ್ಣಿದ್ದೂ ಕುರುಡರಾಗಿದ್ದಾರೆ

ಕಿವಿಯಿದ್ದೂ ಕಿವುಡರಾಗಿ, ಅಂಗಾಂಗಗಳಿದ್ದೂ ಅಂಗವಿಕಲರಾಗಿ
ಬದುಕುತ್ತಿದ್ದಾರೆ, ಬದುಕನ್ನು ಸವೆಸುತ್ತಲೇ ಇದ್ದಾರೆ



ಹಾಂಗಾಗಬೇಕೇನ ನಿಮ್ಮ ಬಾಳುವಿ ?" ಅಂತ ದಬಾಯಿಸೋ ಧಾಟೀಲೆ ಸಮಾಧಾನಿಸ್ತಿದ್ಲು.

ಬಾಯಿ ನಾನು ಬಾಪಾ ಒಬ್ಬರಿಗೊಬ್ಬರು ಭಾಳ ಹಚ್ಚಕಂಡಿದ್ವಿ. ಬಾಯಿ ಬರೋದು ಒಂದೀಟು ತಡ ಆದರೂ ನಾನೂ ಬಾಪಾ ಬಸ್‌ಸ್ಟ್ಯಾಂಡಿಗೆ ಹೊಂಟಿರತಿದ್ವಿ. ಬಾಪಾ ನಮಗಿಬ್ಬರಿಗೂ ಬಹಳ ಮುದ್ದು ಮಾಡ್ತಿದ್ದ. ನನ್ನ ಕೈಕಾಲು ತಿಕ್ಕಿ ಮಲಗಿಸ್ತಿದ್ದ. ಬಾಯಿ ಬಸ್ಸಿನ ಧಡಕಿಗೆ ನುಗ್ಗಾಗಿ ಬರುವಾಗ, ಆಕೀಗೂ ಕಾಲು ತಿಕ್ಕಿ ಬಿಸಿನೀರು ಹಾಕ್ತಿದ್ದ. ಬಾಯಿ, ಕೆಟ್ಟ ರಸ್ತೇಕ್ಕ, ಡ್ರೈವರಗ, ಪಂಚಾಯತಿಗ ಕಡೀಗ ಪ್ರಧಾನಮಂತ್ರಿ ತನಾನೂ ಬೈಗುಳ ಉದರಸುವಾಗ 'ಈಶೂ ನಿಮ್ಮವ್ವನ ಪಾರಾಯಣ ಸುರು ಆಯ್ತುಪಾ' ಅಂತ ಚ್ಯಾಷ್ಟಿ ಮಾಡ್ತಿದ್ದ. ನನ್ನ ಬಾಪಾ ಭಾಳ ಬಾಳೇವಂತ ಅದಾನಂತ ಮಂದಿ ಮಾತಾಡತಿರತಾರ. ಇಲ್ಲಂದ್ರ ಖೋಲಿ ಹಿಡ್ಯಾಕೂ ಆಗದ ಸ್ಥಿತೀಲಿ ಈ ಊರಿಗೆ ಬಂದ್ರವ್ರ ಈಗ ಜಾಗೆ ಹಿಡ್ದು ಮನಿ ಹಾಕ್ಸಾಕಾದೀತ ? ನಮ್ಮದು ತಗಡ ಶೀಟಿನ ಮನೀನ ಖರೆ. ಆದ್ರ ನಮ್ಮ ಮನಿ ಹಾಂಗ ಯಾರ ಮನೀನೂ ಇಲ್ಲ. ನನ್ನ ಬಾಯಿಗೆ ಎಲ್ಲಾ ನೀಟ ಇರ್ಬೇಕು. ಇಲ್ಲಂದ್ರ ಅರ್ಧ ರಾತ್ರೀಲರ ಎದ್ದು ಹೊಂದಿಸಿಡಾಕ, ಬಚ್ಚಲ ತಿಕ್ಕಾಕ ಸುರು ಹಚ್ತಾಳ. ಅದ್ಕಽ ನಾನು ಬಾಪಾ ಆದಷ್ಟು ಮನಿ ಸರೀಗಿಡ್ತೇವಿ. 'ನಿಂಗ ಮುನ್ಸಿಪಾಲ್ಟಿ ನೌಕ್ರೀನ ಭಾಳ ಸೂಟಾಗಿರ್ತಿತ್ತ ಬಿಡು' ಅಂತ ಬಾಪಾ ನಗತಿದ್ದ.

ಆದ್ರೀಗ, ಬಾಪಾನ ಮುಕದಾಗ ನಗೀನ ಸುರುಟೋಗೇತಿ. ನಮ್ಮನಿ ಕಣ್ಣಿಟ್ಟ ನೋಡೂ ಹಾಂಗಿಲ್ಲ. ನನ್ನ ಬಾಯೀನ್ನ ಆಸ್ಪತ್ರೆಯಾಗಿಟ್ಟಾರ. ಅದೂ ಹುಬ್ಬಳ್ಳಿಯಾಗ. ಆಕೀಗ ಬೇಹೋಶ್ ಆಗ್ಯಾದ. ಒಮ್ಮೊಂದೊಮ್ಮಿಲೆ ಯಾಕ ಹಂಗಾತು ? ಅಂತ ಎಲ್ರೂ ಕೇಳ್ತಾರ. ಬಾಪಾನೂ 'ಒಮ್ಮಿಕಿಲೆ ಹಿಂಗಾತು' ಅಂತಽ ಹೇಳ್ತಾನ. ಅಂವ ಸರೀ ಗಮನಿಸಿಲ್ವೋ ಅಥ್ವಾ ಮುದ್ದಾಂ ಹೇಳಾಕತ್ತಾನೋ ತಿಳೀವಲ್ದು. ಹೆಚ್ಚುಕಮ್ಮಿ ದೀಡ ವರ್ಷಾತು. ನನ್ನ ಬಾಪಾಗ ಏನಾತೋ ಏನೋ. ಅಂವ ಬಾಯಿ ಮ್ಯಾಲ ಸಂಶಯ ಸುರುವಿಟ್ಟ. ಬಾಯಿ ನಕ್ಕಂತ ಇದ್ದರೂ ಒಂದ ಅನ್ನಾಂವ. ಯಾಕಬಿಡು ಅನ್ನಿಸಿಕಳಾದು ಅಂತ ಗಪ್ಪಗಿದ್ರೂ ಒಂದ್ ಅನ್ನಾಂವಾ. ಈ ಸಂಶಯದ ಬೀಜ ಅಗಿಯಾಕ ನಾನೂ ಬಾಯಿ ಭಾಳ ಯತ್ನ ಮಾಡಿದ್ವಿ. ಅದರ ಮೂಲ ಪಡಾವು ನಮಗ ಹತ್ತಲಽ ಇಲ್ಲ. ಬಾಪಾ ಬಾಯೀನ್ನ ಕಣ್ತಪ್ಪಿಸಿ ಆಕಿ ಡಿಪೋಕ್ಕ ಹೋಗೋದು, ಆಕಿ ಡ್ಯೂಟಿ ಯಾವ ಡ್ರೈವರ ಸಂಗಾಟ ಐತಿ ಅಂತ ತಲಾಶ್ ಮಾಡೋದು, ಮಾಡಲಾಕ ಸುರುವಿಟ್ಟ. ಬಾಯಿಗೆ ಸತ್ತಾಂಗ ಆಗಾಕ ಹತ್ತಿತು. ಜೊತಿ ಮಂದಿ ಹಿಂದಿಂದ ಟಾಂಟ ಮಾತಾಡೂದು, ನಗೂದು ಮಾಡತಿದ್ರಂತ. ಬಾಪಾನ ಮನಸಿನ್ಯಾಗಿನ ಸಂಶಯದ ಮಡ್ಡ ತೊಳ್ಯಾಕ ಬಾಯಿ ಭಾಳ ತ್ರಾಸ ತಗೊಂಡ್ಲು. ಆದಷ್ಟು ಸೀನಿಯರ ಡ್ರೈವರಗೋಳ ಜೋಡಿ ಡ್ಯೂಟಿ ಹಾಕಿಸಿಕೋತಿದ್ಲು. ಅಪ್ಪಿತಪ್ಪಿ ಅದಾಗಿಲ್ಲ ಅಂದ್ರ ಕೈ ಕಾಲು ನಡುಕ ಬರೂದಂತ. ಡ್ಯೂಟಿ ಮಾಡಾಕೂ ಆಗದ ಹಾಂಗ ಆಗತಿತ್ತಂತ. 'ಯಾಕೋ ರಾಕು, ಸಮಾಧಾನ ಅನ್ನೂದ ಇಲ್ಲದಂಗಾಗೇತಿ' ಅಂತ ಕಣ್ಣೊರೆಸಿಕೋತಿದ್ಲು. ನಾ ಸಾಲಿ ಅಭ್ಯಾಸ ಬಿಟ್ಟು ಬಾಯಿನ್ನ ಸಮಾಧಾನ ಮಾಡ್ಸೂದ ಖಾಯಂ ಆಗಾಕ ಹತ್ತಿತು. ಮೊದಮೊದಲು ಬಾಯಿ ಬಾಪಾನ ಕೂಡ ರುದ್ರಕಾಳಿ ಹಂಗ ಜಗಳಾ ತಗೀತಿದ್ಲು. ಸಿಟ್ಟು ತಡೀಲಾರ್ದ ಎದಿ ಎದಿ ಗುದ್ದಕೋತಿದ್ಲು. ಬಾಪಾನ ಬೆನ್ನಿಗೂ ಗುದ್ದಿದರೆ ಗುದ್ದಿದಳೇ. ಆದ್ರ ಬಾಪಾ ಮಾತ್ರ ಎಂದೂ ಕೈಯೆತ್ತಿದ್ದಿಲ್ಲ. ಬಾಯಿಗಲ್ಲ, ಅಂವ ನನಗೂ ಕೈಯೆತ್ತಿದ್ದಿಲ್ಲ. ಬಾಯಿ ಬಾಪಾಗ ಅಷ್ಟ ಹೆದರೂ ಕಾರಣವೇನೂ ನನಗೆ ಕಾಣುತ್ತಿರಲಿಲ್ಲ. ಒಮ್ಮೊಮ್ಮೆ ಬಾಯಿಯ ರಾದ್ಧಾಂತದಿಂದ ಮನಿ ಕೀಸರಿಡುತ್ತಿತ್ತು. ಮೈಮ್ಯಾಲ ಬಂದವರಾಂಗ ಚೀರತಿದ್ದಳು. "ನಾ ನೌಕರಿ ಮಾಡಕ ಒಲ್ಲೆ ಅಂದರ ಒಲ್ಲೆ. ನಾ ಹಾದರಗಿತ್ತಿ ಕಂಡಾಂಗ ಕಾಣತೀನೇನ ನಿನ ಕಣ್ಣಾಗ ? ತಾಳಿ ಕಟ್ಟೊ ಮುಂಚೆ ನಿನ್ನ ಬೆನ್ನ ಹತ್ತಿ ಬಂದಿದ್ದರ ಫಲಾ ಉಣ್ಣಸಾಕ ಹತ್ತಿಯೇನು ? ನಿಮ್ಮವ್ವ ಗರತಿ ಗಂಗವ್ವ. ನಿನ್ನ ಅಕ್ಕ ತಂಗೇರು ಸುದ್ದುಳ್ಳಾವ್ರು. ನಾ ಮಾತ್ರ ಹ್ಯಾಂಗ್ಯಾಂಗೋ ಕಾಣಾಕತ್ತೀನಿ ಅಲ್ಲ ?" ಬಾಯಿಯ ಕೂಗಿಗೆ ನನ್ನ ಜೀವ ತಪರಾಡಿಸ್ತಿತ್ತು. ನಾ ಹೆದರಿ ಮೂಲಿ ಸೇರಿ ಅಳತಿದ್ದೆ. ಅದು ಹ್ಯಾಂಗೋ ದೈನಾಸ ಬಿಟ್ಟು ಬಾಪಾನೇ ಆಕೀನ್ನ ಸಮಾಧಾನ ಮಾಡ್ತಿದ್ದ. ಬಾಯಿ ದೆವ್ವ ಬಿಟ್ಟು ಹೋದ ದಣಿದ ಜೀವದಂತೆ ಬಿದ್ದಿರುತ್ತಿದ್ದಳು. ನಾ ಹೋದೆನಂದ್ರ ದೈನ್ಯವಾಗಿ ನನ್ನ ಕಡಿ ನೋಡತಿದ್ಲು. ನಾ ಬಾಯಿನ್ನ ಗಟ್ಟಿ ಅಪ್ಪಿಕೊಂಡು 'ನನ್ನ ಬಾಯಿ ಜಾಣಮರಿ' ಅಂತಿದ್ದೆ. "ನಾ ಕೆಟ್ಟಾಕಿ ಕಂಡಂಗ ಕಾಣತೇನೇನೋ ರಾಕು ನಿಂಗ. ಯಾಕಂದ್ರ ಇದು ಪರಶುರಾಮನ ಸೀಮಿ ಅದ ಮಗಾ. ಅಪ್ಪನ ಮಾತ ಕೇಳಿ ಅವ್ವನ ತಲಿ ಕಡದು ಧರ್ಮ ಉಳ್ಸಿದ ಧರ್ಮಾತ್ಮರ ನಾಡದ ನೋಡು" ಅಂತ ಬಾಯಿ ಬಿಕ್ಕುವಾಗ ನಾ ಪೆಕರನಂಗ ಆಕೀನ್ನ ನೋಡ್ತಾ ಅಳತಿದ್ದೆ. ಬಾಯಿ 'ಬಾರೋ ನನ ಕಂದಾ' ಅಂತ ಮುದ್ದು ಮಾಡತಿದ್ಲು.

ಕ್ರಮೇಣ ನನ್ನ ಬಾಯಿ ಹೈರಾಣಾಗತೊಡಗಿದಳು. ಬಾಪಾ ಮ್ಯಾಲಿಂದ ಮ್ಯಾಲ ಕುಡ್ದು ಬರೋದು, ಏನೋ ಸಂಕಟದಾಗ ಅದ್ದಿದವನಾಂಗ ಇರೂದು... ಮಾಡತಿದ್ದ. ಬಾಯಿ ಮೊದಲಿನ ಹಾಂಗ ಉಳೀಲಿಲ್ಲ. ಎಂಥದೋ ಭಯ. ನಗಿಯಿಲ್ಲ ಜಿಗಿದಾಟವಿಲ್ಲ. ಹಾಡಿನ ಗುನುಗಿಲ್ಲ. ಕಥಿಯ ಜೋಲಿಯಿಲ್ಲ. ನನಗೂ ರೆಕ್ಕೆ ನೊಂದ ಹಕ್ಕಿಯ ಸ್ಥಿತಿಯಾಗಿತ್ತು. ಬಾಪಾ ಸರಿಗಿದ್ದ ನಾಕ ದಿನ ಎಲ್ಲ ಸರಿ ಇರೂದು. ಅಂವ ಏನಾರ ಈಟ ಅಂದ್ರ ಈಟುದ್ದ ಮಾಡಿ ಬಾಯಿ ಮೂಲಿ ಹಿಡಿಯೋಳು. 'ಹಂಗ್ಯಾಕ ಬಾಯಿ, ನಮ್ಮ ಬಾಪಾನ ಸ್ವಭಾವ ನಮಗೊತ್ತಿಲ್ಲದ್ದ?' ಅಂತ ನಾನೇ ಹಿರೀ ಮನಷ್ಯಾನ ಹಂಗ ಆಡಿದ್ದೆ. "ಇಲ್ಲ ರಾಕೂ, ನಾ ಎಲ್ಲಾ ಬಿಟ್ಟ ಬಂದಾಕಿ. ಯಾಕೋ ಇವನ ವರ್ತನಾ ನೋಡಿದ್ರ ದಿಗಿಲಾಗ್ತದ. ಇದು ನನ್ನ ಮಾನ ಮರ್ಯಾದಿ ಪ್ರಶ್ನೆ ಅದ" ಅಂತಿದ್ದಳು. ನನ್ನ ಬಾಯಿಯ ಚಹರೇನ ಬದಲಾಗತೊಡಗಿತ್ತು. ಹಲ್ಲನೋವಿಗೆ ಗುಳಗಿ ನುಂಗಿ ನೋವು ಮರಿಯೋ ದಿಖಾವಾ ನಡಿಯುತ್ತಲ್ಲ ಹಾಂಗ ಇದ್ದಳು. ಬಾಪಾನಿಗೆ ಹೇಳಬೇಕಂತ ಭಾಳ ಯತ್ನಿಸಿದ್ದೆ. ಹ್ಯಾಂಗ ಸುರುಮಾಡೋದೋ ತಿಳೀಲಿಲ್ಲದ ಹಾಂಗಾತು. ಶಾಲಿಯೊಳಗ ಹಿಂದಕ್ಕ ಬೀಳತಿದ್ದೆ. 'ಬರ್ತಾ ಬರ್ತಾ ರಾಯರ ಕುದರಿ ಕತ್ತಿಯಾತಂತ' ಅಂತ ಅನ್ನಿಸಿಕೊಳ್ಳೋದು ಮಾಮೂಲಿಯಾಯ್ತು.

ಎಂಥದೋ ಕೆಟ್ಟ ಗಾಳಿ ನಮ್ಮನಿಯೊಳಗ ಸುತ್ತಾಡಿಧಾಂಗ ದಿಗಿಲುಬೀಳ್ತಿದ್ದೆ. ಅರ್ಧರಾತ್ರೀಲಿ ಎದ್ದು ಬಾಯಿ–ಬಾಪಾ ಆರಾಂ ಅದಾರೋ ಇಲ್ಲೋ ನೋಡತಿದ್ದೆ. ಬಾಯಿಗೆ ಧೈರ್ಯ ಹೇಳೋ ಹಿರೀಕ ನಾನೇ ಬೆದರಿಬಿದ್ದೆ. ಬಾಪಾನಿಗೆ ಹೇಳಬೇಕು ಅಂತ ಮಾತು ಕೂಡಿಸಿಕೊಳ್ತಿದ್ದೆ. ಅಷ್ಟರಲ್ಲೇ ಆವತ್ತು ಸಾಲಿಯಿಂದ ಬರುವಷ್ಟರಲ್ಲಿ ಮನಿ ಮುಂದ ಅಂಬ್ಯುಲೆನ್ಸ್ ನಿಂತಿತ್ತು. ಬಾಯಿ ಬೇಹೋಶ್ ಇದ್ದಳು. ಬಾಪಾ ಅಳುತ್ತಿದ್ದ. ನನ್ನನ್ನು ಅಪ್ಪಿ ಬಹಳ ಅತ್ತ. ಜಗಳವಾಗಿತ್ತೇನೋ. ಮಾಡಿದ ಅಡುಗೆ ಹಾಂಗಽ ಇತ್ತು. ಬಾಯಿಗೆ ಏನೋ ಶಾಕ್ ಆಗಿದೆ. ಚೇತರಿಸಿಕೊಳ್ಳಲು ಟೈಂ ಬೇಕು ಅಂತಾರೆ ಡಾಕ್ಟರು. ನಾನು ಕಾಶವ್ವತ್ತಿ ಮನಿಯಾಗ ಅದೇನಿ. ಬಾಯಿ–ಬಾಪಾ ನೆನಪಾಗ್ತಾರ. ಅಳು ಬರ್ತದ. ಕೂಳು ಗಂಟಲದಾಗ ಸಿಕ್ಕು ಬ್ಯಾನಿಯಾಗ್ತದ. "ಅಳಬ್ಯಾಡಾ ಕೂಸು. ನೀ ಅತ್ರ ನಿಮ್ಮವ್ವನ ಜೀಂವಾ ಸಂಕಟಪಡ್ತದ" ಅಂತಾಳ. ಕಾಶವ್ವತ್ತಿ ಕಣ್ಣೊರೆಸಿಕೊಳ್ಳುತ್ತಾಳೆ. ಆವತ್ತು ಅವ್ವನ ಮೂಗಿಗೆ ಪೈಪು, ಮೈಯೆಲ್ಲ ಚುಚ್ಚಿ, ಅಯ್ಯೋ ನೋಡಾಕಾಗಿಲ್ಲ. ಆಸ್ಪತ್ರೆ ಮಂದಿ ಏನಂತಾರ ಅನ್ನೂ ಖಬರೂ ತಪ್ಪಿ ಕೂಗಿದ್ದೆ. "ಬಾಯಿ, ಬಾಯಿ ಬಾಯಮ್ಮ... ನಾ ಬಂದೀನಿ ರಾಕೂಽಽ" ಅಂತ. ಹೌದು ಅದೊಂದೇ ಸಾಲು ನಾ ಕೂಗಿದ್ದು ಬಾಯಿ ಮಾತು ತಪ್ಪಬಾರದು ಅಲ್ಲವೇ ? ನಾ ಸಣ್ಣವನಿದ್ದಾಗ ನಾಲಿಗೇಲಿ ಮಾತು ಹೊರಳತಿದ್ದಿಲ್ಲಂತ. ಒಂದಿನ 'ಬಾಯಿ ಬಾಯಿ' ಅಂತ ಕರೆದಿದ್ದೆನಂತೆ. ನನ್ನ ಅವ್ವನ ಖುಷಿ ಹತ್ತಿ "ಅಯ್ಯೋ ಕೂಸ, ಈ ದನಿ ಕೇಳಿದ್ರ ಸತ್ತ ಹೆಣಾ ಆದ್ರೂ ಎದ್ದ ಬಂದ ನಿನ ಮುಂದ ನಿಲ್ತೀನೋ ಮಗನ" ಅಂತ ಮುದ್ದಾಡಿದ್ದಳಂತೆ. ಅವತ್ತಿಂದ ತವರಿನ ಭಾಗೀರಥಿ ಎಂಬ ಹೆಸರು, ಅಪ್ಪ ಕರೆಯೋ ಭಾಗ್ಯಾ, ಬಾಗೂ ಎಂಬ ಹೆಸರು ಎಲ್ಲ ಅಳಿಸಿಟ್ಟಳು. ನನ್ನ ಬಾಯಿ, ಬಾಯಮ್ಮ ಆಗಿದ್ದಳು. ನಾವು ಮೂವರೇ ಇರೋದು. ಅದಕ್ಕೇ ಒಬ್ಬೊಬ್ಬರಿಗೂ ಎರಡೆರಡು ಹೆಸರು. ನನಗೆ ಬಾಪಾ 'ಈಶೂ' ಅಂತಾನ. ಬಾಯಿ 'ರಾಕೂ' ಅಂತಾಳ. ಎರಡೂ ಸೇರಿ ನಾ ರಾಕೇಶ.

ನಾ ನಾಳೀ ಹುಬ್ಬಳ್ಳಿಗೆ ಹೊಂಟೀನಿ. ಬಾಯಿ ನಂಗೆ ಹೇಳಿದ್ಲು. ರಾಮಾಯಣದ ಕಥೀನ್ನ. ಲವ–ಕುಶರು ರಾಮಾಯಣ ಹಾಡೂದ ಕೇಳಿ, ಅವರ ಬಾಯಾಗ ತಂದಽ ಕಥಿ ಕೇಳಿ ಸೀತವ್ವಗ ಹೋದ ಜೀವಾ ಮರಳಿ ಬಂದ ಹಾಗೆ ಆಗಿತ್ತಂತ. ನಾಳಿ ನಾ ನನ್ನ ಬಾಯಿ ಹತ್ರ ಹೋಗ್ತೀನಿ. ಅವಳ ಕಿವಿಯಾಗ, ಅವಳ ಎದಿಯ ಆಳದಾಗ ನಾಟೂವಂಗ ಕಥಿ ಹೇಳ್ತೀನಿ. ಬಾಪಾ ಮತ್ತೆಂದೂ ಹಿಂಗ ವರ್ತನಾ ಮಾಡಂಗಿಲ್ಲ. ನೀನ ಹೇಳಿತಿದ್ದ ಹಾಂಗ 'ಅಂವ ನಿನ್ನ ಮದಲ ಮಗಾ ಹೌದಿಲ್ಲೊ' ಅಂತ ಕೇಳ್ತೀನಿ. ಆಗಲಾದ್ರೂ ನನ್ನ ಬಾಯಿ ಷಕಣ್ಣ ತಗೀತಾಳಲ್ಲ. ಎದ್ದು ಕೂಡತಾಳಲ್ಲ... ಬಾಪಾನ ನಗಿ ಬಾಯಿ ಹುಡುಗಾಟ ನನ ಮನಿ ತುಂಬಿ ನಾವು ಮತ್ತ ಮೊದಲಿನ ಹಾಂಗ ಆಕ್ಕೇವಲ್ಲ ? ನಾಳಿ ನಾ ನನ್ನ ಬಾಯಿ ಹತ್ರ ಹೋಗ್ತೇನಿ... ಈ ಕಥಿ ಬಾಯಿ ಕೇಳ್ಸಿಕೋತಾಳಲ್ಲ ?...

**ಡಾ॥ ವಿನಯಾ ಒಕ್ಕುಂದ**
'ನೆಮ್ಮದಿ', ನಂ. ೧೨೪, ಸಿ.ಐ.ಟಿ.ಬಿ. ಕಾಲನಿ
ಶ್ರೀನಗರ, ಧಾರವಾಡ – ೫೮೦ ೦೦೩

ಆತ್ಮಕಥನ

ಒಂಟಿ ಸೇತುವೆ

ಕೊಂಡಪಲ್ಲಿ ಕೋಟೇಶ್ವರಮ್ಮ



ಕನ್ನಡಕ್ಕೆ : ಸ. ರಘುನಾಥ



# ಹೋರಾಟದ ಬದುಕಿನ ಗಾಥೆ

ನಾನು ಓದಿದ ಪುಸ್ತಕ

ತೆಲುಗು ಮೂಲ :
**ಕೊಂಡಪಲ್ಲಿ ಕೋಟೇಶ್ವರಮ್ಮ**
ಅನುವಾದ :
**ಸ. ರಘುನಾಥ**
ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಬೆಂಗಳೂರು – ೧
ಪುಟಗಳು : ೧೨೦ ಬೆಲೆ : ರೂ. ೯೦/–

**ಕ**ಮ್ಯುನಿಸ್ಟ್ ಚಳವಳಿಯಲ್ಲಿ, ಮಹಿಳಾ ಹೋರಾಟಗಳಲ್ಲಿ, ಸಾಂಸ್ಕೃತಿಕ ಕ್ಷೇತ್ರದಲ್ಲಿ ನಿಸ್ವಾರ್ಥವಾಗಿ ಸೇವೆ ಸಲ್ಲಿಸಿರುವ, ಹಲವು ಕಷ್ಟಕೋಟಲೆಗಳನ್ನು ಅನುಭವಿಸಿರುವ ಹೆಣ್ಣಿನ ಆತ್ಮಕಥೆ ಇದು. ಆಂಧ್ರಪ್ರದೇಶದ ಕುಗ್ರಾಮವೊಂದರಲ್ಲಿ ಜನಿಸಿ, ಅರಿವು ಮೂಡುವ ಮೊದಲೇ ವೈಧವ್ಯ ಕಂಡು, ಮರುವಿವಾಹವಾಗಿ, ಸ್ವಪ್ರಯತ್ನದಿಂದ ಮೆಟ್ರಿಕ್‌ವರೆಗೆ ಓದಿ ಜೀವನವಿಡೀ ಹೋರಾಟದ ಬದುಕು ನಡೆಸಿದ ಕೊಂಡಪಲ್ಲಿ ಕೋಟೇಶ್ವರಮ್ಮ ತೊಂಬತ್ತೆರಡರ ಹರೆಯದಲ್ಲಿ ದಾಖಲಿಸಿರುವ ನೆನಪುಗಳು ಎಂಥ ಗಟ್ಟಿ ಮನಸ್ಸನ್ನೂ ಕಲಕುವಂಥವು. “ನೆನಪುಗಳನ್ನು ಬಡಿದೆಬ್ಬಿಸಿದರೆ ಕಣ್ಣೀರ ಸೆಲೆಯುಕ್ಕಿ ಬರುವ ಬದುಕು ನನ್ನದು. ತೊಯ್ದ ಆ ಅಕ್ಷರಗಳನ್ನೂ ಅರ್ಥಪೂರ್ಣವಾಗಿ ಕಾಗದದ ಮೇಲೆ ಮೂಡಿಸುವುದು ನನ್ನಿಂದಾದೀತೆ ಅಂದುಕೊಂಡೆ. ಹಾಗಾಗಿಯೇ ಇಷ್ಟು ವರ್ಷಗಳಲ್ಲಿ ಆ ಪ್ರಯತ್ನ ಮಾಡಲಿಲ್ಲ... ನನ್ನ ಜೀವನ ಕಥೆ ಇಂದು ನನ್ನ ತೊಂಬತ್ತನೇ ವಯಸ್ಸಿನಲ್ಲಿ ಪುಸ್ತಕ ರೂಪದಲ್ಲಿ ಬಂದಿದೆ... ನನ್ನ ಜೀವನಗಾಥೆಯನ್ನು ಓದಿದ ಓದುಗರು ಇದು ಸಮಾಜದ ಶ್ರೇಯಸ್ಸಿಗಾಗಿ ಬರೆದುದೆಂದು ಭಾವಿಸಿದರೆ ಸಂತೋಷಪಡುತ್ತೇನೆ. ನನ್ನ ಕಥೆ ಮಾನವನಲ್ಲಿ ಒಳ್ಳೆತನವನ್ನು ಸ್ವಲ್ಪ ಮಟ್ಟಿಗಾದರೂ ಬೆಳೆಸುವುದೆಂದುಕೊಂಡರೆ ನನ್ನ ಶ್ರಮ ಫಲಿಸಿತೆಂದುಕೊಳ್ಳುವೆ. ಇಷ್ಟು ವರ್ಷಗಳ ನನ್ನ ಬದುಕು ವ್ಯರ್ಥವಾಗಲಿಲ್ಲವೆಂದು ತಿಳಿದು ತೃಪ್ತಳಾಗುತ್ತೇನೆ” ಎಂದು ಲೇಖಕರು ಹೇಳಿಕೊಂಡಿರುವುದು ಎಲ್ಲ ರೀತಿಯಲ್ಲೂ ಸಮಂಜಸ ಎನ್ನುವುದು ಪುಸ್ತಕ ಓದಿದ ಮೇಲೆ ಅನ್ನಿಸದಿರದು.

ಹತ್ತನೇ ವಯಸ್ಸಿನಲ್ಲೇ ಗಾಂಧೀಜಿಯವರನ್ನು ಕಂಡು ತನ್ನ ಮೈಮೇಲಿದ್ದ ಆಭರಣಗಳನ್ನು ಕಳಚಿ ಸ್ವಾತಂತ್ರ್ಯ ಹೋರಾಟಕ್ಕೆ ದೇಣಿಗೆಯಾಗಿ ನೀಡಿ ಮನೆಯಲ್ಲಿ ಬೈಗಳನ್ನು ತಿಂದ ಕೋಟೇಶ್ವರಮ್ಮ ಮರುಮದುವೆ ಮಾಡಿಕೊಂಡದ್ದು ಕಮ್ಯುನಿಸ್ಟ್ ಪಾರ್ಟಿಯ ಕೊಂಡಪಲ್ಲಿ ಸೀತಾರಾಮಯ್ಯ ಅವರನ್ನು. ಅವರ ದಾಂಪತ್ಯ ಜೀವನ ಸುಲಲಿತವಾಗಿ ಸಾಗಿದ್ದು ಕೆಲವೇ ವರ್ಷಗಳು. ನಲವತ್ತರ ದಶಕದ ಪ್ರಾರಂಭದಲ್ಲಿ ಕಮ್ಯುನಿಸ್ಟ್ ಪಾರ್ಟಿ ನಿಷೇಧಿಸಲ್ಪಟ್ಟಾಗ ಸೀತಾರಾಮಯ್ಯ ಭೂಗತರಾಗಿದ್ದರು. ಅಲ್ಲಿಂದಲೇ ಪತ್ನಿ ಕೋಟೇಶ್ವರಮ್ಮನವರ ಕಷ್ಟಕೋಟಲೆ ಪ್ರಾರಂಭವಾಯಿತು ಎನ್ನಬಹುದು. ೧೯೪೨ರಲ್ಲಿ ನಿಷೇಧ ರದ್ದಾದ ಮೇಲೆ ಕಮ್ಯುನಿಸ್ಟ್ ಚಳವಳಿಯಲ್ಲಿ ಕೋಟೇಶ್ವರಮ್ಮ ಸಕ್ರಿಯವಾಗಿ ಭಾಗವಹಿಸತೊಡಗಿದರು. ಚೆನ್ನಾಗಿ ಹಾಡಬಲ್ಲವರಾಗಿದ್ದ ಈಕೆ ಕ್ರಾಂತಿಗೀತೆಗಳನ್ನು ಹಾಡುತ್ತಿದ್ದರು. ಸ್ವಾತಂತ್ರ್ಯಾನಂತರ ಮತ್ತೆ ಕಮ್ಯುನಿಸ್ಟ್ ಪಕ್ಷ ನಿಷೇಧಿಸಲ್ಪಟ್ಟಾಗ ಆಕೆ ಅನುಭವಿಸಿದ ಬವಣೆ ಒಂದಲ್ಲ ಎರಡಲ್ಲ. ಅವರ ಮಾತುಗಳಲ್ಲೇ ಹೇಳಬೇಕೆಂದರೆ ಇದು : “ರಾಜ್ಯ ಕಮ್ಯುನಿಸ್ಟ್ ನಾಯಕರಿಂದ ಮೊದಲುಗೊಂಡು ತಾಲ್ಲೂಕು ಘಟ್ಟದ ನಾಯಕರವರೆಗೆ ಎಲ್ಲರೂ ಭೂಗತ ಜೀವನಕ್ಕೆ ನಡೆದರು. ಆಗ ರಹಸ್ಯ ಸ್ಥಾವರಗಳಲ್ಲಿ ಕಾರ್ಯ ನಿರ್ವಹಿಸಲು ಧೈರ್ಯ, ಸಾಹಸಗಳನ್ನು ಮೆರೆದಿದ್ದು ಸಿದ್ಧಾಂತ ಪರಿಜ್ಞಾನವಿದ್ದ ಮಹಿಳೆಯರನ್ನು ಮತ್ತು ಹಳ್ಳಿಗಳಲ್ಲಿ ರಕ್ಷಣೆ ಸಿಗದೆ ಸಂಕಷ್ಟಕ್ಕೆ ಬಿದ್ದ ನಾಯಕರ ಪತ್ನಿಯರನ್ನೂ ಪಕ್ಷವು ಕರೆತರಬೇಕೆಂದುಕೊಂಡಿತು. ಮಹಿಳಾ ಆಂದೋಲನಕಾರರು ಕೆಲವರು ಗುಪ್ತ ಕಾರ್ಯಾಚರಣೆ ನಡೆಸಲು ತೆರಳಿದರು. ನಾನೂ ಹೋಗಬೇಕಾದ ಪರಿಸ್ಥಿತಿ ಉಂಟಾಯಿತು. ಅದಕ್ಕೆ ನನ್ನ ಗಂಡನೂ ಪ್ರೋತ್ಸಾಹಿಸಿದರು. ನಾನು ಎಲ್ಲೆಲ್ಲಿ ಅಡಗಿಕೊಂಡಿದ್ದೆ ? ಹೇಗೆ ಕೆಲಸ ಮಾಡಿದೆ ? ಯಾವ ಯಾವ ಸಮಸ್ಯೆಗಳನ್ನು ಎದುರಿಸಿದೆ ? ಚಳವಳಿಗೆ ಹೇಗೆ ಪ್ರಯೋಜನಕಾರಿಯಾದೆ ? ಜೀವನವನ್ನು ಹೇಗೆ ಮುಂದುವರಿಸಿದೆ ? ಎಲ್ಲವನ್ನು ವಿವರಿಸಬೇಕಾದರೆ ದೊಡ್ಡ ಗ್ರಂಥವೇ ಆಗುತ್ತದೆ. ಇಂದಿಗೂ ನಾನು ಮರೆಯಲಾಗದ ಸಂಘಟನೆಗಳನ್ನು ನನ್ನ ನೆನಪಿನ ಪರಂಪರೆಯಿಂದ ಹೆಕ್ಕಿ ಕೆಲವನ್ನು ನಿಮ್ಮ ಮುಂದಿಡುತ್ತಿದ್ದೇನೆ.” ಆ ನೆನಪುಗಳನ್ನು ಓದಿಯೇ ತಿಳಿದುಕೊಳ್ಳುವುದು ಒಳ್ಳೆಯದು. ಆ ದಿನಗಳಲ್ಲಿಯೇ ಕಮ್ಯುನಿಸ್ಟ್ ಪಾರ್ಟಿ ಸೇರಿದ ನನಗೆ ಭೂಗತ ಜೀವನದ ಪರಿಚಯ ಸ್ವಲ್ಪ ಮಟ್ಟಿಗಿದೆ. ಕರ್ನಾಟಕದಲ್ಲಿ ಚಳವಳಿ ಅಷ್ಟು ಪ್ರಬಲವಾಗಿರಲಿಲ್ಲ, ಆದರೆ ಆಂಧ್ರ, ಕೇರಳ, ತಮಿಳುನಾಡಿನ ಭಾಗಗಳಲ್ಲಿ ಪೊಲೀಸು ದೌರ್ಜನ್ಯದ, ಭೂಗತ ಜೀವನದ ಕಥೆಗಳನ್ನೂ ಕೇಳಿದ್ದೆ. ಕೋಟೇಶ್ವರಮ್ಮ ತಾವು ಪಟ್ಟಪಾಡನ್ನು ಹೃದಯಂಗಮವಾಗಿ ವಿವರಿಸಿದ್ದಾರೆ. ತೆಲಂಗಾಣ ಹೋರಾಟವನ್ನೂ ಪರಿಚಯಿಸಿದ್ದಾರೆ.

ಪಾರ್ಟಿ ಬಹಿರಂಗ ಚಟುವಟಿಕೆ ಪ್ರಾರಂಭಿಸಿದ ಮೇಲೆ ಚುನಾವಣೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡ ಕೋಟೇಶ್ವರಮ್ಮ ಮಹಿಳಾ ಆಂದೋಲನದಲ್ಲೂ ಸಕ್ರಿಯವಾಗಿ ಪಾಲ್ಗೊಂಡಿದ್ದರು. ಅನಂತರ ಪಾರ್ಟಿ ಒಡೆದು ಹೋಳಾದಾಗ ಆಕೆ ತುಂಬಾ ನೊಂದುಕೊಂಡರು. “ನನ್ನ ದೃಷ್ಟಿಯಲ್ಲಿ ಪಾರ್ಟಿಯೆಂದರೆ ಒಂದೇ ಕಮ್ಯುನಿಸ್ಟ್ ಪಾರ್ಟಿ. ಸಿಪಿಐ, ಸಿಪಿಎಂ ಎಂದು ಇಬ್ಭಾಗವಾದರೂ ನಾನು ಕಾಕಿನಾಡದಿಂದ ಎರಡು ಪಕ್ಷಗಳಿಗೂ ತಲಾ ಹತ್ತು ರೂಪಾಯಿ ಸದಸ್ಯತ್ವ ಶುಲ್ಕವನ್ನು ಕಳಿಸುತ್ತಿದ್ದೆ. ನಂತರ ಸುಂದರಯ್ಯನವರೇ ಕಳುಹಿಸಬೇಡವೆಂದರು. ನೀನು ಪಕ್ಷದವಳಾಗಿ ನಾಕು ಜನಕ್ಕೆ ಉಪಯುಕ್ತಳಾದರೆ ಸಾಕೆಂದರು. ನನ್ನ ಬಳಿಗೆ ಇತ್ತಂಡದವರೂ ಬರುತ್ತಿದ್ದರು. ಆದರೆ ಒಂದು ಪಕ್ಷದವರ ಮನೆಗೆ ಹೋದರೆ, ಇನ್ನೊಂದು ಪಕ್ಷದವರಿಗೆ ಕೋಪ ಬರುತ್ತಿದ್ದ ಅದೆಷ್ಟೋ ಸಂದರ್ಭಗಳನ್ನು ಕಂಡೆ. ಆ ಧೋರಣೆ ನನಗಿಷ್ಟವಾಗುತ್ತಿರಲಿಲ್ಲ. ಹೀಗೆ ಮತ್ತೆ ಮತ್ತೆ ಒಡೆಯುತ್ತ ಹೆಚ್ಚೆಚ್ಚು ಪಕ್ಷಗಳಾದರೆ ನಮ್ಮ ಆಶಯಗಳೆಂದೂ ಈಡೇರವು ಅನಿಸುತ್ತಿತ್ತು. ಇಂದಿಗೂ ಕೂಡ ಕಮ್ಯುನಿಸ್ಟ್ ಪಕ್ಷಗಳು ಒಂದಾಗುವ ಕನಸನ್ನು ಕಾಣುತ್ತಿದ್ದಾರೆ ಆಕೆ.

ಪತಿ ಕೊಂಡಪಲ್ಲಿ ಸೀತಾರಾಮಯ್ಯ ತೀವ್ರವಾದಿಯಾದ ಮೇಲೆ ಭಿನ್ನಾಭಿಪ್ರಾಯ

(೪೬ನೇ ಪುಟಕ್ಕೆ ಮುಂದುವರೆಯುವುದು)

**ಸಿ. ಆರ್. ಕೃಷ್ಣರಾವ್**

# ಕವಿ–ಪತ್ರಕರ್ತ–ಕ್ರಾಂತಿದೂತ ಗಾರ್ಸಿಯಾ

ಡಾ॥ ಆರ್. ರಾಜಶೇಖರ ಮಠಪತಿ (ರಾಗಂ)

*ಹೆಬ್ಬಂಡೆಗಳ ಜನ್ಮದಿನಗಳನ್ನೇ ಅಳಿಸಿಹಾಕಿವೆ*
*ನಿಮ್ಮ ನೆರಳುಗಳು*
*ನಡುಹಗಲ ಬೆಳಕನ್ನೇ ನುಂಗಿ ಬಿಟ್ಟಿವೆ*
*ನಿಮ್ಮೆದುರು ಬಿರುಗಾಳಿಯೂ ಸುಳಿಯಲು ಭಯಪಡುತ್ತಿದೆ ಈಗ*
*ಕರಗಿಹೋಗಿವೆ ಹಿಮಗಿರಿಗಳು ಕಂಗಾಲಾಗಿ*
*ಸದಾ ನಿಗಿನಿಗಿಯಾದವರು ನಿದ್ರಿಸುವ ಸಮುದ್ರವೇ*
*ನಿಮ್ಮ ನೆರಳಿಗಂಜಿ ಜಡತ್ವದ ಜೋಗುಳಕ್ಕೊರಗಿ ನಿದ್ರಿಸುತ್ತಿದೆ ಕೂಸಂತೆ,*
*ಅಂಬೆಗಾಲಿಡುವ ಮಗುವಂತೆ*
*'ಕ್ರಾಂತಿ' ಈಗ ಮರುಭೂಮಿಯಲ್ಲಿ ತೆವಳುತ್ತಿರುವ ಬಸವನಹುಳು*

ಸೆಂಟ್ರಲ್ ಅಮೇರಿಕಾದ ಕವಿ ಡಾಲ್ಟನ್ ಗಾರ್ಸಿಯಾನ ಈ ಸಾಲುಗಳು ಜಾಗತಿಕವಾದವುಗಳೆ. ನಿಜಕ್ಕೂ ಎಲ್ಲ ಜನಾಂದೋಲನಗಳು ಜಿಡ್ಡುಗಟ್ಟಿದ, ಜೀವ ಕಳೆದುಕೊಂಡ ಮತ್ತು ದಾರಿ ತಪ್ಪಿದ ದುರದೃಷ್ಟದ ದಿನಗಳಿವು. ನಮ್ಮ ನಗರಗಳ ಸಂದು ಸಂದುಗಳಲ್ಲಿ ಧರಣಿ, ಸತ್ಯಾಗ್ರಹ ಮತ್ತು ಹೋರಾಟದ ಭಿತ್ತಿ ಪತ್ರಗಳನ್ನು ನಾವು ನಿತ್ಯ ನೋಡುತ್ತೇವೆ. ಆದರೆ ಅಂಥ ಒಂದು ಹೋರಾಟ ನಿಜಕ್ಕೂ ನಡೆದಿದೆ ಎನ್ನುವಷ್ಟು ನಿಸ್ತೇಜಗೊಳ್ಳುತ್ತಲೇ ಹೊರಟಿದೆ ವರ್ತಮಾನ. ಪ್ರತಿ ಪತ್ರಿಕೆಯ ಪುಟ ಪುಟವೂ ರ್‍ಯಾಲಿ, ಮೋರ್ಚಾಗಳ ಫೋಟೋಗಳಿಂದ ತುಂಬಿಹೋಗಿವೆ. ಆದರೆ ಅದು ಯಾವುದರತ್ತ ಕೇಂದ್ರೀಕೃತವಾಗಿದೆ ಮತ್ತು ನಮ್ಮ ಸಮಾಜದ ಯಾವ ವೈಫಲ್ಯವನ್ನು ಸರಿಗೊಳಿಸಿದೆ ಎನ್ನುವುದು ಇಂದಿಗೂ ಬಗೆಹರಿಯದ ಪ್ರಶ್ನೆ. ಡಾಲ್ಟನ್ ಗಾರ್ಸಿಯಾ ತನ್ನ ಕ್ರಾಂತಿ ಕವಿತೆಗಳನ್ನು ಹೊಸೆಯುವಾಗ ಇಂಥದೇ ಸ್ಥಿತಿ ನಿರ್ಮಾಣವಾಗಿತ್ತು. ಅಂತೆಯೇ ಆತ ವ್ಯಂಗ್ಯವಾಗಿ ಹೇಳುತ್ತಾನೆ, 'ಕ್ರಾಂತಿ' ಈಗ ಮರುಭೂಮಿಯಲ್ಲಿ ತೆವಳುತ್ತಿರುವ ಬಸವನಹುಳು.

ಲ್ಯಾಟಿನ್ ಅಮೇರಿಕಾದ ಅತ್ಯಂತ ಪ್ರಭಾವಿ ಕವಿಗಳ ಪಟ್ಟಿಯನ್ನೇನಾದರೂ ನೀವು ಮಾಡಿದರೆ ಮೊದಲಿಗರಲ್ಲಿ ಬರುವ ಅತ್ಯಂತ ಪ್ರಭಾವಿ ಕವಿ ಡಾಲ್ಟನ್ ಗಾರ್ಸಿಯಾ. ವ್ಯಂಗ್ಯ, ಭಾವ ತೀವ್ರತೆ, ಬದುಕು, ಸಾವು, ಪ್ರೀತಿ, ಹೋರಾಟ ಮತ್ತು ರಾಜಕಾರಣದ ತಾತ್ವಿಕ ಪ್ರಶ್ನೆಗಳನ್ನೆತ್ತಿಕೊಂಡು ಹರಿಯುವ ಅವನ ಕಾವ್ಯಧಾರೆ ಒಂದರ್ಥದಲ್ಲಿ ಅಗ್ನಿಧಾರೆ. ಪ್ರತಿರೋಧ ಮತ್ತು ಪ್ರಶ್ನೆಗಳಿಲ್ಲದ ಅವನ ಒಂದೇ ಒಂದು ಕವಿತೆಯನ್ನು ನೀವು ಓದಲು ಸಾಧ್ಯವಿಲ್ಲ. ಕವಿ ಪತ್ರಕರ್ತನಾಗಿದ್ದ ಗಾರ್ಸಿಯಾನಂಥ ಹೋರಾಟದ ಬದುಕು ಲ್ಯಾಟಿನ್ ಅಮೇರಿಕಾದ ಇತಿಹಾಸದಲ್ಲಿ ಮತ್ತೊಬ್ಬರಿರಲು ಸಾಧ್ಯವಿಲ್ಲ.

ವಿನಾಲ್ ಡಾಲ್ಟನ್ ಮತ್ತು ಮಾರಿಯಾ ಗಾರ್ಸಿಯಾರ ಅನೈತಿಕ ಸಂಬಂಧದ ಸಂತಾನ ಈ ರೋಕ್ ಗಾರ್ಸಿಯಾ. ಇತಿಹಾಸಕಾರರು ಈತ ಒಂದು ಅಕ್ರಮ ಸಂತಾನ ಎಂದು ದಾಖಲಿಸಲು ಹೇಳುವ ಕಥೆ ಅತ್ಯಂತ ಸರಳವಾಗಿದೆ. ಯಾವಾಗಲೂ ಕಾನೂನುಬಾಹಿರವಾಗಿಯೇ ಬದುಕಿದ ಡಾಲ್ಟನ್ ಸಹೋದರರಲ್ಲಿ ಒಬ್ಬನಾದ ವಿನಾಲ್ ಡಾಲ್ಟನ್, ಮದುವೆಯಾಗಿದ್ದು ಮಕ್ಕಳೊಂದಿಗಿನ ಒಬ್ಬ ಕುಟುಂಬಸ್ಥ. ಕುಟುಂಬ ಕದನವೊಂದರಲ್ಲಿ ಸಾಮೂಹಿಕ ಹತ್ಯೆಯಲ್ಲಿ ಬದುಕಿ ಉಳಿದ ಈತ ಆಸ್ಪತ್ರೆ ಸೇರುತ್ತಾನೆ. ಈತನ ಆರೈಕೆಗೆಂದೇ ನಿಯುಕ್ತಳಾದ ನರ್ಸ್ ಮಾರಿಯಾಳೊಂದಿಗೆ ದೈಹಿಕ ಸಂಬಂಧ ಮಾಡಿ ಈತ ರೋಕ್ ಡಾಲ್ಟನ್ ಗಾರ್ಸಿಯಾನಿಗೆ ಜನ್ಮ ನೀಡಿ ತಂದೆಯಾಗುತ್ತಾನೆ.

ತಂದೆಯ ಕರ್ಮಕಾಂಡಗಳೇನೆ ಇರಲಿ, ಅವುಗಳ ಬಗೆಗೆ ಎಂದೂ ಚಿಂತಿಸದೆ ಮಗನ ಮನಸ್ಸನ್ನು ಅದರತ್ತ ಎಂದೂ ಗಮನ ಹರಿಸದೆ, ಅತ್ಯಂತ ಪರಿಶ್ರಮದಿಂದ ದುಡಿದು ಓರ್ವ ಸಭ್ಯಸ್ಥ ತಾಯಿಯಾಗಿ ಜೀವನವನ್ನು ರೂಪಿಸಿದವಳು ಮಾರಿಯಾ ಗಾರ್ಸಿಯಾ. ಸೆಲ್ವೆಡರ್‌ನ ಪ್ರತಿಷ್ಠಿತ ಶಾಲೆ–ಕಾಲೇಜುಗಳಲ್ಲಿಯೇ ಮಗನ ಶಿಕ್ಷಣವನ್ನು ಪೂರೈಸಲು ಪ್ರಾಣವನ್ನೇ ಪಣಕ್ಕಿಟ್ಟವಳಿವಳು. ಮಗ ರೋಕ್ ಗಾರ್ಸಿಯಾನೂ ಅಷ್ಟೆ. ಶಾಲಾ ದಿನಗಳಲ್ಲಿ ಅತ್ಯಂತ ತೀಕ್ಷ್ಣಮತಿಯೂ ಹಾಗೂ ಸೂಕ್ಷ್ಮ ಮನಸ್ಸಿನವನೂ ಆಗಿದ್ದವ.

ಎಷ್ಟೇ ಪ್ರಯತ್ನಿಸಿದರೂ ಸಮಾಜದ ಮೂದಲಿಕೆಯಿಂದ ಮಾತ್ರ ರೋಕ್ ಗಾರ್ಸಿಯಾನಿಗೆ ಹೊರಬರಲು ಆಗಲೇ ಇಲ್ಲ. ಶ್ರೀಮಂತ ವಿದ್ಯಾರ್ಥಿಗಳ ಬಗೆಗೆ ಶಿಕ್ಷಕರಿಗಿದ್ದ ಆಸೆ, ಅಕ್ರಮ ಮಕ್ಕಳನ್ನು ಅವರು ವ್ಯಂಗ್ಯ ಮಾಡುತ್ತಿದ್ದ ರೀತಿ, ಈತನ ಹುಟ್ಟಿನ ಪ್ರಶ್ನೆಯನ್ನು ಮುಂದಿಟ್ಟುಕೊಂಡು ಸದಾ ಸಂಶಯದಿಂದ ನೋಡಿದ ಸ್ನೇಹಿತರು ಹಾಗೂ ಸಮಾಜ ಗಾರ್ಸಿಯಾನಲ್ಲಿ ಒಬ್ಬ ಅಪರೂಪದ ಕವಿ ಸಂಗಾತಿಗೆ ಹುಟ್ಟು ನೀಡಿತು. ಚಿಲಿಯ ಸ್ಯಾಂಟಿಯಾಗೋ ವಿಶ್ವವಿದ್ಯಾಲಯದಲ್ಲಿ ಹಾಗೂ ಯೂನಿವರ್ಸಿಟಿ ಆಫ್ ಸೆಲ್ವೆಡಾರ್‌ನಲ್ಲಿ ಶಿಕ್ಷಣವನ್ನು ಪಡೆಯುತ್ತಲೇ ತನ್ನ ಕಾವ್ಯ ಸಂವೇದನೆಗಳನ್ನು ಗಾರ್ಸಿಯಾ



ಬದುಕಿನಲ್ಲಿ ಏನೆಲ್ಲ ಏರಿಳಿತಗಳನ್ನು ಕಂಡಿದ್ದ ಗಾರ್ಸಿಯಾ, ತನ್ನ ಕವಿತೆಗಳ ಮೂಲಕವೇ ರಾಜಕೀಯ ವೈರಿಗಳನ್ನು ಸೃಷ್ಟಿಸಿಕೊಂಡಿದ್ದ ಎನ್ನುತ್ತಾರೆ ಇತಿಹಾಸಕಾರರು. ತನ್ನ ಜೀವನದ ನಲವತ್ತನೇ ಹುಟ್ಟುಹಬ್ಬವನ್ನು ಆಚರಿಸಿಕೊಳ್ಳುವ ಮುನ್ನಾದಿನ ಅಂದರೆ, ೧೦ ಮೇ ೧೯೭೫ರಲ್ಲಿ ರಾಜಕೀಯ ವೈರಿಯೊಬ್ಬನಿಂದ ಹತ್ಯೆಗೊಳಗಾಗುತ್ತಾನೆ.

ತೀಕ್ಷ್ಣಗೊಳಿಸಿಕೊಂಡ. ಈ ಸಂದರ್ಭದ ಒಂದು ಕವಿತೆಯ ಅವನ ಈ ಸಾಲುಗಳನ್ನು ನೀವು ಓದಲೇಬೇಕು –

*ಉಪ್ಪು ಉಪ್ಪಾದ ಜ್ಞಾನವನ್ನು ಹುಗಿದಿಟ್ಟುಕೊಂಡಿದೆ ಸಮುದ್ರ*
*ಬೆಂಕಿಯಿಲ್ಲದ ಬೆಳಕು ಜಗವನಾವರಿಸಿದೆ*
*ಮೊಗವೆತ್ತಲು ಯತ್ನಿಸುವ ಸತ್ಯವೊಂದು ಇಡೀ ಆಕಾಶವನ್ನೇ ಘಾಸಿಗೊಳಿಸಿದೆ*
*ನಿಸ್ತೋತ ದಡಗಳ ತೋಳುಗಳಲ್ಲಿ ಬಿದ್ದುಬಿಟ್ಟಿದೆ ಸಮುದ್ರ*

ಇದೇ ಅವಧಿ, ಕವಿ ಗಾರ್ಸಿಯಾ ಕಮ್ಯುನಿಸ್ಟ್ ಪಾರ್ಟಿಯ ಸದಸ್ಯನಾಗಿ ಚಳುವಳಿಗೂ ಇಳಿದ. ಕ್ಯೂಬಾದ ಕ್ರಾಂತಿಯ ದಿನಗಳಲ್ಲಿ ಈತ ಒಬ್ಬ ಕಟ್ಟರ್ ಕಮ್ಯುನಿಸ್ಟ್. ವಿದ್ಯಾರ್ಥಿಗಳನ್ನು ಹಾಗೂ ರೈತರನ್ನು ಕ್ರಾಂತಿಗೆ ಪೂರಕವಾಗಿ ಒಗ್ಗೂಡಿಸಿದ ಆಪಾದನೆಯ ಮೇರೆಗೆ ಪ್ರಬಲ ರಾಜಕಾರಣಿಗಳು ಹಾಗೂ ಭೂಮಾಲೀಕರೆಲ್ಲ ಸೇರಿ ಸರ್ಕಾರದ ಆಡಳಿತ ಯಂತ್ರವನ್ನು ಬಳಸಿಕೊಂಡು ಈತನನ್ನು ಎರಡು ಬಾರಿ ಬಂಧಿಸಿ ಜೈಲಿಗಟ್ಟಿದರು. ಸಾರ್ವಜನಿಕ ಸ್ಥಳದಲ್ಲಿ ಸ್ಕಡ್ ಹಾರಿಸಿದ ಆಪಾದನೆಯ ಮೇರೆಗೆ ಕೆಲಕಾಲ ದೇಶದಿಂದ ಗಡೀಪಾರುಗೊಳಿಸಿದರು. ಹದ್ದುಮೀರಿ ಬಂದ ಈತನನ್ನು ಜೈಲೊಂದರಲ್ಲಿ ಬಂಧಿಸಿಟ್ಟರು. ಆದರೆ ಲಾವಾರಸವನ್ನು ಯಾರೂ ನಿಲ್ಲಿಸಲಾಗದು ಎನ್ನುವಂತೆ ಭೀಕರ ಭೂಕಂಪವಾಗಿ ಈತನನ್ನು ಬಂಧಿಸಿಟ್ಟ ಜೈಲು ಕುಸಿದುಬಿದ್ದಿತು. ಬಂಧಮುಕ್ತನಾದ ಗಾರ್ಸಿಯಾ ಇಲ್ಲಿಂದ ಓಡಿಹೋಗಿ ಮತ್ತೆ ಕ್ಯೂಬಾ ಮತ್ತು ಪೆರಿಗ್ವೆಗಳಲ್ಲಿ ಹೋರಾಟಕ್ಕಿಳಿದುಕೊಂಡ.

೧೯೭೩ರಲ್ಲಿ ಸೆಲ್ವೆಡಾರ್‌ಗೆ ಬಂದು ಭೂಗತನಾಗಿದ್ದುಕೊಂಡೇ ಕ್ರಾಂತಿಯ ಕನಸನ್ನು ಕಾಪಿಟ್ಟುಕೊಂಡ. ತನ್ನಲ್ಲಿರುವ ಕವಿತೆಗೆ ಆತ ಅಭಿವ್ಯಕ್ತಿ ಕೊಟ್ಟಿದ್ದು ಕೂಡ ಮೆಕ್ಸಿಕೋದ ತನ್ನ ಪಲಾಯನದ ದಿನಗಳಲ್ಲಿ. ಈ ಸಂದರ್ಭದಲ್ಲಿ ಆತ ಅನೇಕ ಕ್ಯೂಬನ್ ಮತ್ತು ಲ್ಯಾಟಿನ್ ಅಮೇರಿಕನ್ ಉಚ್ಚಾಟಿತ ಕವಿಗಳ ಸಂಪರ್ಕಕ್ಕೆ ಬಂದ. ತಲೆಮರೆಸಿಕೊಂಡವನಾಗಿದ್ದುಕೊಂಡೇ ಏನೆಲ್ಲ ಮಾಡಬೇಕೆಂದು ಕೊಂಡಿದ್ದ ಗಾರ್ಸಿಯಾನಿಗೆ ನಿರೀಕ್ಷಿಸಿದಷ್ಟು ಸಮಯ ಸಿಗಲಿಲ್ಲ. ಈತ ಅಡಗಿದ ತಾಣದ ಪತ್ತೆಯಾಗಿ ಇವನನ್ನು ಹೊರಗೆಳೆದು ಮತ್ತೆ ಜೈಲಿಗೆ ಅಟ್ಟುವವರೆಗೆ ಸರ್ಕಾರ ನಿದ್ರಿಸಲಿಲ್ಲ.

ಸ್ಥಾಪಿತ ಶಕ್ತಿಗಳ ನಿದ್ರೆಗೆಡಿಸಿದಂತೆ ಬದುಕಿದವನು ಗಾರ್ಸಿಯಾ. ಬದುಕಿನ ಪುಟ ಪುಟವೂ ಪ್ರಚಂಡ ಶಕ್ತಿಯ ಆಸ್ಫೋಟ. ಆದರೂ ಇಂಥ ಸ್ಫುರದ್ರೂಪಿ ಕ್ರಾಂತಿಕಾರಿ ಕವಿ ಬರೆದ ಪ್ರೀತಿ ಕುರಿತಾದ ಒಂದು ಕವಿತೆಯನ್ನು ನಿಮ್ಮೊಂದಿಗೆ ಹಂಚಿಕೊಳ್ಳಬೇಕೆನಿಸುತ್ತದೆ –

*ಬೆಳಕಿನ ದೀವಟಿಗೆ ಹಿಡಿಯದೆ*
*ಆ ಕಪ್ಪು ಬೆಟ್ಟದಿಂದ*
*ನೀನಿಂದು ಬರುವಾಗ*
*ಬೆತ್ತಲೆ, ಬರೀ ಬೆತ್ತಲೆ ಇತ್ತು*
*ನಮ್ಮ ಮಧ್ಯ*

*ರಕ್ತ ಕಣ್ಣೀರಿನಲ್ಲಿ ಅದ್ದಿಹೋದ ನಮ್ಮ ಗತವನ್ನು*
*ಅದೆಷ್ಟೊಂದು ಬಾರಿ ನೆನಪಿಸುತ್ತಿತ್ತು !*
*ಪ್ರೀತಿ ಹುಟ್ಟಿದ ಈ ಕ್ಷಣದಲ್ಲಿ*
*ಎಷ್ಟೊಂದು ಮೃದು–ಮಾಧುರ್ಯ–ಮೌನದ ಬೆಸುಗೆ ಇತ್ತು*
*ಮಾತೂ ಸಿಡಿಯುತ್ತಿತ್ತು ಸ್ಫೋಟಗೊಂಡ ಶಬ್ದದಂತೆ*
*ನಮ್ಮ ಇಂದ್ರಿಯಗಳೊ*
*ಕಿರಣಗಳಿಗೆ ಮೊಗಮಾಡಿದ ಸೂರ್ಯಕಾಂತಿ ಹೂಗಳು*

*ನನ್ನ ಪ್ರೀತಿಯೆ,*
*ಹಿಂದಿನ ರಾತ್ರಿಯ ಮಳೆಯ ಕೊಳೆಯನ್ನು*
*ತೊಳೆದುಕೊಳ್ಳಲು ನಾನು ಸ್ನಾನಕ್ಕೆ ಹೋಗಿದ್ದೇನೆ*
*ಅದೇಕೊ ನಿತ್ಯ ಹಾಡುತ್ತಿದ್ದ ಸಮುದ್ರ ಹಕ್ಕಿಯ ಹಾಡು ಮರೆತಿದ್ದೇನೆ*
*ದಿಂಬಗಳ ಮೇಲೆ ನಿನ್ನ ಗಲ್ಲಗಳ ಮುದ್ರೆ ಮೂಡುವ ಮುನ್ನ*
*ಬಂದುಬಿಡು ನನ್ನೊಂದಿಗೆ*
*ನಾನು ಕಾಯುತ್ತಿದ್ದೇನೆ ನಿನಗಾಗಿ ಮುಂಗೋಳಿಯಂತೆ*

ಕವಿತೆಯೋ, ಪತ್ರಿಕೆಯೊಂದರ ಅಂಕಣವೊ ಯಾವುದಾದರೂ ಸರಿ, ಈತನೆಂದರೆ ಪ್ರತಿ ಕ್ಷಣವೂ ಎಚ್ಚರಿಕೆ. ತನ್ನ ವಿಚಾರಗಳ ಕಾರಣ ಹಲವು ಸಾರಿ ಬಂಧನಕ್ಕೊಳಗಾಗಿ ಎರಡು ಸಾರಿ ಗಲ್ಲು ಶಿಕ್ಷೆಗೊಳಗಾಗಿದ್ದ ಗಾರ್ಸಿಯಾ, ಎಂಟೇ ಎಂಟು ಅಪರೂಪದ ಕಾವ್ಯಸಂಕಲನಗಳನ್ನು ರಚಿಸಿದ್ದಾನೆ. ೧೯೭೦ರಲ್ಲಿ ಆತನ ಕೊನೆಯ ಕಾವ್ಯಸಂಕಲನ ಪ್ರಕಟಗೊಂಡರೆ, ೧೯೭೪ರಲ್ಲಿ ಈತನ ಕೊನೆಯ ಅಂಕಣ ಪ್ರಕಟಗೊಂಡಿದೆ.

ಬದುಕಿನಲ್ಲಿ ಏನೆಲ್ಲ ಏರಿಳಿತಗಳನ್ನು ಕಂಡಿದ್ದ ಗಾರ್ಸಿಯಾ, ತನ್ನ ಕವಿತೆಗಳ ಮೂಲಕವೇ ರಾಜಕೀಯ ವೈರಿಗಳನ್ನು ಸೃಷ್ಟಿಸಿಕೊಂಡಿದ್ದ ಎನ್ನುತ್ತಾರೆ ಇತಿಹಾಸಕಾರರು. ತನ್ನ ಜೀವನದ ನಲವತ್ತನೇ ಹುಟ್ಟುಹಬ್ಬವನ್ನು ಆಚರಿಸಿಕೊಳ್ಳುವ ಮುನ್ನಾದಿನ ಅಂದರೆ, ೧೯೭೫ರ ಮೇ ೧೦ರಂದು ರಾಜಕೀಯ ವೈರಿಯೊಬ್ಬನಿಂದ ಹತ್ಯೆಗೊಳಗಾಗುತ್ತಾನೆ. ಮೇ ತಿಂಗಳಲ್ಲಿಯೇ ಹುಟ್ಟಿ, ಮೇ ತಿಂಗಳಲ್ಲಿಯೇ ಮೃತ್ಯುಕೂಪಕ್ಕೆ ಜಾರಿದ ಗಾರ್ಸಿಯಾನ ಸಾವು ಒಂದು ರಾಷ್ಟ್ರೀಯ ದುರಂತ ಎಂದು ಸಾರುವುದರೊಂದಿಗೆ ಸರ್ಕಾರ ಸ್ಟಾಂಪ್ ಪ್ರಕಟಿಸಿ ಸಾವಿನ ಲೆಕ್ಕವನ್ನು ಸರಿದೂಗಿಸುತ್ತದೆ.

ದೊಡ್ಡ ದೊಡ್ಡ ಜೈಲುಗಳು, ಗಲ್ಲಿನ ಆದೇಶಗಳು, ಗಡಿಪಾರಿನ ಸಂದರ್ಭಗಳು ಹಾಗೂ ಸಾರ್ವಜನಿಕ ಆಕ್ರಮಣಗಳು ಗಾರ್ಸಿಯಾನ ಬದುಕನ್ನು ಎಂದೂ ಬಾಧಿಸಲಿಲ್ಲ ಅಥವಾ ಅದಕ್ಕೊಂದು ಭಯಾನಕ ಅಂತ್ಯವನ್ನು ಹಾಡಲಿಲ್ಲ. ಬದಲಾಗಿ ರಾಜಕಾರಣ ಈತನ ಬದುಕನ್ನು ಮುಗಿಸಿತು, ಕವಿತೆಯಾಗಿದ್ದ ಈತನ ಕತ್ತು ಹಿಸುಕಿತು ಎನ್ನುವುದು ಪ್ರಪಂಚದ ಯಾವುದೇ ದೇಶದ ಪದ ಸಂಸ್ಕೃತಿಗೆ, ಪ್ರಶ್ನೋತ್ತರ ಪರಂಪರೆಗೆ ದೊಡ್ಡ ಭೀತಿ ಎನ್ನುವುದನ್ನು ಸಾಬೀತುಪಡಿಸುತ್ತದೆ, ಅಲ್ಲವೆ ? ಈ ಸತ್ಯವೆ ಈ ಸಮಾಜದ ದುರಂತ.

**ಡಾ॥ ಆರ್. ರಾಜಶೇಖರ ಮಠಪತಿ (ರಾಗಂ)**
ಪ್ರಾಧ್ಯಾಪಕರು, ವೈ.ಡಿ.ಡಿ. ಪ್ರಥಮ ದರ್ಜೆ ಸರ್ಕಾರಿ ಕಾಲೇಜು
ಬೇಲೂರು – ೫೭೩ ೧೧೫, ಹಾಸನ ಜಿಲ್ಲೆ

*(೪೪ನೇ ಪುಟದಿಂದ ಮುಂದುವರೆದಿದೆ)*

ಮೂಡಿ ೩೮ ವರ್ಷಗಳ ದೀರ್ಘಕಾಲ ಪ್ರತ್ಯೇಕಗೊಂಡಿದ್ದು, ಹಿತೈಷಿಗಳ ಒತ್ತಡಕ್ಕೆ ಮಣಿದು ಪತಿಯೊಂದಿಗೆ ಕೊನೆಯ ದಿನಗಳನ್ನು ಕಳೆದರು. ಸ್ವಪ್ರಯತ್ನದಿಂದ ಮೆಟ್ರಿಕ್ ಓದಿ ಕಾಕಿನಾಡದಲ್ಲಿ ಬಾಲಕಿಯರ ಹಾಸ್ಟೆಲ್‌ನಲ್ಲಿ ಮೇಟ್ರನ್ನಾಗಿ ದುಡಿದು ಮಗ, ಮಗಳನ್ನು ಓದಿಸಿ ಒಂದು ನೆಲೆಗೆ ತಂದು ಮದುವೆ ಮಾಡಿ ಮೊಮ್ಮಕ್ಕಳನ್ನೂ ಕಂಡಾಕೆ ಅವರು. ಆದರೆ ಆ ಸಂತಸ ಉಂಡದ್ದು ಅಲ್ಪಕಾಲ ಮಾತ್ರ. ಮಗ ಸೊಸೆ, ಮಗಳು ಅಳಿಯ ಎಲ್ಲರನ್ನೂ ಕಳೆದುಕೊಂಡು ಕಣ್ಣೀರಿಟ್ಟ ಕೋಟೇಶ್ವರಮ್ಮ ಕೆಲಕಾಲ ವೃದ್ಧಾಶ್ರಮದಲ್ಲಿದ್ದು, ಈಗ ಮೊಮ್ಮಕ್ಕಳ ಜೊತೆ ಇದ್ದಾರೆ. ಅವರ ಬದುಕು, ಹೋರಾಟ, ತ್ಯಾಗಗಳ ಜೀವನಗಾಥೆಯನ್ನು ಎಲ್ಲರೂ ಅದರಲ್ಲೂ ಮುಖ್ಯವಾಗಿ ಕಮ್ಯುನಿಸ್ಟರು, ಮಹಿಳಾ ಹೋರಾಟಗಾರರು ಓದಲೇಬೇಕಾದ ಪುಸ್ತಕ ಇದು. ಬೆನ್ನುಡಿಯಲ್ಲಿ ಹೇಳಿರುವಂತೆ 'ಹೋರಾಟಗಳ ನಾಡಾದ ಆಂಧ್ರದಲ್ಲಿ ಮಹಿಳೆಯರು ಆ ಹೋರಾಟಗಳಿಗೆ ಸರ್ವಶಕ್ತಿಯನ್ನೂ ಒದಗಿಸಿದರು. ಅಂತಹವರಲ್ಲಿ ಕೋಟೇಶ್ವರಮ್ಮನವರು ಪ್ರಮುಖರು. ಚಳುವಳಿಗಾಗಿ ಒಬ್ಬ ಮಹಿಳೆ ಎಷ್ಟೆಲ್ಲವನ್ನೂ ತ್ಯಾಗಮಾಡಬಲ್ಲಳು ಎಂಬುದಕ್ಕೆ ಈ ತಾಯಿ ಒಂದು ಆದರ್ಶ ಮಾತ್ರವಲ್ಲದೆ ಸಾರ್ವಕಾಲಿಕ ಉದಾಹರಣೆಯಾಗಬಲ್ಲಳು !' ಈ ಮಾತು ಅಕ್ಷರಶಃ ನಿಜ.

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಮನೆಮಾತು ಮತ್ತು ಅಭಿವ್ಯಕ್ತಿ ಭಾಷೆ

ಮನೆಮಾತು ಮತ್ತು ಅಭಿವ್ಯಕ್ತಿ ಭಾಷೆ ಒಂದೇ ಆಗಿರುವ (ಮುಖ್ಯವಾಗಿ ಉರ್ದು) ಲೇಖಕರಿಗೆ ಮುಸ್ಲಿಮೇತರ ಸಮುದಾಯಗಳ ಬದುಕನ್ನು ವಸ್ತುವನ್ನಾಗಿ ಮಾಡಿಕೊಂಡು ದೊಡ್ಡ ಪ್ರಮಾಣದಲ್ಲಿ ಬರೆಯುವುದಕ್ಕೆ ಸಾಧ್ಯವಾಗಿಲ್ಲ. ಲೇಖಕರ ಮತ್ತು ಓದುಗರ ಈ ಏಕಭಾಷಿಕ ಸಂಬಂಧವು ಸಾಂಸ್ಕೃತಿಕವಾಗಿ ಒಂದು ಬಗೆಯ ದ್ವೀಪಪ್ರಜ್ಞೆಯನ್ನು ನಿರ್ಮಿಸಿದೆ. ಮುಸ್ಲಿಂ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳೇ ಹೆಚ್ಚಾಗಿರುವ ಉರ್ದು ಶಾಲೆಗಳಲ್ಲೂ ವಿಶ್ವವಿದ್ಯಾಲಯಗಳ ಉರ್ದು ವಿಭಾಗಗಳಲ್ಲೂ ಈ ದ್ವೀಪಪ್ರಜ್ಞೆಯನ್ನು ಕಾಣಬಹುದು. ಕರ್ನಾಟಕದ ಬಹುತೇಕ ಉರ್ದು ಲೇಖಕರಿಗೆ ಕನ್ನಡ ಲೇಖಕರ ಜತೆ ಕೊಡುಕೊಳೆ ಕಡಿಮೆ. ಇವರ ಸಾಹಿತ್ಯವು ಕನ್ನಡ ಲೇಖಕರಿಗೂ ಓದುಗರಿಗೂ ಅಪರಿಚಿತವೇ ಆಗಿ ಉಳಿದಿದೆ. ಹೈದರಾಬಾದ್ ಕರ್ನಾಟಕದಲ್ಲಿ ಅನೇಕ ಉರ್ದು ಕವಿಗಳು ರಾಷ್ಟ್ರಮಟ್ಟದಲ್ಲಿ ಹೆಸರು ಮಾಡಿದ್ದು, ಕನ್ನಡ ಸಾಹಿತ್ಯ ಲೋಕಕ್ಕೆ ಅವರ ಮಾಹಿತಿಯಿಲ್ಲ. ಇದಕ್ಕೆ ಅವರ ಸಾಹಿತ್ಯವು ಕನ್ನಡಕ್ಕೆ ಅನುವಾದವಾಗದೆ ಇರುವುದು ಒಂದು ತಾಂತ್ರಿಕ ಕಾರಣ. ಇದಕ್ಕೆ ಸಾಂಸ್ಕೃತಿಕ ಮತ್ತು ಶೈಕ್ಷಣಿಕವಾದ ಬೇರೆ ಕಾರಣಗಳಿವೆ.

ರಹಮತ್ ತರೀಕೆರೆ



೧

ಧಾರ್ಮಿಕ ಸಮುದಾಯವಾಗಿ ಕರ್ನಾಟಕದ ಮುಸ್ಲಿಮರು ಉರ್ದು, ಕನ್ನಡ, ಕೊಂಕಣಿ, ಬ್ಯಾರಿ, ಮಾಪ್ಳಾಗಳನ್ನು ತಮ್ಮ ಮನೆಮಾತಾಗಿ ಬಳಸುತ್ತಾರೆ. ಬೀದರ್, ಗುಲಬರ್ಗ, ಬಿಜಾಪುರ ಹಳೇಮೈಸೂರು ಭಾಗದಲ್ಲಿ ಉರ್ದು; ಕರಾವಳಿಯ ದಕ್ಷಿಣ ಕನ್ನಡ–ಉಡುಪಿ ಜಿಲ್ಲೆಗಳಲ್ಲಿ ಬ್ಯಾರಿ ಮತ್ತು ಮಾಪ್ಳಾ; ಉತ್ತರ ಕನ್ನಡದ ಭಟ್ಕಳ ಸೀಮೆಯಲ್ಲಿ ಕೊಂಕಣಿ; ಹೈದರಾಬಾದ್ ಮತ್ತು ಮುಂಬೈ ಕರ್ನಾಟಕದ ಗ್ರಾಮೀಣ ಭಾಗಗಳಲ್ಲಿ ಕನ್ನಡವು ಅವರ ಮನೆಮಾತು. ಮುಸ್ಲಿಂ ಸಮುದಾಯದಿಂದ ಬಂದ ಲೇಖಕರು ಮಲೆಯಾಳೀಕೃತ ರೂಪವಾದ ಮಾಪ್ಳಾವನ್ನು ಬಿಟ್ಟು ಮೇಲ್ಕಾಣಿಸಿದ ನಾಲ್ಕು ಭಾಷೆಗಳಲ್ಲೂ ಬರವಣಿಗೆ ಮಾಡುತ್ತಿದ್ದಾರೆ. ಪ್ರಾಚೀನ ಸಾಹಿತ್ಯದಲ್ಲಿ ಲೇಖಕರನ್ನು ಧಾರ್ಮಿಕ ಹಿನ್ನೆಲೆಯಿಂದ ಜೈನಕವಿ ವೀರಶೈವ ಕವಿ ಎಂದು ಗುರುತಿಸುವಂತೆ, ಆಧುನಿಕ ಸಾಹಿತ್ಯದಲ್ಲಿ ಮುಸ್ಲಿಂ – ಕ್ರೈಸ್ತ ಇತ್ಯಾದಿ ಧಾರ್ಮಿಕ ವಿಶೇಷಣಗಳ ಮೂಲಕ ಗುರುತಿಸುವುದು ಉಚಿತವಲ್ಲ. 'ದಲಿತ ಲೇಖಕರು' ಎಂದು ಚಾರಿತ್ರಿಕ ಕಾರಣಕ್ಕಾಗಿ ಗುರುತಿಸುವಾಗಲೂ ಈ ಚೌಕಟ್ಟನ್ನು ಮೀರಿ ಆ ಲೇಖಕರು ಬೆಳೆದಿರುವುದನ್ನು ಮರೆತಿರುವುದಿಲ್ಲ. ಅನೇಕ ಲೇಖಕರು ಸ್ವತಃ ತಮ್ಮನ್ನು 'ಮುಸ್ಲಿಂ' 'ದಲಿತ' ಇತ್ಯಾದಿ ವಿಶೇಷಣ ಗಳಲ್ಲಿ ಕರೆಯುವುದಕ್ಕೆ ಅಸಮ್ಮತಿ ವ್ಯಕ್ತಪಡಿಸಿಯೂ ಇದ್ದಾರೆ. ಆದರೆ ಭಾರತದಂತಹ ಜಾತಿ–ಪಂಗಡ–ಮತಗಳಲ್ಲಿ ವಿಭಜಿತವಾಗಿರುವ ಸಮಾಜದಲ್ಲಿ, ಲೇಖಕರು ಅಭಿವ್ಯಕ್ತಿಗೆ ಆರಿಸಿಕೊಳ್ಳುವ ಭಾಷೆ ಮತ್ತು ಶೋಧಿಸುವ ಅನುಭವಲೋಕ, ಎದುರಿಸುವ ಸಂವಹನದ ಬಿಕ್ಕಟ್ಟಿನ ವಿಷಯವನ್ನು ಚರ್ಚಿಸುವ ಉದ್ದೇಶದಿಂದ, ಈ ಸಾಮಾಜಿಕ–ಧಾರ್ಮಿಕ ಹಿನ್ನೆಲೆಯ ಪರಿಭಾಷೆ ಅಗತ್ಯವಾಗಿದೆ. ಈ ಹಿನ್ನೆಲೆಯಲ್ಲಿ ಸಂಶೋಧನ ದೃಷ್ಟಿಯಿಂದ ಸಾಂಸ್ಕೃತಿಕ ಚರ್ಚೆಯ ಆಶಯದಿಂದ, 'ಮುಸ್ಲಿಂ ಲೇಖಕರು' ಪರಿಭಾಷೆಯನ್ನು ಬಳಸಿ, ಕರ್ನಾಟಕದ ಲೇಖಕರ ಮನೆಮಾತು ಮತ್ತು ಅಭಿವ್ಯಕ್ತಿ ಭಾಷೆಯ ಚರ್ಚೆ ಮಾಡಲು ಇಲ್ಲಿ ಪ್ರಯತ್ನಿಸಿದೆ.

ಕರ್ನಾಟಕದ 'ಮುಸ್ಲಿಂ' ಲೇಖಕರು ಸಾಹಿತ್ಯಾಭಿವ್ಯಕ್ತಿಗೆ ಭಾಷೆಯನ್ನಾರಿಸಿಕೊಳ್ಳುವ ವಿಷಯದಲ್ಲಿ ಮೂರು ಮುಖ್ಯ ಮಾದರಿಗಳಿವೆ. ಅವೆಂದರೆ, ಮನೆಮಾತುಗಳಲ್ಲಿ ಬರೆಯುತ್ತಿರುವ; ಮನೆಮಾತನ್ನು ಬಿಟ್ಟು ಪರಿಸರದ ಭಾಷೆಯಾದ ಕನ್ನಡದಲ್ಲಿ ಬರೆಯುತ್ತಿರುವ; ಮನೆಮಾತು ಮತ್ತು ಪರಿಸರ ಭಾಷೆಗಳಲ್ಲಿ ಒಟ್ಟಿಗೆ ಬರೆಯುತ್ತಿರುವ ಮಾದರಿಗಳು. ಕೆಲವು ಕಡೆ ಲೇಖಕರ ಮನೆಮಾತು, ಅಭಿವ್ಯಕ್ತಿ ಭಾಷೆ ಹಾಗೂ ಪರಿಸರದ ಭಾಷೆಗಳು ಒಂದೇ ಆಗಿವೆ. ಉರ್ದುವಿಗೆ ಸಂಬಂಧಿಸಿದಂತೆ ಬೀದರಿನಲ್ಲಿಯೂ, ಕನ್ನಡಕ್ಕೆ ಸಂಬಂಧಿಸಿದಂತೆ ಪಿಂಜಾರ ಪಂಗಡದ ಮುಸ್ಲಿಮರ ವಿಷಯದಲ್ಲಿಯೂ ಇದಕ್ಕೆ ನಿದರ್ಶನಗಳಿವೆ. ಉಳಿದಂತೆ ಬಹಳಷ್ಟು ಲೇಖಕರ ವಿಷಯದಲ್ಲಿ ಮನೆಮಾತು, ಅಭಿವ್ಯಕ್ತಿ ಭಾಷೆ ಹಾಗೂ ಪರಿಸರದ ಭಾಷೆಗಳು ಅಲಾಯಿದವಾಗಿವೆ. ಪ್ರಶ್ನೆಯೆಂದರೆ, ಇವು ಒಂದೇ ಮತ್ತು ಬೇರೆಬೇರೆ ಆಗಿರುವ ಸನ್ನಿವೇಶಗಳು ಸೃಷ್ಟಿಸಿರುವ ಭಾಷಿಕ, ಸಾಹಿತ್ಯಕ, ಸಾಂಸ್ಕೃತಿಕ ಬಿಕ್ಕಟ್ಟು ಮತ್ತು ಸಾಧ್ಯತೆಗಳು ಯಾವುವು ಎನ್ನುವುದು.

೨

ಮೊದಲನೆಯದಾಗಿ – ಮನೆಮಾತು, ಅಭಿವ್ಯಕ್ತಿಯ ಮತ್ತು ತಮ್ಮ ಓದುಗರ ಭಾಷೆ ಒಂದೇ ಆಗಿರುವ ಮಾದರಿ. ಈ ಮಾದರಿಯಲ್ಲಿ ಲೇಖಕರು ಸಾಂಸ್ಕೃತಿಕ ಸಂಹವನದ ವಿಷಯದಲ್ಲಿ ಹೆಚ್ಚಿನ ಕಷ್ಟ ಎದುರಿಸುವುದಿಲ್ಲ. ಹೀಗಾಗಿಯೇ ಉರ್ದು, ಬ್ಯಾರಿ, ಕೊಂಕಣಿ ಭಾಷೆಗಳಲ್ಲಿ ಬರೆಯುವ ಲೇಖಕರು ಈ ಭಾಷೆಗಳನ್ನಾಡುವ ಸ್ವಧಾರ್ಮಿಕ ಸಮುದಾಯದ ಓದುಗರ ಜತೆ ನೇರ ಸಂವಹನ ಸಂಬಂಧ ಹೊಂದಿದ್ದಾರೆ. ಈ ನೇರ ಸಂವಹನ ಸಂಬಂಧವು ಲೇಖಕರ ಅನುಭವ ಮತ್ತು ಸಂವೇದನೆಯ ವಿಷಯದಲ್ಲಿಯೂ ಸಮುದಾಯದ ಜತೆ ಆಪ್ತ

ನಂಟಿಗೆ ಕಾರಣವಾಗಿದೆ. ಇದುವೇ ಸ್ವಸಮುದಾಯದ ಬಗ್ಗೆ ಲೇಖಕರು ಒಳವಿಮರ್ಶಕರಾಗುವ (ಕ್ರಿಟಿಕಲ್ ಇನ್‌ಸೈಡರ್) ಸಾಧ್ಯತೆಯನ್ನು ಕ್ಷೀಣಗೊಳಿಸಿದೆ ಅಥವಾ ಅವರ ಒಳವಿಮರ್ಶೆಯ ಮೊನಚನ್ನು ಕಡಿಮೆ ಗೊಳಿಸಿದೆ. ಇದಕ್ಕೆ ಒಂದು ಕಾರಣ, ದೇಶವಿಭಜನೆಯ ಬಳಿಕ ಮುಸ್ಲಿಂ ಸಮುದಾಯವು ರಾಷ್ಟ್ರಭಕ್ತಿಯ ವಿಷಯದಲ್ಲಿ ಸಂಶಯಕ್ಕೆ ಒಳಗಾಗುವ ಮತ್ತು ರಾಷ್ಟ್ರೀಯವಾದಿಗಳ ಮುಂದೆ ಸಮರ್ಥನೆ ಮಾಡಿಕೊಳ್ಳುವ ವಿಚಿತ್ರ ಇಕ್ಕಟ್ಟಿಗೆ ಒಳಗಾಗಿದ್ದು. ಇದು ಲೇಖಕರು ಸ್ವಸಮುದಾಯದ ಬಗ್ಗೆ ಒಂದು ಬಗೆಯ ಆತ್ಮರಕ್ಷಕ ಧೋರಣೆ ತಳೆಯುವ ತಮ್ಮದಲ್ಲದ ಧರ್ಮಗಳ ಬಗ್ಗೆ ಪ್ರಜ್ಞಾಪೂರ್ವಕ ಎಚ್ಚರದಲ್ಲಿ ಬರೆಯುವ ಒತ್ತಡಕ್ಕೆ ಸಿಲುಕಿಸಿತು. ಅಯೋಧ್ಯಾ (೧೯೯೨) ಮತ್ತು ಗೋದ್ರಾ (೨೦೦೨) ಘಟನೆಗಳ ಬಳಿಕ ಈ ಇಕ್ಕಟ್ಟು ಮತ್ತಷ್ಟು ತೀವ್ರತೆ ಪಡೆಯಿತು. ಈ ಕಷ್ಟವು ಪಾಕಿಸ್ತಾನ-ಬಾಂಗ್ಲಾದೇಶಗಳ ಉರ್ದು-ಬಂಗಾಳಿ ಬರೆಹಗಾರ ರಿಗಿದ್ದಂತಿಲ್ಲ. ಇದ್ದರೆ ಈ ಇಕ್ಕಟ್ಟು ಅಲ್ಲಿನ ಕ್ರೈಸ್ತ, ಸಿಖ್, ಹಿಂದೂ ಧಾರ್ಮಿಕ ಸಮುದಾಯಗಳಿಂದ ಬಂದ ಲೇಖಕರ ಮೇಲಿರಬಹುದು. ಆದರೆ ಆ ದೇಶಗಳಲ್ಲಿರುವ ಮೂಲಭೂತವಾದ ಹಾಗೂ ಧರ್ಮನಿಂದನೆಗೆ ಕಠಿಣ ಶಿಕ್ಷೆ ವಿಧಿಸುವ ಕಾನೂನುಗಳು ಅಲ್ಲಿನ ಲೇಖಕರಿಗೆ ಭಾರತದ ಲೇಖಕರಿಗಿಲ್ಲದ ಅಭದ್ರತೆಗಳಿಗೆ ಸಿಲುಕಿಸಿವೆ; ಇದಕ್ಕೆ ಸಾದತ್ ಹಸನ್ ಮಂಟೊ, ತಸ್ಲೀಮಾ ನಸ್ರೀನ್ ಅವರು ಕಷ್ಟ ಎದುರಿಸಬೇಕಾಗಿ ಬಂದಿತು. ಈ ಕಷ್ಟ ಅಲ್ಲಿನ ಲೇಖಕರಿಗೆ ಮಾತ್ರವಲ್ಲ, ಧರ್ಮಾತೀತವಾಗಿ ಚಿಂತಿಸುವ ಮಾನವ ಹಕ್ಕು ಚಳುವಳಿಗಾರರಿಗೂ ಒದಗಿದೆ. ಇದು ಬೇರೆ ಚರ್ಚೆಯ ವಿಷಯ.

ಮನೆಮಾತು ಮತ್ತು ಅಭಿವ್ಯಕ್ತಿ ಭಾಷೆ ಒಂದೇ ಆಗಿರುವ (ಮುಖ್ಯವಾಗಿ ಉರ್ದು) ಲೇಖಕರಿಗೆ ಮುಸ್ಲಿಮೇತರ ಸಮುದಾಯಗಳ ಬದುಕನ್ನು ವಸ್ತುವನ್ನಾಗಿ ಮಾಡಿಕೊಂಡು ದೊಡ್ಡ ಪ್ರಮಾಣದಲ್ಲಿ ಬರೆಯುವುದಕ್ಕೆ ಸಾಧ್ಯವಾಗಿಲ್ಲ. ಲೇಖಕರ ಮತ್ತು ಓದುಗರ ಈ ಏಕಭಾಷಿಕ ಸಂಬಂಧವು ಸಾಂಸ್ಕೃತಿಕವಾಗಿ ಒಂದು ಬಗೆಯ ದ್ವೀಪಪ್ರಜ್ಞೆಯನ್ನು ನಿರ್ಮಿಸಿದೆ. ಮುಸ್ಲಿಂ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳೇ ಹೆಚ್ಚಾಗಿರುವ ಉರ್ದು ಶಾಲೆಗಳಲ್ಲೂ ವಿಶ್ವವಿದ್ಯಾಲಯಗಳ ಉರ್ದು ವಿಭಾಗಗಳಲ್ಲೂ ಈ ದ್ವೀಪಪ್ರಜ್ಞೆಯನ್ನು ಕಾಣಬಹುದು. ಕರ್ನಾಟಕದ ಬಹುತೇಕ ಉರ್ದು ಲೇಖಕರಿಗೆ ಕನ್ನಡ ಲೇಖಕರ ಜತೆ ಕೊಡುಕೊಳೆ ಕಡಿಮೆ. ಇವರ ಸಾಹಿತ್ಯವು ಕನ್ನಡ ಲೇಖಕರಿಗೂ ಓದುಗರಿಗೂ ಅಪರಿಚಿತವಾಗಿಯೇ ಉಳಿದಿದೆ. ಹೈದರಾಬಾದ್ ಕರ್ನಾಟಕದಲ್ಲಿ ಅನೇಕ ಉರ್ದು ಕವಿಗಳು ರಾಷ್ಟ್ರಮಟ್ಟದಲ್ಲಿ ಹೆಸರು ಮಾಡಿದ್ದು, ಕನ್ನಡ ಸಾಹಿತ್ಯ ಲೋಕಕ್ಕೆ ಅವರ ಮಾಹಿತಿಯಿಲ್ಲ. ಇದಕ್ಕೆ ಅವರ ಸಾಹಿತ್ಯವು ಕನ್ನಡಕ್ಕೆ ಅನುವಾದವಾಗದೆ ಇರುವುದು ಒಂದು ತಾಂತ್ರಿಕ ಕಾರಣ; ಇದಕ್ಕೆ ಸಾಂಸ್ಕೃತಿಕ ಮತ್ತು ಶೈಕ್ಷಣಿಕವಾದ ಬೇರೆ ಕಾರಣಗಳಿವೆ. ಅವೆಂದರೆ : (ಅ) ಕನ್ನಡವನ್ನು 'ಹಿಂದು' ಧಾರ್ಮಿಕ ಪರಿಭಾಷೆಯಲ್ಲಿಟ್ಟು ನೋಡುವ ಮನೋಭಾವವು ಕರ್ನಾಟಕದಲ್ಲಿ ದಟ್ಟವಾಗಿರುವುದು. ಪ್ರೌಢಶಾಲೆಯಲ್ಲಿ ಮಾತೃಭಾಷೆಯ ಸ್ಥಾನದಲ್ಲಿ ಸಂಸ್ಕೃತವಿರುವುದರ ವಿರುದ್ಧ ಹುಟ್ಟಿದ ಕನ್ನಡದ ಹಕ್ಕಿನ ಉದ್ದೇಶವುಳ್ಳ ಗೋಕಾಕ್ ಚಳುವಳಿ (೧೯೮೨), ಉರ್ದು ಮಾತಾಡುವ ಮುಸ್ಲಿಮರು ಕನ್ನಡ ವಿರೋಧಿಗಳು ಎಂಬ ಅರ್ಥಕ್ಕೆ ಹೊರಳಿಕೊಂಡಿದ್ದು; ಉರ್ದು ವಾರ್ತೆ ಪ್ರಸಾರ ಮಾಡುವ ದೂರದರ್ಶನದ ನಿರ್ಧಾರವು ಕೋಮುಗಲಭೆಗಳನ್ನು ಹುಟ್ಟುಹಾಕಿದ್ದು ಇವು ಇದಕ್ಕೆ ಪುರಾವೆಗಳು; (ಆ) ಉರ್ದು ಮನೆಮಾತಿನ ಸಂಪ್ರದಾಯಸ್ಥ ಮುಸ್ಲಿಮರು ಕನ್ನಡವನ್ನು ಹಿಂದುಗಳ ಮತ್ತು ಉರ್ದುವನ್ನು ಮುಸ್ಲಿಮರ ಅಸ್ಮಿತೆಯೆಂಬ ಧೋರಣೆ ಹೊಂದಿರುವುದು. ಉರ್ದು ಮತ್ತು ಕನ್ನಡ ಶಾಲೆಗಳ ಗೋಡೆಗಳ ಮೇಲೆ ಬರೆಯಲಾದ ಚಾರಿತ್ರಿಕ ವ್ಯಕ್ತಿಗಳ ಮತ್ತು ದೇವತೆಗಳ ಚಿತ್ರಗಳಲ್ಲಿಯೂ ಈ ಧ್ರುವೀಕರಣ ಕಾಣುತ್ತದೆ. ಟಿಪ್ಪುವಿನ ಅಥವಾ ಮೌಲಾನಾ ಅಬ್ದುಲ್ ಕಲಾಮರ ಚಿತ್ರವು ಉರ್ದು ಶಾಲೆಗಳ ಗೋಡೆಗಳಲ್ಲಿರುವಂತೆ ಕನ್ನಡ ಶಾಲೆಗಳ ಗೋಡೆಗಳ ಮೇಲಿರುವುದಿಲ್ಲ. ಕೆಲವು ಕನ್ನಡ ಶಾಲೆಗಳು ಗುಡಿಗಳ ಹಾಗೆ ದೇವತೆಗಳ ಚಿತ್ರಗಳನ್ನೂ 'ಬಾಗಿಲೊಳು ಕೈಮುಗಿದು ಒಳಗೆ ಬಾ, ಜ್ಞಾನದೇಗುಲವಿದು' ಎಂಬ ಫಲಕವನ್ನೂ ಹೊಂದಿವೆ; (ಇ) ಉರ್ದು ಲೇಖಕರು ಸಾಮಾನ್ಯವಾಗಿ ಉರ್ದು ಮಾಧ್ಯಮದ ಶಾಲೆಗಳಲ್ಲಿ ಕಲಿತು ಬಂದವರು; ನಗರ ಮತ್ತು ಪಟ್ಟಣಗಳಲ್ಲಿ ಕೇಂದ್ರೀಕರಣಗೊಂಡಿರುವರು. ಹೀಗೆ ಉರ್ದು ಭಾಷಿಕರ ನೆಲೆಸುವಿಕೆಯ ಸ್ವರೂಪ, ಉರ್ದು ಶಾಲಾಶಿಕ್ಷಣ ಹಾಗೂ ಉರ್ದು ಸಾಹಿತ್ಯಗಳ ನಡುವೆ ವಿಶಿಷ್ಟವೂ ವಿಚಿತ್ರವೂ ಆದ ಸಂಬಂಧವಿದ್ದು, ಅದು ದ್ವೀಪಪ್ರಜ್ಞೆಯನ್ನು ನಿರ್ಮಿಸಿದೆ.

**ನಿಜ ಸಂಗತಿ**

**ಹೋದ ಕಾಲ, ದಿನಗಳು**
**ಮತ್ತೆ ಮರಳಿ**
**ಬರುವದಿಲ್ಲ !**
**ಉಳಿತಾಯ ಮಾಡಿದರೆ**
**ಮಿತ್ರಾ, ಕಷ್ಟ**
**ಇರುವದಿಲ್ಲ !**

ಲಾಲಸಾಬ ಎಚ್. ನದಾಫ
ಬಾಗಲಕೋಟೆ

೩

ಎರಡನೆಯದಾಗಿ – ಮನೆಮಾತು ಮತ್ತು ಅಭಿವ್ಯಕ್ತಿಯ ಭಾಷೆಗಳು ವಿಭಿನ್ನವಾಗಿರುವ ಮಾದರಿ. ಇಲ್ಲಿ ಭಾಷೆಯ ಆಯ್ಕೆಯ ಕಾರಣದಿಂದಲೇ, ಲೇಖಕರು ಸಮುದಾಯ ನಿಷ್ಠವಲ್ಲದ, ಅಂದರೆ ಸಾರ್ವತ್ರಿಕ ಬದುಕಿನ ಅನುಭವಗಳನ್ನು ಶೋಧಿಸುವ ಸಾಧ್ಯತೆಗಳು ಹೆಚ್ಚಿವೆ. ಮನೆಮಾತಲ್ಲದ ಓದುಗರಿಗಾಗಿ ಸಾರ್ವತ್ರಿಕ ವಿಷಯಗಳ ಮೇಲೆ ಬರೆಯುವಾಗ ಸಾಂಸ್ಕೃತಿಕ ಸಂವಹನದ ಸಮಸ್ಯೆ ಅಷ್ಟಾಗಿ ಎದುರಾಗುವುದಿಲ್ಲ. ಉದಾಹರಣೆಗೆ, ನಿಸಾರ್ ಅಹಮದ್ ಅವರ 'ಕುರಿಗಳು ಸಾರ್ ಕುರಿಗಳು ಸಾರ್', 'ರಾಮನ್ ಸತ್ತಸುದ್ದಿ'; ರಂಜಾನ್ ದರ್ಗಾರ 'ಪ್ರಣಾಳಿಕೆ' ಮುಂತಾದ ಕವನಗಳು. ಆದರೆ ಸಮುದಾಯನಿಷ್ಠ ಅನುಭವಗಳನ್ನು ಕನ್ನಡದಲ್ಲಿ ಬರೆಯುವಾಗ (ನಿದರ್ಶನಕ್ಕೆ ನಿಸಾರರ 'ಅಮ್ಮ ಆಚಾರ ಮತ್ತು ನಾನು') ಕೆಲವು ಸವಾಲುಗಳು ಎದುರಾಗುತ್ತವೆ. ಕಾರಣ, ವಿಭಿನ್ನ ಭಾಷಿಕ ಮತ್ತು ಧಾರ್ಮಿಕ ಸಮುದಾಯಗಳಿಗೆ ಸೇರಿದ ಓದುಗರಿಗೆ ತಮ್ಮ ಧರ್ಮ ಮತ್ತು ಸಮುದಾಯ ವಿಶಿಷ್ಟ ಅನುಭವ-ತಲ್ಲಣಗಳನ್ನು ಮುಟ್ಟಿಸಬೇಕಿರುವುದು. ಆಗ ಲೇಖಕರು ಸ್ವಸಮುದಾಯದ ಸಾಂಸ್ಕೃತಿಕ ಲೋಕವನ್ನು ಪರಿಸರದ ಭಾಷೆಯಲ್ಲಿ ಸಾಂಸ್ಕೃತಿಕವಾಗಿ ಅನುವಾದಿಸಿ ಬರೆಯುವ ಸಾಧ್ಯತೆಯನ್ನು ಶೋಧಿಸಿಕೊಳ್ಳುವರು. ಈ ಲೇಖಕರು ಪರಿಸರದ ಭಾಷೆಯಲ್ಲಿ ಬರೆಯುವಾಗ, ಸ್ವಸಮುದಾಯದ ಜತೆ ಅವರ ಸಂವಹನ ಸಂಬಂಧ ಕೊಂಚ ಶಿಥಿಲವಾಗುತ್ತದೆ.

ಮನೆಮಾತು ಮತ್ತು ಅಭಿವ್ಯಕ್ತಿ ಭಾಷೆ ಬೇರೆಯಾಗಿದ್ದು ಓದುಗರೊಡನೆ ನೇರ ಸಂವಹನ ಸಂಬಂಧ ಶಿಥಿಲವಾಗುವ ಇಕ್ಕಟ್ಟು ಕನ್ನಡದಲ್ಲಿ ಬರೆಯುವ ತುಳು ಕೊಡವ ಲಂಬಾಣಿ ಮರಾಠಿ ಕೊಂಕಣಿ ಭಾಷಿಕ ಹಿನ್ನೆಲೆಯ ಲೇಖಕರ ಪಾಲಿಗೂ ಇದೆ. ಆದರೆ ಅವರ ಇಕ್ಕಟ್ಟಿಗೆ ಧಾರ್ಮಿಕ ಆಯಾಮವಿಲ್ಲ. ತಮಿಳು ಮರಾಠಿ ಕೊಂಕಣಿ ಮನೆಮಾತಿನ ಬೇಂದ್ರೆ-ಶಂಬಾ, ಮಾಸ್ತಿ – ಡಿವಿಜಿ, ಕಾರ್ನಾಡ – ಜಯಂತ ಮುಂತಾದವರು ಕನ್ನಡದಲ್ಲಿ ಬರೆದರೂ, ನಾ. ಡಿಸೋಜಾ ಅಥವಾ ಕಟ್ಪಾಡಿ ಅವರಲ್ಲಾಗುವಂತೆ, ಸಮುದಾಯದ ಧಾರ್ಮಿಕ – ಸಾಂಸ್ಕೃತಿಕ ಲೋಕಕ್ಕೂ ಓದುಗರ ಸಾಂಸ್ಕೃತಿಕ ಲೋಕಕ್ಕೂ ಅಷ್ಟಾಗಿ ಬಿರುಕು ಏರ್ಪಡುವುದಿಲ್ಲ. ಈ ಬಿಕ್ಕಟ್ಟಿನೊಳಗೆ ಒಂದು ಅಪೂರ್ವ ಸಾಂಸ್ಕೃತಿಕ ಸಾಧ್ಯತೆಯೂ ಸೃಷ್ಟಿಯಾಗುತ್ತದೆ. ಅದೆಂದರೆ ಈ ಲೇಖಕರು, ವಿಭಿನ್ನ ಧಾರ್ಮಿಕ ಮತ್ತು ಸಾಮಾಜಿಕ ಸಮುದಾಯಗಳ ಲೋಕದ ಓದುಗರಿಗೆ ಸ್ವಸಮುದಾಯದ ಅನುಭವಲೋಕವನ್ನು ಮಂಡಿಸುತ್ತ, ಸಾಂಸ್ಕೃತಿಕ ಸೇತುವಿನ ಪಾತ್ರವನ್ನು ನಿರ್ವಹಿಸುವುದು. ಭಾರತವು ಬಹುಧಾರ್ಮಿಕ, ಬಹುಸಾಂಸ್ಕೃತಿಕ, ಬಹುಭಾಷಿಕ, ಎಂದು ಎಷ್ಟೇ ಹೇಳಿದರೂ, ಈಚಿನ ದಿನಗಳಲ್ಲಿ ಈ ಅಂತರ್ ಭಾಷಿಕ – ಧಾರ್ಮಿಕ – ಸಾಂಸ್ಕೃತಿಕ ಲೋಕದಲ್ಲಿ ಕೊಡುಕೊಳೆ ಹಾಗೂ ಸಂವಾದ ಕ್ಷೀಣಗೊಳ್ಳುತ್ತಿದೆ. ಇದಕ್ಕೆ ಹಿಂದೂ ಮತೀಯವಾದ ಮತ್ತು ಮುಸ್ಲಿಂ ಮೂಲಭೂತ ವಾದಗಳ ಕೊಡುಗೆ ಸಾಕಷ್ಟಿದೆ. ಧಾರ್ಮಿಕ ಸಮುದಾಯಗಳ ನಡುವೆ ವಿದ್ವೇಷದ ವಾತಾವರಣವಿರುವ ಕಡೆ ಸಾಂಸ್ಕೃತಿಕ ಪರಕೀಯತೆಯ ಪ್ರಮಾಣ ಹೆಚ್ಚಿರುತ್ತದೆ. ಈ ಹಿನ್ನೆಲೆಯಲ್ಲಿ ಈ ಸಾಂಸ್ಕೃತಿಕ ಸೇತುಬಂಧದ ಬರೆಹವು ಉಳಿದ ಧಾರ್ಮಿಕ ಸಮುದಾಯಗಳಿಂದ ಬಂದ ಓದುಗರನ್ನು ಸಾಂಸ್ಕೃತಿಕ ಸಂವೇದನೆಗೆ ಒಳಪಡಿಸುತ್ತಿರುತ್ತದೆ.

ಸಾಹಿತ್ಯವು ಪರೋಕ್ಷವಾಗಿ ಮಾಡುವ ಈ ಸಾಂಸ್ಕೃತಿಕ ಶಿಕ್ಷಣದ ಕಾರ್ಯವನ್ನು ಉರ್ದುವಿನಲ್ಲಿ ಬರೆಯುವವರಿಗಿಂತ ಕನ್ನಡದಲ್ಲಿ ಬರೆಯುವವರು ದೊಡ್ಡ ಪ್ರಮಾಣದಲ್ಲಿ ನಿರ್ವಹಿಸುತ್ತಿದ್ದಾರೆ. ಈ ಪಾತ್ರ ನಿರ್ವಹಣೆಗೆ ಅವರು ಪ್ರಧಾನಧಾರೆಯ ಕನ್ನಡ ಸಾಹಿತ್ಯ ಹಾಗೂ ಓದುಗರ ಜತೆ ಹೊಂದಿರುವ ಆಪ್ತ ಸಂಬಂಧವೂ ಆಧಾರವಾಗಿದೆ. ಈ ಪಾತ್ರವನ್ನು ನಿಸಾರ್, ಸನದಿ, ಅಕಬರ ಅಲಿ, ದರ್ಗಾ, ಶರೀಫಾ, ಬಶೀರ್ ಮುಂತಾದ ಕವಿಗಳಿಗಿಂತ ಹೆಚ್ಚಾಗಿ ಬೊಳುವಾರು, ಸಾರಾ, ಬಾನು, ಅಬ್ದುಲ್ ರಶೀದ್, ಅಬ್ಬಾಸ್ ಮುಂತಾದ ಕಥನದ ಲೇಖಕರು ನಿಭಾಯಿಸಿರುವರು. ಈ ಸಾಂಸ್ಕೃತಿಕ ಸೇತುಬಂಧ ಕಾರ್ಯದಲ್ಲಿ ಚಿಂತನೆ ಮತ್ತು ಭಾವ ಪ್ರಧಾನ ಕಾವ್ಯಕ್ಕೂ ಸಾಮಾಜಿಕ ಬದುಕಿನ ವಿವರಗಳನ್ನು ಒಳಗೊಳ್ಳುವ ಕಥನಕ್ಕೂ ಇರುವ ಈ ಪ್ರಕಾರ ವ್ಯತ್ಯಾಸಗಳು ಸ್ವಾರಸ್ಯಕರವಾಗಿವೆ.

ಕನ್ನಡದಲ್ಲಿ ಬರೆವ ಈ ಲೇಖಕರಲ್ಲಿ – ಮನೆಮಾತಾದ ಬ್ಯಾರಿ ಕೊಂಕಣಿ ಉರ್ದುವಿನಲ್ಲಿ ಬರೆಯುವ ಲೇಖಕರಿಗೆ ಹೋಲಿಸಿದರೆ – ಸ್ವಸಮುದಾಯದ ಜತೆಗಿನ ಸಂಬಂಧ ತುಸು ಕ್ಷೀಣ. ಇದುವೇ ಇವರು ಸ್ವಸಮುದಾಯದ ಸಾಮಾಜಿಕ–ಧಾರ್ಮಿಕ ಸಮಸ್ಯೆಗಳಿಗೆ ಸ್ಪಂದಿಸುವ ವಿಷಯದಲ್ಲಿ, ಉರ್ದು–ಕೊಂಕಣಿ–ಬ್ಯಾರಿ ಲೇಖಕರಿಗಿಂತ ಹೆಚ್ಚಿನ ವಿಮರ್ಶಾತ್ಮಕತೆ ಮತ್ತು ದಿಟ್ಟತನ ತೋರಿಸಲು ಸಾಧ್ಯವಾಗಿದೆ. ಧಾರ್ಮಿಕ ಮೂಲಭೂತವಾದ, ಪುರುಷವಾದ, ಶೈಕ್ಷಣಿಕ ಹಿಂದುಳಿಯುವಿಕೆ, ಉಗ್ರಗಾಮಿ ಚಟುವಟಿಕೆಗಳು ಮುಸ್ಲಿಂ ಸಮುದಾಯವನ್ನು ಕಾಡುವ ಸಮಸ್ಯೆಗಳಾಗಿರುವ ಸದ್ಯದ ಚಾರಿತ್ರಿಕ ಸಂದರ್ಭದಲ್ಲಿ, ಈ ಲೇಖಕರು ನಿರ್ವಹಿಸಿರುವ ಒಳವಿಮರ್ಶಕರ ಪಾತ್ರವು ಮಹತ್ವದ್ದಾಗಿದೆ. ಈ ಲೇಖಕರು ಒಳವಿಮರ್ಶಕ ಪ್ರಜ್ಞೆಯನ್ನು ಹೀಗೆ ತೀವ್ರವಾಗಿ ಪ್ರಕಟಿಸುತ್ತಿರುವುದಕ್ಕೆ ಇನ್ನೊಂದು ಕಾರಣ, ಇವರ ಹೆಚ್ಚಿನ ಓದುಗರು ಸ್ವಧಾರ್ಮಿಕ ಸಮುದಾಯಕ್ಕೆ ಹೊರಗಿನವರಾಗಿರುವುದು. ನಿರ್ದಿಷ್ಟ ಧರ್ಮವು ಹಲವು ಧರ್ಮಗಳ ನಡುವೆ, ಒಂದು ಧಾರ್ಮಿಕ ಸಮುದಾಯವು ಹಲವು ಧಾರ್ಮಿಕ ಸಮುದಾಯಗಳ ನಡುವೆ ಬದುಕಲೇಬೇಕಾಗಿರುವ ಸಾಮಾಜಿಕ ಸನ್ನಿವೇಶವಿರುವ ಭಾರತದಲ್ಲಿ, ಈ ಆತ್ಮಾವಲೋಕನ ಮನೋಭಾವವು ಬಹಳ ಜರೂರಾಗಿದೆ. ಈ ಲೇಖಕರು ತಮ್ಮದಲ್ಲದ ಧಾರ್ಮಿಕ ಸಮುದಾಯದ ಲೇಖಕರ ಮತ್ತು ಓದುಗರ ಒಡನಾಟಕ್ಕೂ ಹೆಚ್ಚು ತೆರೆದುಕೊಳ್ಳುವರು. ಅಂತರ್ ಸಮುದಾಯ ಸಂಬಂಧವಿರುವ ವಸ್ತುವನ್ನು ಇಟ್ಟುಕೊಂಡು ಧರ್ಮಾತೀತ ದೃಷ್ಟಿಕೋನದಲ್ಲಿ ಬರೆಯುವ ಒತ್ತಡ ಇವರ ಮೇಲೆ ಸಹಜವಾಗಿರುತ್ತದೆ. ಹೀಗಾಗಿಯೇ ಕನ್ನಡದಲ್ಲಿ ಬರೆಯುವ ಲೇಖಕರು ಉರ್ದು–ಕೊಂಕಣಿ–ಬ್ಯಾರಿಗಳಲ್ಲಿ ಬರೆಯುವ ಲೇಖಕರಿಗಿಂತ, ಸ್ವಸಮುದಾಯದಲ್ಲಿರುವ ಮೂಲಭೂತವಾದ ಪುರುಷವಾದ ಪುರೋಹಿತಶಾಹಿಗಳ ವಿಷಯದಲ್ಲಿ ಹೆಚ್ಚು ನಿಷ್ಠುರವಾಗಿರುವರು. ಸಂಪ್ರದಾಯವಾದಿಗಳಿಂದ ಅವರ ಬರೆಹವು ಉರ್ದು ಲೇಖಕರ ಬರೆಹಕ್ಕಿಂತ ಹೆಚ್ಚಿನ ವಿರೋಧ ಮತ್ತು ನಿಷೇಧಗಳನ್ನು ಎದುರಿಸಿದೆ. ಸಮಸ್ಯೆಯೆಂದರೆ, ಈ ಲೇಖಕರಲ್ಲಿ ಸ್ವಧರ್ಮ ಸ್ವಸಮುದಾಯ ವಿಮರ್ಶಿಸುವ ಪ್ರಜ್ಞೆ, ಧರ್ಮಾತೀತ ಮನೋಭಾವ ಮತ್ತು ಪ್ರತಿರೋಧ ಗುಣಗಳು, ಓದುಗ ಲೋಕದಲ್ಲಿ ಸೆಕ್ಯುಲರ್ ಎಂದು ಬಿಂಬಿಸಿಕೊಳ್ಳುವ ಒತ್ತಡವನ್ನು ಸೃಷ್ಟಿಸುವುದು. ಸ್ವಸಮುದಾಯದ ಸಾಮಾಜಿಕ ಧಾರ್ಮಿಕ ಕೇಡುಗಳನ್ನೇ ವಸ್ತುವಾಗಿ ಆರಿಸಿಕೊಂಡು ಅಗತ್ಯಕ್ಕಿಂತ ಹೆಚ್ಚಿನ ಕಟುತ್ವದಲ್ಲಿ ಚಿತ್ರಿಸುವ ನಿದರ್ಶನಗಳನ್ನೂ ಇಲ್ಲಿ ಕಾಣಬಹುದು. ಸಾಂಕೇತಿಕ ಪರಿಭಾಷೆಯಲ್ಲಿ ಮೂಡುವ ಕಾವ್ಯಕ್ಕಿಂತ ಸಾಮಾಜಿಕ ಮೂರ್ತ ವಿವರಗಳಲ್ಲಿ ಹುಟ್ಟುವ ಫಿಕ್ಷನ್‌ನಲ್ಲಿ, ಮುಸ್ಲಿಂ ಸಮುದಾಯದ ತಲಾಖ್, ಬಹುಪತ್ನಿತ್ವ, ಪುರೋಹಿತಶಾಹಿ, ಮೂಲಭೂತವಾದ ಇತ್ಯಾದಿ ಸಮಸ್ಯೆಗಳು ಮುಖ್ಯ ವಸ್ತುವಾಗಿರುವುದು ಗಮನಾರ್ಹ.

ಈ ಮಾದರಿಯ ಲೇಖಕರ ಬರೆಹದಲ್ಲಿ ಸ್ವವಿಮರ್ಶೆ, ಪ್ರಾಮಾಣಿಕತೆ, ದಿಟ್ಟತನಗಳ ಜತೆಗೆ ಮತ್ತೆರಡು ಸಮಸ್ಯೆಗಳು ಕಾಣಿಸಿಕೊಂಡಿವೆ. ಅವೆಂದರೆ: (ಅ) ಮುಸ್ಲಿಮರ ಇಲ್ಲವೇ ಇಸ್ಲಾಮಿನ ಸಮಸ್ಯೆಯನ್ನೇ ಕೇಂದ್ರವಾಗಿಟ್ಟುಕೊಂಡು ಬರೆಯುತ್ತ, ಅವರ ಬರೆಹದಲ್ಲಿ ಸ್ವಸಮುದಾಯ ಬದುಕಿನ ಸಮಸ್ತ ಮಗ್ಗುಲುಗಳನ್ನು ಒಳಗೊಳ್ಳುವ ಸ್ಪೇಸ್ ಸಂಕುಚಿತಗೊಳ್ಳುವುದು. ಕನ್ನಡದಲ್ಲಿ ಮಾಸ್ತಿ, ಕಾರಂತ, ಕುವೆಂಪು, ಮಿರ್ಜಿ ಅಣ್ಣಾರಾಯ, ರಾವಬಹದ್ದೂರ, ದೇವನೂರು, ಲಂಕೇಶ್ ಮುಂತಾದವರು ಸಮುದಾಯದ ದುಗುಡ – ಸಂಭ್ರಮಗಳ ಹಲವು ಮಗ್ಗುಲಿನ ಕಥನವನ್ನು ಕಟ್ಟಿಕೊಡುವುದಕ್ಕೆ ಹೋಲಿಸಿದರೆ ಈ ಅಂಶ ಸ್ಪಷ್ಟವಾಗುತ್ತದೆ. ಮಲೆಯಾಳದ ವೈಕಂ ಮಹಮದ್ ಬಶೀರ್ ಅವರ ಬರೆಹದ ಜತೆಯಿಟ್ಟು ನೋಡಿದರೂ ಇದು ಖಚಿತವಾಗುತ್ತದೆ. ಹೀಗಾಗಿಯೇ (ಅಬ್ದುಲ್ ರಶೀದ್ ಅವರನ್ನು ಹೊರತುಪಡಿಸಿ) ಈ ಲೇಖಕರ ಬರೆಹದ ವಸ್ತು ಸಾಮಾನ್ಯವಾಗಿ ತಲಾಖ್, ಬಹುಪತ್ನಿತ್ವ, ಮತೀಯವಾದ, ಕೋಮುವಾದ, ಕೌಟುಂಬಿಕ ಹಿಂಸೆ ಇತ್ಯಾದಿ ಸಮಸ್ಯಾ ಕೇಂದ್ರಿತವಾಗಿದೆ : (ಆ) ಈ ಲೇಖಕರ ಆತ್ಮವಿಮರ್ಶಾತ್ಮಕ ನೆಲೆಯ ಬರೆಹವನ್ನು ಮತೀಯವಾದಿ ಬಲಪಂಥೀಯರು, ತಮ್ಮ ಸೈದ್ಧಾಂತಿಕ ಉದ್ದೇಶಕ್ಕೆ ಅನುಸಾರವಾಗಿ ಅರ್ಥೈಸುವ ಸಾಧ್ಯತೆ ಸೃಷ್ಟಿಯಾಗಿರುವುದು. ಹಾಗೆ ಬಳಸಿಕೊಂಡು, ಇಸ್ಲಾಮ್ ಮತ್ತು ಮುಸ್ಲಿಂ ಸಮುದಾಯಗಳ ಕುರಿತು, ಮತೀಯವಾದಿ ಸಂಘಟನೆ ಹಾಗೂ ಸಮೂಹ ಮಾಧ್ಯಮಗಳು ಅರೆಶಿಕ್ಷಿತ ಓದುಗರಲ್ಲಿ ಬಿತ್ತುತ್ತಿರುವ ಪೂರ್ವಗ್ರಹಗಳನ್ನು ಪರೋಕ್ಷವಾಗಿ ನ್ಯಾಯಬದ್ಧಗೊಳಿಸುವಂತೆ ಆಗಿರುವುದು. ಶಾಲಾ ಪಠ್ಯಪುಸ್ತಕಗಳಲ್ಲಿರುವ ಸಾರಾ ಅವರ ಕೆಲವು ಬರೆಹಗಳು, ತರಗತಿಗಳಲ್ಲಿ ಇಸ್ಲಾಮಿನ ಮತ್ತು ಮುಸ್ಲಿಮರ ದುರುಳೀಕರಣಕ್ಕೆ ಬಳಕೆಯಾಗುತ್ತಿರುವ ವರದಿಗಳಿವೆ. ಇದು ಮುಸ್ಲಿಂ ಸಂಪ್ರದಾಯವಾದಿಗಳು ಅವರನ್ನು 'ಧರ್ಮವಿರೋಧಿ', 'ಸಮುದಾಯ ದ್ವೇಷಿ', ಎಂದು ಸರಳೀಕರಿಸಿ ಆರೋಪಿಸುವುದಕ್ಕೂ ಕಾರಣವಾಗಿವೆ. ಲೇಖಕರು ಧರ್ಮಾತೀತ ಪ್ರಜ್ಞೆಯನ್ನು ತೋರುವ ಒತ್ತಡವು ಅಸಹಜವಾಗಿ ಏರ್ಪಟ್ಟಾಗ, ಸ್ವಸಮುದಾಯದ ಬಗ್ಗೆ ಏಕಪಕ್ಷೀಯ ಚಿತ್ರವನ್ನು ಕೊಡುವ ಒತ್ತಡವೇರ್ಪಡುತ್ತದೆ. ಮನೆಮಾತಲ್ಲದ ಭಾಷೆಯಲ್ಲಿ ಬರೆಯುವಾಗ ಉಂಟಾಗುವ ಸಾಂಸ್ಕೃತಿಕ ದೂರವು ಸಮುದಾಯ ದ್ವೇಷಿಸುವ ಮತೀಯ ಹಿತಾಸಕ್ತಿಗಳಿಗೆ ಬಲಿಪಶುವಾಗಿಸಿಕೊಳ್ಳುವ ಇಕ್ಕಟ್ಟಿಗೆ ದೂಡುತ್ತದೆ. ಮನೆಮಾತಲ್ಲದ ಪರಿಸರದ ಭಾಷೆಯಲ್ಲಿ ಬರೆಯುವ ಧರ್ಮಾತೀತ ಪ್ರಜ್ಞೆಯ ಲೇಖಕರು ಎದುರಿಸಬೇಕಾಗಿರುವ ವಿಚಿತ್ರ ಇಕ್ಕಟ್ಟು ಇದು. ಸಲ್ಮಾನ್ ರಶ್ದಿ, ಇಂಗ್ಲಿಶಿಗೆ ಬದಲಾಗಿ ಉರ್ದುವಿನಲ್ಲಿ ಬರೆದಿದ್ದರೆ ಅವರ ಬರೆಹದ ಸ್ವರೂಪ ಹೇಗಿರುತ್ತಿತ್ತು ಎಂಬ ಕುತೂಹಲದ ಪ್ರಶ್ನೆ ಇಲ್ಲಿ ಮೂಡುತ್ತದೆ. ಬಂಗಾಳಿಯಲ್ಲಿ ತನ್ನ ಜನರಿಗಾಗಿಯೇ ಅವರ ಭಾಷೆಯಲ್ಲೇ ಬರೆದ ತಸ್ಲೀಮಾ ವಿಷಯದಲ್ಲಿ ಇದರ ಸ್ವರೂಪ ಬೇರೆ ತರಹ ಇದೆ. ತಮ್ಮ ಸಮುದಾಯಗಳ ಸಾಂಸ್ಕೃತಿಕ, ಸಾಮಾಜಿಕ ಅನುಭವವನ್ನು ಸಮುದಾಯದಲ್ಲದ ಭಾಷೆಯಲ್ಲಿ ಅಥವಾ ನುಡಿಗಟ್ಟಿನಲ್ಲಿ ಅಭಿವ್ಯಕ್ತಿಸುತ್ತಿರುವ ಕಾರಣಕ್ಕೆ ಬರೆಹವು ಎದುರಿಸಬೇಕಾಗಿರುವ ಈ ಕಷ್ಟವು ದಲಿತ ಮತ್ತು ಮಹಿಳಾ ಲೇಖಕರಲ್ಲಿಯೂ ಇಂಗ್ಲಿಶಿನಲ್ಲಿ ಬರೆಯುವ ಆಫ್ರಿಕನ್ ಲೇಖಕರಲ್ಲೂ ಇದೆ. ಅಲ್ಲಿ ಅವುಗಳ ಸ್ವರೂಪ ಬಹುರೂಪಿಯಾಗಿದೆ.

ಮನೆಮಾತನ್ನೇ ಅಭಿವ್ಯಕ್ತಿ ಭಾಷೆಯನ್ನಾಗಿಸಿಕೊಂಡಿರುವ ಲೇಖಕರಿಗೆ ಹೋಲಿಸಿದರೆ, ಪರಿಸರದ ಅಥವಾ ಅಧಿಕಾರಸ್ಥ ರಾಜ್ಯಭಾಷೆಯಲ್ಲಿ ಬರೆಯುವ ಲೇಖಕರಿಗೆ ಸಾಂಸ್ಕೃತಿಕ ವಿವರಣೆ ಕೊಡುವ ಒತ್ತಡ ಹೆಚ್ಚು ಬೀಳುತ್ತದೆ. ಕಾವ್ಯ–ನಾಟಕಗಳು ಇದರಿಂದ ತಪ್ಪಿಸಿಕೊಂಡರೂ, ಕತೆ ಮತ್ತು ಕಾದಂಬರಿಗಳು ಈ ಒತ್ತಡ ಅನುಭವಿಸುತ್ತವೆ. ಇದರಿಂದ ಬರೆಹವು ಮಾನವಶಾಸ್ತ್ರೀಯ ಆಯಾಮ ಪಡೆಯುತ್ತದೆ.




ಹತ್ತೊ – ಇಪ್ಪತ್ತೊ ರೂಪಾಯಿಗೆ ನಮ್ಮ ಓಟು ಖರೀದಿಸಿದವರು ನೀವು! ನೀವೀಗ ಕೋಟಿ ಲೆಕ್ಕದಲ್ಲಿ ಮಾರಾಟವಾಗಿದ್ದೀರಂತಲ್ಲ... ಸಾರ್?

ಪ್ರಾದೇಶಿಕ ಕತೆ ಕಾದಂಬರಿಗಳ ಕೊನೆಯಲ್ಲಿ ಕೊಡಲಾಗುವ ಶಬ್ದಕೋಶಗಳು ಈ ಸಾಂಸ್ಕೃತಿಕ ಅನಿವಾರ್ಯತೆಯ ಸಂಕೇತಗಳಾಗಿವೆ. ಈ ಕಷ್ಟವು ಪ್ರಾದೇಶಿಕ ಅಥವಾ ಸಮುದಾಯ ವಿಶಿಷ್ಟ ಅನುಭವ ಲೋಕವನ್ನು ಕಾಣಿಸುವ ಎಲ್ಲ ಬರೆಹಗಾರರ ಮೇಲೂ ಇದೆ. ಕನ್ನಡದಲ್ಲಿ ಬರೆಯುವ ಕ್ರೈಸ್ತ ಮತ್ತು ಮುಸ್ಲಿಂ ಸಮುದಾಯದಿಂದ ಬಂದ ಲೇಖಕರ ವಿಷಯದಲ್ಲಿ ಈ ಕಷ್ಟವು ಪ್ರಾದೇಶಿಕತೆಗಿಂತ ಮಿಗಿಲಾಗಿ ಸಾಂಸ್ಕೃತಿಕ ಮತ್ತು ಧಾರ್ಮಿಕವಾಗಿದೆ. ಮುಸ್ಲಿಂ ಸಮುದಾಯದಿಂದ ಬಂದ ಕಥನಕಾರರ ಬರೆಹದಲ್ಲಿ ಕಾಣಿಸಿರುವ ಈ ಮಾನವಶಾಸ್ತ್ರೀಯ ಆಯಾಮಕ್ಕೆ ಮತ್ತೊಂದು ಕಾರಣವಿದೆ. ಅದೆಂದರೆ ಅವರ ಓದುಗರು ಬಹುಮಟ್ಟಿಗೆ ನಗರ ಅಕ್ಷರಸ್ಥ ಮಧ್ಯಮವರ್ಗಕ್ಕೆ ಸೇರಿದವರಾಗಿರುವುದು. ಈ ವರ್ಗದಲ್ಲಿ ವಿಭಿನ್ನ ಧಾರ್ಮಿಕ ಸಮುದಾಯಗಳ ನಡುವೆ ಸಂವಾದ ಕೊಡುಕೊಳೆಯು ಗ್ರಾಮೀಣ ನೆಲೆಯಲ್ಲಿ ಅಥವಾ ಪಟ್ಟಣಗಳ ಕೆಳಮಧ್ಯಮವರ್ಗದಲ್ಲಿ ಇರುವ ಪ್ರಮಾಣಕ್ಕೆ ಹೋಲಿಸಿದರೆ ಬಹಳ ಕಡಿಮೆ. ಜತೆಗೆ, ಈ ವರ್ಗಗಳಲ್ಲಿ ಹಿಂದೂ ಕೋಮುವಾದ ಮತ್ತು ಮುಸ್ಲಿಂ ಮೂಲಭೂತವಾದ ಮಾಡಿರುವ ಧಾರ್ಮಿಕ ಧ್ರುವೀಕರಣದ ಪ್ರಮಾಣ ಹೆಚ್ಚಿರುತ್ತದೆ. ಬರೆಹದ ಈ ಮಾನವಶಾಸ್ತ್ರೀಯ ಆಯಾಮವು ತಂತಮ್ಮ ಮನೆಮಾತುಗಳಲ್ಲಿ ಅದೇ ಮನೆಮಾತಿನ ಓದುಗರಿಗೆ ಬರೆಯುವ ಲೇಖಕರಲ್ಲಿ ಅಷ್ಟಾಗಿರುವುದಿಲ್ಲ. ಮಾನವಶಾಸ್ತ್ರೀಯ ವಿವರಗಳನ್ನು ಒದಗಿಸಬೇಕಾದ ಈ ಒತ್ತಡವು ಗ್ರಾಮೀಣ ಪ್ರದೇಶದಲ್ಲಿ ಮೌಖಿಕ ನೆಲೆಯಲ್ಲಿ ಹಾಡುಕಟ್ಟಿ ಹಾಡುತ್ತಿರುವ ಮುಸ್ಲಿಂ ಹಿನ್ನೆಲೆಯಿಂದ ಬಂದ ಜನಪದ ಶಾಹಿರ–ಗಾಯಕರ ಪಾಲಿಗಂತೂ ಇರುವುದೇ ಇಲ್ಲ. ಕರ್ನಾಟಕದಲ್ಲಿ ಮೊಹರಂ ಪದ, ಇಲ್ಲವೆ ಲಾವಣಿ ಹಾಡುವ 'ಮುಸ್ಲಿಂ' ಬಂದ ಸಾವಿರಾರು ಜನಪದ ಗಾಯಕರಿದ್ದಾರೆ. ಅವರು ಇಸ್ಲಾಮಿಕ್ ಪುರಾಣ ಮತ್ತು ಇತಿಹಾಸದ ವಸ್ತುವನ್ನು ಇಟ್ಟುಕೊಂಡು ಹಾಡುಕಟ್ಟಿ ಹಾಡುವಾಗ, ತಮ್ಮ ಕೇಳುಗರ ನಡುವೆ ಸಾಂಸ್ಕೃತಿಕ ಧಾರ್ಮಿಕ ತಿಳುವಳಿಕೆಯನ್ನು ಕೊಡುವ ಕಷ್ಟ ಅನುಭವಿಸುವುದಿಲ್ಲ. ಯಾಕೆಂದರೆ, ಈ ತಿಳುವಳಿಕೆಯು ಕೇಳುಗರಲ್ಲಿ ಅವುಗಳ ಬದುಕಿನ ವಿನ್ಯಾಸದ ಕಾರಣದಿಂದ ಈಗಾಗಲೇ ನೆಲೆಸಿದೆ ಅಥವಾ ತಮ್ಮದಲ್ಲದ ಧಾರ್ಮಿಕ ಸಂಸ್ಕೃತಿಗಳ ಲೋಕವನ್ನು ತಮ್ಮದೇ ಎಂದು ಸ್ವೀಕರಿಸುವ ಸಹಜ ಧರ್ಮಾತೀತ ಗುಣ ಅವರಲ್ಲಿದೆ.

ಕನ್ನಡದಲ್ಲಿ ಬರೆಯುವ ಬ್ಯಾರಿ ಕೊಂಕಣಿ ಉರ್ದು ಮನೆಮಾತಿನ ಲೇಖಕರಿಗೆ, ಮುಸ್ಲಿಮೇತರ ಓದುಗರಿಗೆ ತಮ್ಮ ಸಮುದಾಯಗಳ ಧಾರ್ಮಿಕ ಸಾಂಸ್ಕೃತಿಕ ಲೋಕಗಳನ್ನು ಪರಿಚಯಿಸುವ ಕೆಲಸವನ್ನು ಇಸ್ಲಾಮೇತರ ಧಾರ್ಮಿಕ ಸಮುದಾಯದ ಓದುಗರಿಗೆ ಮಾತ್ರವಲ್ಲದೆ, ಸ್ವಸಮುದಾಯದ ಓದುಗರಿಗೂ ಮಾಡುವ ಕಷ್ಟವೂ ಇದೆ. ಕರಾವಳಿ ಭಾಗದ ಲೇಖಕರು ಉತ್ತರ ಕರ್ನಾಟಕದ ಓದುಗರಿಗೆ ಬರೆಯುವಾಗ ಅಥವಾ ಗುಲಬರ್ಗ ಭಾಗದ ಲೇಖಕರು ಕರಾವಳಿ ಭಾಗದ ಓದುಗರಿಗೆ ಬರೆಯುವಾಗ, ಈ ಸಾಂಸ್ಕೃತಿಕ ಅಪರಿಚಿತತೆಯ ಸಮಸ್ಯೆ ಎದುರಾಗುತ್ತದೆ. ಇದಕ್ಕೆ ಕಾರಣ ಕರ್ನಾಟಕದ ಮುಸ್ಲಿಂ ಸಮುದಾಯದ ಜೀವನದಲ್ಲಿ ಪ್ರಾದೇಶಿಕ ಅಪಾರ ವ್ಯತ್ಯಾಸವಿರುವುದು; ಪಿಂಜಾರ, ನವಾಯತ, ಬ್ಯಾರಿ, ಮಾಪ್ಪಾ, ಉರ್ದು ಮನೆ ಮಾತಿನ ದಕ್ಷಿಣ ಕರ್ನಾಟಕದ ಮುಸ್ಲಿಮರ ಭಾಷೆ, ಜೀವನಕ್ರಮ, ಧಾರ್ಮಿಕ ಆಚರಣೆಗಳು ಏಕರೂಪಿಯಾಗಿಲ್ಲ; ಉತ್ತರ ಕರ್ನಾಟಕದ ಮುಸ್ಲಿಮರಲ್ಲಿರುವ ಕೂಡುಸಂಸ್ಕೃತಿಯ ಮೊಹರಂ ಕರಾವಳಿಯಲ್ಲಿಲ್ಲ; ಉರ್ದು ಮಾತಾಡುವ ಮುಸ್ಲಿಮರು ಹನಫಿಗಳಾಗಿದ್ದರೆ, ಬ್ಯಾರಿ ನವಾಯತ ಮಾಪ್ಪಾ ಮಾತಾಡುವ ಮುಸ್ಲಿಮರು ಶಾಫಿ ಪಂಗಡಕ್ಕೆ ಸೇರಿದವರು. ಉತ್ತರ ಕರ್ನಾಟಕದ ಮುಸ್ಲಿಮರು ಮುಖ್ಯವಾಗಿ ಕೃಷಿಪ್ರಧಾನ ಆರ್ಥಿಕತೆಯವರಾದರೆ, ಮಧ್ಯಕರ್ನಾಟಕ ಮತ್ತು ಕರಾವಳಿಯ ಮುಸ್ಲಿಮರು ವಣಿಕಪ್ರಧಾನ ಆರ್ಥಿಕತೆಗೆ ಸೇರಿದವರು. ಕರ್ನಾಟಕದ ಮುಸ್ಲಿಮರು ಪ್ರಾದೇಶಿಕವಾಗಿ ಸಾಮಾಜಿಕವಾಗಿಯೂ ಸಾಂಸ್ಕೃತಿಕವಾಗಿಯೂ ಏಕರೂಪಿ ಸಮುದಾಯವಲ್ಲ. ಕೆಲವು ಕಡೆ ಅವರ ರಾಜಕೀಯ ಒಲವು ನಿಲುವು ಸಹ ಭಿನ್ನವಾಗಿವೆ. ಹೀಗಾಗಿ ಕರಾವಳಿ ಭಾಗದ ಲೇಖಕರು ಬರೆಯುವ ಮುಸ್ಲಿಮರ ಸಮಸ್ಯೆ ಮತ್ತು ಸಾಂಸ್ಕೃತಿಕ ವಿಶಿಷ್ಟತೆಗಳು ಉತ್ತರ ಕರ್ನಾಟಕದ ಮುಸ್ಲಿಂ ಓದುಗರಿಗೆ ಪರಕೀಯ ಎನಿಸುತ್ತವೆ. ವಿಶೇಷವೆಂದರೆ, ಇದೇ ಕರಾವಳಿಯ ಬ್ಯಾರಿ ಮುಸ್ಲಿಮರು ಬರೆಯುವ ಸಾಹಿತ್ಯವು ಕೇರಳದ ಮಲೆಯಾಳ ಮುಸ್ಲಿಂ ಓದುಗರಿಗೆ ಅಷ್ಟು ಪರಕೀಯವೆನಿಸುವುದಿಲ್ಲ. ಯಾಕೆಂದರೆ, ಕೇರಳದ ಮತ್ತು ಕರ್ನಾಟಕ ಕರಾವಳಿಯ ಮುಸ್ಲಿಮರು, ಧಾರ್ಮಿಕ ಸಾಂಸ್ಕೃತಿಕ ರಾಜಕೀಯ ಭಾಷಿಕ ವಿಷಯದಲ್ಲಿ ಬಹಳಷ್ಟು ಸಾಮ್ಯ ಹೊಂದಿದ್ದಾರೆ. ಇಬ್ಬರದೂ ಅರಬ್ ಇಸ್ಲಾಮಿನ ಹಿನ್ನೆಲೆಯಿಂದ ಹುಟ್ಟಿದ ಅರಬ್ಬಿ ಮಲೆಯಾಳದ ಮಿಶ್ರಣದ ಸಾಂಸ್ಕೃತಿಕ ಜಗತ್ತು. ಬ್ಯಾರಿ ಸಮುದಾಯದಿಂದ ಬಂದ ಲೇಖಕರು ಕರ್ನಾಟಕದ ಉರ್ದು ಲೇಖಕರಿಗಿಂತ ಹೆಚ್ಚಾಗಿ ಮಲೆಯಾಳ ಲೇಖಕರ ಜತೆಗೆ ಹೆಚ್ಚಿನ ಸಾಂಸ್ಕೃತಿಕ ಸಂಬಂಧ ಇರಿಸಿಕೊಂಡಿದ್ದಾರೆ. ಅವರ ಮೇಲೆ ಹಳೇ ಮೈಸೂರು ಭಾಗದ ನಿಸಾರ್ ಅಹಮದ್ ಅವರ ಅಥವಾ ಬಿಜಾಪುರದ ರಂಜಾನ್ ದರ್ಗಾ ಅವರ ಪ್ರಭಾವಕ್ಕಿಂತ ಮಲೆಯಾಳದ ವೈಕಂ ಮಹಮದ್ ಬಶೀರರ ಇಲ್ಲವೇ ತಗಳಿ ಶಿವಶಂಕರ ಪಿಳ್ಳೈ ಅವರ ಪ್ರಭಾವ ಹೆಚ್ಚಿದೆ. ಈ ಹಿನ್ನೆಲೆಯಲ್ಲಿ ಸಾರಾ ಅವರು ಮಲೆಯಾಳದಿಂದ ಮಾಡುತ್ತಿರುವ ಅನುವಾದಗಳನ್ನು ಗಮನಿಸಬೇಕಾಗಿದೆ; ವೈಕಂ ಕುರಿತು ಕಟ್ಟಾಡಿಯವರು ಬರೆದ ಬರೆಹವನ್ನು ಗಮನಿಸಬಹುದಾಗಿದೆ. ಚಾರಿತ್ರಿಕವಾಗಿ ಹಳೇ ಮೈಸೂರು ಮತ್ತು ಉತ್ತರ ಕರ್ನಾಟಕದ ಮುಸ್ಲಿಮರ ಧರ್ಮೋ–ಸಾಂಸ್ಕೃತಿಕ ಲೋಕವು ಮೊಗಲ್ ಬಹಮನಿ–ಆದಿಲಶಾಹಿ ಆಳ್ವಿಕೆಗಳ ಕಾಲದಲ್ಲಿ ರೂಪುಗೊಂಡ ಪಾರಸಿ–ಉರ್ದು ಮೂಲದಿಂದ ಮೂಡಿದ್ದಾಗಿದೆ.

ಧರ್ಮ ಮತ್ತು ಭಾಷಿಕ ಭಿನ್ನತೆಗಳು ಸಾಹಿತ್ಯ ಸೃಷ್ಟಿ ಮತ್ತು ಸಂವಹನದಲ್ಲಿ ಉಂಟುಮಾಡುವ ಬಿಕ್ಕಟ್ಟುಗಳ ಕುರಿತು ಈ ಚರ್ಚೆ ಮಾಡುವಾಗ ಒಂದಂಶವನ್ನು ಮರೆಯಲಾಗದು. ಅದೆಂದರೆ ಜಗತ್ತಿನ ಯಾವುದೇ ದೇಶ, ನಾಗರಿಕತೆ, ಸಂಸ್ಕೃತಿ, ಕಾಲಘಟ್ಟದಲ್ಲಿ ಹುಟ್ಟಿದ ಸಾಹಿತ್ಯವನ್ನು ಅವುಗಳ ಪರಿಚಯದ ಹಂಗಿಲ್ಲದೆಯೂ ಓದುವ ಸಾಧ್ಯತೆ. ಸಾಹಿತ್ಯದ ಮೂಲಕವೇ ಆಯಾ ಸಮಾಜದ ಜನ ಬದುಕಿನ ಚಿತ್ರಗಳನ್ನು ಅವರ ಸಾಂಸ್ಕೃತಿಕ ಲೋಕಗಳನ್ನು ಓದುಗರು ತಮ್ಮ ಅನುಭವದ ಭಾಗವಾಗಿಸಿಕೊಳ್ಳಬಲ್ಲರು. ಚಿನುವಾ ಅಚಿಬೆ, ಕಾಫ್ಕಾ, ಮಾರ್ಕ್ವೆಜ್, ಟಾಲ್‌ಸ್ಟಾಯ್, ಶೇಕ್ಸ್‌ಪಿಯರ್ ಕನ್ನಡ ಓದುಗರ ಸಂವೇದನೆಯ ಭಾಗವಾಗಿರುವುದು ಹೀಗೆ. ಪರಿಸ್ಥಿತಿ ಹೀಗಿರುತ್ತ, ಕರ್ನಾಟಕದಂತಹ ಒಂದು ಪ್ರದೇಶದ ವಿಭಿನ್ನ ಭಾಗಗಳಲ್ಲಿರುವ ಅಥವಾ ಒಂದೇ ಧರ್ಮದ ವಿವಿಧ ಪಂಗಡಗಳಿಗೆ ಸೇರಿದ ಲೇಖಕರ ಸಾಹಿತ್ಯದಲ್ಲಿರುವ ಸಾಂಸ್ಕೃತಿಕ ವಿಶಿಷ್ಟತೆ ಮತ್ತು ಅಪರಿಚಿತತೆಗಳು ದೊಡ್ಡ ಸಂಗತಿಯಲ್ಲ. ಆದರೆ ಇಲ್ಲಿರುವ ವಿಶಿಷ್ಟತೆ, ವೈವಿಧ್ಯ ಮತ್ತು ಭಿನ್ನತೆಗಳನ್ನು, ಮಧ್ಯಮವರ್ಗದ ಕಾಮನ್‌ಸೆನ್ಸಿನ ಭಾಗವಾಗಿರುವ 'ನಿರ್ದಿಷ್ಟ ಧಾರ್ಮಿಕ–ಸಾಮಾಜಿಕ ಸಮುದಾಯಗಳು ಏಕರೂಪಿಯಾಗಿರುತ್ತವೆ' ಎಂಬ ಜನಪ್ರಿಯ ಗ್ರಹಿಕೆಯನ್ನು ಒಡೆಯುವ ಉದ್ದೇಶಕ್ಕಾಗಿ ಸೂಚಿಸಬೇಕಾಗಿದೆ. ಮಾನವ ಬದುಕನ್ನು ಕಥನಿಸುವ ವಿಷಯದಲ್ಲಿ ಸಾಮಾನ್ಯೀಕರಣ ಗುಣವುಳ್ಳ ಸಾಹಿತ್ಯವು ಸಾಮಾಜಿಕ ಸಾಂಸ್ಕೃತಿಕ ಪ್ರಾದೇಶಿಕ ಆಗಿರುವ ಈ ಭಿನ್ನತೆ ಮತ್ತು ವೈವಿಧ್ಯಗಳನ್ನು ಸಹ ಪ್ರತಿಬಿಂಬಿಸುತ್ತದೆ.

ವೈವಿಧ್ಯ ಮತ್ತು ಭಿನ್ನತೆಗಳ ಈ ತರ್ಕವು ಕರ್ನಾಟಕದ ಉರ್ದು ಮತ್ತು ಕೊಂಕಣಿ ಲೇಖಕರಿಗೂ ಬಹುಮಟ್ಟಿಗೆ ಅನ್ವಯವಾಗುತ್ತದೆ. ಉರ್ದು ಲೇಖಕರು ಅಖಿಲ ಭಾರತ ಉರ್ದು ಲೇಖಕರ ಜತೆಗೂ, ಕೊಂಕಣಿ ಲೇಖಕರು ಮಹಾರಾಷ್ಟ್ರ ಗೋವಾದ ಕೊಂಕಣಿ ಲೇಖಕರ ಜತೆಗೂ ಆಳವಾದ ಸಂಬಂಧ ಇರಿಸಿಕೊಂಡಿದ್ದಾರೆ. ಅಭಿವ್ಯಕ್ತಿ ಭಾಷೆಯ ಆಯ್ಕೆ ಕಾರಣದಿಂದಲೇ ಅವರಿಗೆ ತಾವು ವಾಸಿಸುತ್ತಿರುವ ಪ್ರದೇಶಕ್ಕೆ ಸೇರಿದ ಕನ್ನಡ ಸಾಹಿತ್ಯದ ಜತೆಗೆ ಸಾಧ್ಯವಾಗದ ಸಂಬಂಧವು, ನೆರೆ ರಾಜ್ಯಗಳಲ್ಲಿರುವ ಲೇಖಕರ ಜತೆ ಸಾಧ್ಯವಾಗಿದೆ. ಕರ್ನಾಟಕದ ಉರ್ದು ಸಾಹಿತ್ಯದ ಓದುಗ ಲೋಕದ ಬಗ್ಗೆ ಒಂದು ಮಾತನ್ನು ಹೇಳಬೇಕು. ಇದು ಉತ್ತರ ಭಾರತದಲ್ಲಿರುವಂತೆ ಸರ್ವಧರ್ಮೀಯ ಓದುಗ ಲೋಕವನ್ನು ಕಟ್ಟಿಕೊಳ್ಳಲು ಸಾಧ್ಯವಾಗದೆ ಮುಸ್ಲಿಂ ಸಮುದಾಯದ ಓದುಗರಿಗೆ ಸೀಮಿತವಾಗಿದೆ. ಈ ಎಲ್ಲ ಸಂಗತಿಗಳು ಲೇಖಕರ ಧಾರ್ಮಿಕ ಹಿನ್ನೆಲೆ ಒಂದೇ ಆಗಿದ್ದರೂ, ಅವರ ಬರೆಹದಲ್ಲಿ ಧರ್ಮಕ್ಕಿಂತಲೂ ಸಾಹಿತ್ಯಾಭಿವ್ಯಕ್ತಿಗೆ ಅವರು ಆಯ್ಕೆ ಮಾಡಿಕೊಳ್ಳುವ ಭಾಷೆಯು ಮಹತ್ವದ ಸ್ಥಾನವನ್ನು ಪಡೆದಿರುವುದನ್ನು ಮತ್ತು ಲೇಖಕರ ನಡುವಣ ಸಂಬಂಧದ ಸ್ವರೂಪ ನಿರ್ಣಯಿಸುತ್ತಿರುವುದನ್ನು ಸೂಚಿಸುತ್ತವೆ.

೪

ಮೂರನೆಯದಾಗಿ – ಮನೆಮಾತು ಮತ್ತು ಪರಿಸರದ ಭಾಷೆ ಎರಡರಲ್ಲೂ ಬರೆಯುತ್ತಿರುವವರು. ಕನ್ನಡದಲ್ಲಿ ಈ ಮಾದರಿಯ ಕೆಲವೇ ಲೇಖಕರು ಕಾಣಸಿಗುತ್ತಾರೆ–ಕನ್ನಡ–ಉರ್ದುಗಳಲ್ಲಿ ಬರೆಯುವ ಮುದ್ದಣ್ಣ ಮಂಜರ್, ರಾಘವೇಂದ್ರರಾವ್ 'ಜಜ್ಬ್', ಮಾಹೆರ್ ಮನ್ಸೂರ್, ಸಂವರ್ತ ಸಾಹಿಲ್; ಕನ್ನಡ–ಬ್ಯಾರಿಗಳಲ್ಲಿ ಬರೆಯುವ ಫಕೀರ್ ಮಹಮದ್ ಕಟ್ಪಾಡಿ ಮುಂತಾದವರು. ಕರಾವಳಿ

ಭಾಗದಲ್ಲಿ ತುಳು ಮತ್ತು ಕನ್ನಡದಲ್ಲಿ ಬರೆಯುವ, ಹೈದರಾಬಾದ್ ಕರ್ನಾಟಕದಲ್ಲಿ ನಿಜಾಮರಾಳ್ವಿಕೆಯ ಕಾಲದಲ್ಲಿ ಕನ್ನಡ ಮತ್ತು ಉರ್ದುಗಳಲ್ಲಿ ಬರೆದ ಲೇಖಕರ ನಿದರ್ಶನಗಳೂ ಇವೆ. ಇಲ್ಲಿ ಕನ್ನಡ ಮತ್ತು ಉರ್ದುಗಳು ಪರಿಸರ ಭಾಷೆಗಳಾಗಿ ಅಲ್ಲ, ಪ್ರಭುತ್ವದ ಭಾಷೆಗಳಾದ ಕಾರಣಕ್ಕೆ ಆಯ್ಕೆಗೊಂಡಿವೆ. ಹೀಗಾಗಿ ಇಲ್ಲಿ ಧಾರ್ಮಿಕ ಆಯಾಮದ ಪ್ರಶ್ನೆ ಅಷ್ಟಾಗಿ ಬರುವುದಿಲ್ಲ. ಆದರೆ ಮುಸ್ಲಿಂ ಸಮುದಾಯದಿಂದ ಬಂದ ಲೇಖಕರು ಕನ್ನಡ–ಉರ್ದು, ಕನ್ನಡ–ಬ್ಯಾರಿ ಭಾಷೆಗಳನ್ನು ಅಭಿವ್ಯಕ್ತಿಗಾಗಿ ಆಯ್ಕೆ ಮಾಡಿಕೊಂಡಾಗ, ಕನ್ನಡವು ಪರಿಸರದ ಮಾತ್ರವಲ್ಲ, ರಾಜ್ಯಪ್ರಭುತ್ವದ ಭಾಷೆಯಾಗಿಯೂ ಆಗಮಿಸುತ್ತದೆ. ಈ ಆಗಮನವು ಧಾರ್ಮಿಕ ಸಮುದಾಯದ ಅನುಭವವನ್ನು ಅಭಿವ್ಯಕ್ತಿಗೊಳಿಸುವುದಕ್ಕೆ ಅದರದ್ದೇ ಆದ ಬಿಕ್ಕಟ್ಟು ಮತ್ತು ಸಾಧ್ಯತೆಗಳನ್ನು ಸೃಷ್ಟಿಮಾಡುತ್ತದೆ.

ಮನೆಮಾತಿಗೆ ಬದಲಾಗಿ ಪರಿಸರದ ಭಾಷೆಯನ್ನು ಅಭಿವ್ಯಕ್ತಿಯ ಮಾಧ್ಯಮವಾಗಿಸಿಕೊಂಡು ಎಲ್ಲ ಧಾರ್ಮಿಕ – ಸಾಮಾಜಿಕ ಸಮುದಾಯಗಳ ಓದುಗರಿಗೆ ಬರೆಯುತ್ತ, ಸಾಂಸ್ಕೃತಿಕ ಪರಕೀಯತೆ ಅನುಭವಿಸುತ್ತಿರುವ (ಎರಡನೇ ಮಾದರಿಗೆ ಸೇರಿದ) ಲೇಖಕರು, ತಮ್ಮ ಬಿಕ್ಕಟ್ಟನ್ನು ನಿವಾರಿಸಿಕೊಳ್ಳಲು ಕೆಲವು ಉಪಾಯ ಕಂಡುಕೊಂಡಿದ್ದು ಅವು ಸ್ವಾರಸ್ಯಕರವಾಗಿವೆ :

ಅ) ಅಭಿವ್ಯಕ್ತಿಗೆ ಆಯ್ಕೆ ಮಾಡಿಕೊಂಡ ಭಾಷೆಯಲ್ಲೇ ಸಮುದಾಯ ಸಂಸ್ಕೃತಿಯನ್ನು ಪ್ರತಿನಿಧಿಸುವಂತೆ ಉರ್ದು ಪಾರಸಿ ಅರಬ್ಬಿ ಶಬ್ದಗಳನ್ನು ಬೆರೆಸುವುದು. ಸಂಸ್ಕೃತಮಯ ಕನ್ನಡದಲ್ಲಿ ಬಲಪಂಥೀಯ ರಾಷ್ಟ್ರೀಯವಾದಿಗಳಿಗೆ ಪ್ರಿಯವಾದ ನಾಡಗೀತೆ ಮತ್ತು 'ಹಿಂದೂ' ದೇವತೆಗಳ ಮೇಲೆ ಸ್ತುತಿಗೀತೆಗಳನ್ನು ರಚಿಸಿದ ನಿಸಾರ್ ಅಹಮದ್, ತಮ್ಮ ಬರೆಹದ ಬದುಕಿನಲ್ಲಿ ನಿರ್ದಿಷ್ಟ ಘಟ್ಟದಿಂದ ಉರ್ದು ಮತ್ತು ಪಾರಸಿ ಪದಗಳನ್ನು ಬೆರೆಸಲು ಆರಂಭಿಸಿದ್ದನ್ನು ಗಮನಿಸಬೇಕು. ಇದು ಸಮುದಾಯದ ಸಾಂಸ್ಕೃತಿಕ ಗುರುತುಗಳಿಂದ ದೂರಗೊಂಡಿರುವ ಆತಂಕದಿಂದ ಹುಟ್ಟಿದ ಆತ್ಮವಿಮರ್ಶೆ ಮತ್ತು 'ಘರ್‌ವಾಪಸಿ'ಯ ಹೊರಳಿಕೆಯ ಘಟ್ಟದಂತೆ ತೋರುವುದು. ಈ ಭಾಷಿಕ ಮಿಶ್ರಣದ ಘಟ್ಟದಲ್ಲಿಯೇ ಅವರು ಬಲಪಂಥೀಯ ಕೋಮುವಾದವನ್ನು ಟೀಕಿಸುವ ಮುಸ್ಲಿಮ್ ಸಮುದಾಯದ ಚಹರೆಯ ಬಿಕ್ಕಟ್ಟುಗಳನ್ನು ಕಾಣಿಸುವ 'ಅಮ್ಮ, ಆಚಾರ ಮತ್ತು ನಾನು', 'ನಿಮ್ಮೊಡನಿದ್ದೂ ನಿಮ್ಮಂತಾಗದೆ', 'ಸವತಿ ಮಕ್ಕಳ ಹಾಗೆ ಕಾಡಬೇಡವ್ವ' ಮುಂತಾದ ಕವನಗಳನ್ನು ಬರೆದರು. ಇದು ಬರೆಹದಲ್ಲಾಗುವ ಮಾಡುವ ಭಾಷಿಕ ಮಿಶ್ರಣಕ್ಕೂ ಲೇಖಕರು ಸಾಂಸ್ಕೃತಿಕವಾಗಿ ತಾಳುವ ನಿಲುವಿಗೂ ಇರುವ ಅಂತರ್ ಸಂಬಂಧಗಳನ್ನು ಸೂಚಿಸುವ ವಿಶಿಷ್ಟ ಸಂಗತಿಯಾಗಿದೆ.

ಆ) ಧಾರ್ಮಿಕ ಮತ್ತು ಸಾಂಸ್ಕೃತಿಕ ವಿಶಿಷ್ಟ ಪರಿಭಾಷೆಗಳನ್ನು ಹೆಚ್ಚೆಚ್ಚು ಬಳಸುವುದು. ನಿದರ್ಶನಕ್ಕೆ – ಇದ್ದತ್ (ಗಂಡ ಸತ್ತಮೇಲೆ ವಿಧವೆ ಪತ್ನಿ ಆಚರಿಸುವ ಏಕಾಂತವಾಸ), ವಜೂ (ನಮಾಜಿಗೆ ಮುನ್ನ ಮಾಡುವ ದೇಹಶುದ್ಧಿ), ನಮಾಜ್ (ಪ್ರಾರ್ಥನೆ), ಜನ್ನತ್ (ಸ್ವರ್ಗ), ತಲಾಖ್ (ಪತಿಯಾದವನು ಪತ್ನಿಗೆ ಕೊಡುವ ವಿಚ್ಛೇದನ), ಶೀರ್‌ಖುರ್ಮಾ (ಹಾಲು ಹಾಕಿ ಮಾಡಿದ ಶೇವಿಗೆ ಪಾಯಸ) ಮುಂತಾದವು. ಈ ವಿಶಿಷ್ಟ ಪರಿಭಾಷೆಗಳಿಗೆ ಕನ್ನಡಾರ್ಥವನ್ನು ಕಂಸದಲ್ಲಿ ಕೊಡುವ ಮೂಲಕ ಓದುಗರ ಸಂವಹನದಲ್ಲಿ ಉಂಟಾಗುವ ಸಾಂಸ್ಕೃತಿಕ ಅಪರಿಚಿತತೆಯನ್ನು ನಿವಾರಿಸುವುದು. ಕೆಲವು ಲೇಖಕರು ಇಂತಹ ಸಂಸ್ಕೃತಿ ವಿಶಿಷ್ಟ ಶಬ್ದಗಳಿಗೆ ಅರ್ಥ ಕೊಡಲು ಹೋಗದೆ, ಓದುಗರೇ ಅದನ್ನು ಹುಡುಕಿಕೊಳ್ಳುವ ಅನಿವಾರ್ಯತೆ ಸೃಷ್ಟಿಸುವಂತೆ ಬರೆಯುವುದುಂಟು – ದೇವನೂರರು 'ಕುಸುಮಬಾಲೆ'ಯಲ್ಲಿ ಮಾಡಿರುವಂತೆ.

ಇ) ಪರಿಸರ ಭಾಷೆಯಿಂದ ಮನೆಮಾತಿನಲ್ಲಿ ಬರೆಯುವುದಕ್ಕೆ ಹೊರಳಿಕೊಳ್ಳುವುದು. ಈಚೆಗೆ ಹಂಜ ಮಲಾರ್, ಮಹಮದ್ ಕುಳಾಯಿ, ಫಕೀರ್ ಮಹಮದ್ ಕಟ್ಪಾಡಿ ಮುಂತಾದವರು, ಕನ್ನಡದ ಜತೆಗೆ ಬ್ಯಾರಿಯಲ್ಲಿಯೂ ಬರೆಯುವುದಕ್ಕೆ ಶುರು ಮಾಡಿದ್ದಾರೆ. ಕನ್ನಡದಿಂದ ಬ್ಯಾರಿಗೆ ಹೊರಳಿಕೊಂಡಿರುವ ಈ ದ್ವಿಭಾಷಿಕ ಬರೆಹದ ನಿದರ್ಶನಗಳು ಇರುವಂತೆ, ಕನ್ನಡದಿಂದ ಉರ್ದುವಿಗೆ ಹೊರಳಿಕೊಂಡಿರುವ ನಿದರ್ಶನಗಳು ಸಿಗುವುದಿಲ್ಲ. ಇದಕ್ಕೆ ಬ್ಯಾರಿ ಮತ್ತು ಕನ್ನಡ ಎರಡಕ್ಕೂ ಲಿಪಿ ಒಂದೇ ಆಗಿದ್ದು, ಕನ್ನಡ ಮತ್ತು ಉರ್ದುಗಳಿಗೆ ಲಿಪಿಯು ಬೇರೆಬೇರೆ ಆಗಿರುವುದು ಒಂದು ಕಾರಣವಿರಬಹುದು. ಯೂರೋಪಿಯನ್ ಭಾಷೆಗಳನ್ನು ಅಭಿವ್ಯಕ್ತಿಗಾಗಿ ಆರಿಸಿಕೊಂಡಿದ್ದ ಅನೇಕ ಆಫ್ರಿಕಾದ ಲೇಖಕರು ಆ ಭಾಷೆಗಳಿಗೆ ವಿದಾಯ ಹೇಳಿ ತಮ್ಮ ಸಮುದಾಯದ ಭಾಷೆಯಲ್ಲಿ ಬರೆಯಲು ಮರಳಿದ್ದನ್ನು ಇಲ್ಲಿ ಉಲ್ಲೇಖಿಸಬೇಕು. ಆಫ್ರಿಕನ್ ಸಮುದಾಯಗಳ ಬದುಕನ್ನು ವಸ್ತುವಾಗಿಸಿಕೊಂಡು, ಈ ಸಮುದಾಯಗಳ ಜೀವನಕ್ರಮ ಸಂಸ್ಕೃತಿಯನ್ನು ತಮ್ಮ ವಸಾಹತುಶಾಹಿ ಆಳ್ವಿಕೆಯಿಂದ ಉಧ್ವಸ್ತಗೊಳಿಸಿರುವ ಯೂರೋಪಿ ದೇಶಗಳಿಗೆ, ಅವುಗಳ ಭಾಷೆಗಳಾದ ಪೋರ್ಚುಗೀಸ್, ಫ್ರೆಂಚ್ ಮತ್ತು ಇಂಗ್ಲಿಶಿನಲ್ಲಿ ಬರೆಯುವ ಆಫ್ರೊ–ಯೂರೋಪಿಯನ್ ಲೇಖಕರ ಸಮುದಾಯ ಸಂಬಂಧದ ಸಮಸ್ಯೆಯನ್ನು ಕುರಿತು, ಗೂಗಿ ವಾ ಥಿಯಾಂಗೊ ತಮ್ಮ 'ದಿ ಡಿಕಾಲೊನೈಸಿಂಗ್ ದಿ ಮೈಂಡ್' ಕೃತಿಯಲ್ಲಿ ಸುದೀರ್ಘವಾಗಿ ಚರ್ಚಿಸುತ್ತಾರೆ. ಪರಿಸರ ಭಾಷೆ (ಕನ್ನಡ) ಮತ್ತು ಮನೆಮಾತು (ತಮಿಳು) ಆಗಿದ್ದು ಇಂಗ್ಲಿಶನ್ನು ಅಭಿವ್ಯಕ್ತಿ ಭಾಷೆಯಾಗಿಸಿಕೊಂಡು ಅಂತರರಾಷ್ಟ್ರೀಯ ಓದುಗ ಸಮುದಾಯಕ್ಕೆ ಬರೆದ ಆರ್. ಕೆ. ನಾರಾಯಣ್ ಹಾಗೂ ರಾಜಾರಾವ್ ಮುಂತಾದವರ ಬರೆಹದ ವಿಶಿಷ್ಟತೆ ಮತ್ತು ಸಾಂಸ್ಕೃತಿಕ ಇಕ್ಕಟ್ಟುಗಳು ಇದೇ ಸ್ವರೂಪದವಾಗಿದ್ದವು. ಆದರೆ ಗೂಗಿಯಂತೆ ಈ ಇಕ್ಕಟ್ಟನ್ನು ಅವರು ಗೂಗಿಯಂತೆ ನಾಡಿನ ಅಥವಾ ಸಮುದಾಯದ ಅಸ್ತಿತ್ವದ ಸಮಸ್ಯೆಯಾಗಿ ಮುಖಾಮುಖಿ ಮಾಡಲಿಲ್ಲ. ಮಹಾರಾಷ್ಟ್ರ, ಆಂಧ್ರ, ತೆಲಂಗಾಣ, ಗುಜರಾತುಗಳಲ್ಲಿ ಮರಾಠಿ–ತೆಲುಗು–ಗುಜರಾತಿನಲ್ಲಿ ಬರೆಯುತ್ತಿರುವ ಉರ್ದು ಮನೆ ಮಾತಿನ 'ಮುಸ್ಲಿಂ' ಲೇಖಕರು ಅಭಿವ್ಯಕ್ತಿ ಭಾಷೆಯ ಈ ಇಕ್ಕಟ್ಟನ್ನು ಹೇಗೆಲ್ಲ ಮುಖಾಮುಖಿ ಮಾಡಿದರೂ ಎಂಬುದು ಇನ್ನಷ್ಟೆ ತಿಳಿಯಬೇಕಿದೆ. ಆದರೆ ಅನುಭವಕ್ಕೆ ಮೂಲವಾಗಿರುವ ಮತ್ತು ಓದುಗಾರಿಕೆಯಲ್ಲಿ ಸ್ವೀಕರಿಸುವ ವರ್ಗ ಮತ್ತು ಸಮುದಾಯಗಳು ಭಿನ್ನವಾಗಿರುವ ಈ ಸಮಸ್ಯೆ ಬಂಗಾಳಿ, ತಮಿಳು, ಮಲೆಯಾಳ, ಮುಸ್ಲಿಂ ಲೇಖಕರಿಗೆ ಅಷ್ಟಾಗಿ ಇದ್ದಂತಿಲ್ಲ. ಯಾಕೆಂದರೆ, ಅವರ ಮನೆಮಾತು ಮತ್ತು ಪರಿಸರದ ಭಾಷೆಗಳು ಬಹುಮಟ್ಟಿಗೆ ಒಂದೇ ಆಗಿವೆ.

ಈ) ಪರಿಸರ ಭಾಷೆಯಲ್ಲಿ ಬರೆದಿದ್ದನ್ನು ಸಮುದಾಯದ ಭಾಷೆಗಳಿಗೆ ಅನುವಾದ ಮಾಡುವುದು. ಮನೆಮಾತಿನ ಮೂಲಕ ಹುಟ್ಟಿದ ಅನೇಕ ಬರೆಹಗಳು ಪರಿಸರದ ಭಾಷೆಗೂ ಕನ್ನಡದಲ್ಲಿ ಹುಟ್ಟಿದ ಬರೆಹಗಳು ಲೇಖಕರ ಮನೆಮಾತಿಗೂ ಅನುವಾದಗೊಳ್ಳುವ ಪ್ರಕ್ರಿಯೆ, ತುಳು, ಕೊಂಕಣಿ ಮತ್ತು ಬ್ಯಾರಿ ಭಾಷೆಗಳಿಗೆ ಸಂಬಂಧಪಟ್ಟು ಜರುಗಿರುವ ನಿದರ್ಶನಗಳಿವೆ. ಇದೇ ತರಹ ಕರ್ನಾಟಕದಲ್ಲಿ ಎಂ. ಜಿ. ಕೃಷ್ಣಮೂರ್ತಿ, ಎ. ಕೆ. ರಾಮಾನುಜನ್, ಎಂ. ಎನ್. ಶ್ರೀನಿವಾಸ್ ಮುಂತಾದ ಲೇಖಕರು ಮೂಲ ಇಂಗ್ಲಿಶಿನಲ್ಲಿ ಬರೆದ ಬರೆಹಗಳು, ಅವರ ಮನೆಮಾತು ಇಲ್ಲವೇ ಪರಿಸರ ಭಾಷೆಯಾದ ಕನ್ನಡಕ್ಕೆ ಅನುವಾದಗೊಂಡವು. ಇದೊಂದು ಮರಳಿ ಮನೆಗೆ ತರುವ ವಿಚಿತ್ರ ಉಪಕ್ರಮ. ಆದರೆ ಮೊದಲನೆಯ ನಿದರ್ಶನದಲ್ಲಿ ಮೂಲರಚನೆ ಮತ್ತು ಅನುವಾದಗೊಂಡ ಎರಡೂ ದೇಶೀ ಭಾಷೆಗಳಾಗಿವೆ; ಎರಡನೆಯ ನಿದರ್ಶನದಲ್ಲಿ ಮೂಲರಚನೆ ವಿದೇಶಿ ಭಾಷೆಯಾಗಿದ್ದು ಅನುವಾದದ ಭಾಷೆ ದೇಶೀಯವಾಗಿದೆ. ಮೊದಲನೆಯದರಲ್ಲಿ ಧಾರ್ಮಿಕ ಆಯಾಮವಿದೆ. ಎರಡನೆಯದರಲ್ಲಿ ಅದು ಇಲ್ಲ.

ಉ) ಸಮುದಾಯದ ಅಥವಾ ಪರಿಸರದ ಭಾಷೆಯಲ್ಲಿ ಬರೆದಿದ್ದನ್ನು ನವಮೌಖಿಕ ರೂಪದಲ್ಲಿ ಪ್ರಕಟಿಸುವುದು. ಇದು ತಮ್ಮ ಸಮುದಾಯದ ಜತೆ ಅಕ್ಷರದ ಮೂಲಕ ಸಂವಹನ ಸಾಧ್ಯವಾಗದೆ ಹೋದಾಗ ದಲಿತ ಲೇಖಕರು ಹಾಡು ಬರೆದು ಈ ಸಂವಹನ ತಡೆಯನ್ನು ನಿವಾರಿಸಿಕೊಂಡಿದ್ದನ್ನು ನೆನಪಿಸುತ್ತದೆ. ಇದು ಅಭಿವ್ಯಕ್ತಿ ಭಾಷೆಯನ್ನು ಬದಲಿಸದೆ ಅದರ ಸಂವಹನದ ಪರಿಭಾಷೆಯನ್ನು ಬದಲಿಸುವ ಕ್ರಮವಾಗಿದೆ. ಇದು ಸಂಹವನದ ಬಹಳ ದೊಡ್ಡ ರಾಜಕೀಯ ಮತ್ತು ಸಾಂಸ್ಕೃತಿಕ ಯುದ್ಧತಂತ್ರ ಕೂಡ. ದಲಿತ ಮೌಖಿಕ ಸಾಹಿತ್ಯದಲ್ಲಿರುವ ಚಳುವಳಿಯ ಈ ತೀವ್ರ ಹಿನ್ನೆಲೆಯಿಲ್ಲದೆ, ಕೊಂಕಣಿ ಮತ್ತು ಬ್ಯಾರಿ ಕವಿಗಳು ಕವನವಾಚನ ಮಾಡಿ ಪ್ರಕಟಿಸಿರುವ ಆಲ್ಬಂಗಳನ್ನು ಗಮನಿಸಬಹುದು. ಪುಸ್ತಕರೂಪವಿಲ್ಲದೆ ಸಾಹಿತ್ಯವನ್ನು ಒದಗಿಸುವ ಈ ಕ್ರಮವು ಸಾಮಾನ್ಯವಾಗಿ ವಿದೇಶಗಳಲ್ಲಿರುವ ಸ್ವಭಾಷಿಕ ಓದುಗರಿಗಾಗಿ

**ಅಭಿನಂದನೆ...**

'ಹೊಸತು' ಲೇಖಕರೂ ಪತ್ರಕರ್ತರೂ ಆದ ಸನತ್ ಕುಮಾರ್ ಬೆಳಗಲಿ ಅವರಿಗೆ ೨೦೧೧ರ ಮತ್ತು ೨೦೧೫ನೇ ಸಾಲಿನ 'ಟಿ. ಎಸ್. ರಾಮಚಂದ್ರ ರಾವ್ ಸ್ಮಾರಕ ಪ್ರಶಸ್ತಿ' ಲಭಿಸಿದೆ. ಲೇಖಕರಿಗೆ 'ಹೊಸತು' ಹಾಗೂ 'ನವಕರ್ನಾಟಕ'ದ ಅಭಿನಂದನೆಗಳು.

ಮಾಡಲಾದ ಮಾಧ್ಯಮ ರೂಪಾಂತರವಾಗಿದೆ. ಈ ಮಾಧ್ಯಮ ರೂಪಾಂತರವು ಅನುವಾದದ ಹಂಗಿಲ್ಲದೆ ಮೂಲಭಾಷೆಯನ್ನು ಲಿಪಿರಹಿತ ಸ್ಥಿತಿಗೆ ಬದಲಾಯಿಸಿ ತನ್ನ ಸಂವಹನದ ಹರಹನ್ನು ಊಹಾತೀತವಾಗಿ ಹೆಚ್ಚಿಸಿಕೊಂಡುಬಿಡುತ್ತದೆ.

ಊ) ಮನೆಮಾತಿನ ಮತ್ತು ಪರಿಸರದ ಓದುಗರಿಗೆ ಏಕಕಾಲದಲ್ಲಿ ಮುಟ್ಟಲು ಬಹುಲಿಪಿ ಬಳಸುವುದು. ಕೊಂಕಣಿಯಲ್ಲಿ ಬರೆಯುವ ಭಟ್ಕಳ ಭಾಗದ ನವಾಯತಿ ಕವಿಗಳಾದ ಶಬ್ಬೀರ್ ಬೈದ್ಯ ಅವರು ಕನ್ನಡ ಮತ್ತು ದೇವನಾಗರಿಯಲ್ಲಿಯೂ, ಇಕ್ಬಾಲ್ ಸಯೀದಿ ಅವರು ದೇವನಾಗರಿ ಮತ್ತು ಪರ್ಸೊ ಅರೆಬಿಕ್ ಲಿಪಿಯಲ್ಲಿಯೂ ಇರುವಂತೆ ಕವನ ಸಂಕಲನಗಳನ್ನು ಪ್ರಕಟಿಸಿರುವರು.

ದ್ವಿಧಾರ್ಮಿಕವಾಗಿ ಮತ್ತು ಬಹುಸಾಂಸ್ಕೃತಿಕವಾಗಿ, ಬಹುಭಾಷಿಕವಾಗಿ ಮತ್ತು ಬಹುಲಿಪಿಯಲ್ಲಿ ಬರೆಯುವ ಮತ್ತು ಪ್ರಕಟಿಸುವ ಈ ಒತ್ತಡಗಳು, ಲೇಖಕರ ಮುಂದೆ ಹಲವು ಕಷ್ಟಗಳನ್ನು ಒಡ್ಡಿವೆ. ಅದೇ ಹೊತ್ತಲ್ಲಿ ಮನೆ ಮಾತಿನ ಮತ್ತು ಪರಿಸರ ಭಾಷೆಯಲ್ಲಿರುವ ಓದುಗ ಲೋಕಗಳನ್ನು ಏಕಕಾಲಕ್ಕೆ ಮುಟ್ಟುವ ಸಾಧ್ಯತೆಗಳನ್ನು ಸೃಷ್ಟಿಸಿವೆ. ಬಹುಭಾಷಿಕ ಮತ್ತು ಬಹುಲಿಪಿತ್ವದ ಈ ಆಯ್ಕೆಯು ಸಾಂಸ್ಕೃತಿಕವಾಗಿ ಅವರ ಬರೆಹವನ್ನು ಶ್ರೀಮಂತಗೊಳಿಸಿದೆ. ಕೆಲವರ ಬರೆಹದಲ್ಲಿ ಎರಡು ಧಾರ್ಮಿಕ ಸಮುದಾಯಗಳ ಅನುಭವಸತ್ವವೂ ಭಾಗವಹಿಸುತ್ತದೆ. ಸ್ವಾರಸ್ಯಕರ ವೆಂದರೆ, ಈ ಸಾಂಸ್ಕೃತಿಕ ಸಿರಿವಂತಿಕೆ ಮತ್ತು ವೈವಿಧ್ಯವನ್ನು ಅಕ್ಷರ ಪರಂಪರೆಯ ಲೇಖಕರು ಕಷ್ಟಪಟ್ಟು ಪಡೆದುಕೊಂಡರೆ, ಮೌಖಿಕ ಪರಂಪರೆ ಯಲ್ಲಿರುವ ಉರ್ದು–ಕನ್ನಡ, ಉರ್ದು–ತೆಲುಗು, ಉರ್ದು–ಮರಾಠಿ ದ್ವಿಭಾಷಿಕ 'ಮುಸ್ಲಿಂ' ಕವಿಗಳು ಸಹಜವಾಗಿ ಪಡೆದುಕೊಂಡಿರುವುದು; ಕರ್ನಾಟಕದ ಜನಪದ ಸಾಹಿತ್ಯಕ್ಕೆ ಮೊಹರಂ, ಲಾವಣಿ ಮುಂತಾದ ಪ್ರಕಾರಗಳಲ್ಲಿ ನೂರಾರು ದ್ವಿಭಾಷಿಕ ಮತ್ತು ಬಹುಭಾಷಿಕ ಹಾಡುಕವಿಗಳಿದ್ದಾರೆ. ಇವರನ್ನು 'ಶಾಹಿರ' ಎಂದೂ ಕರೆಯುವರು. ಶಿಶುನಾಳ ಶರೀಫ, ಚನ್ನೂರ ಜಲಾಲ, ಗುರುಖಾದರಿ ಪೀರಾ, ಮೋಟ್ನಳ್ಳಿ ಹಸನ ಮುಂತಾದ ತತ್ವಪದಕಾರರೂ ಇದ್ದಾರೆ. ಇವರಲ್ಲಿ ಹೆಚ್ಚಿನವರು ಬಹುಭಾಷಿಕ ಕವಿಗಳಾದ ಕಾರಣ, ಮನೆಮಾತು ಪರಿಸರದ ಮಾತು ಎಂಬ ದ್ವಂದ್ವ ಅಷ್ಟಾಗಿಲ್ಲ. ಇವರಲ್ಲಿ ಕೆಲವರು ಒಂದೇ ಹಾಡಿನಲ್ಲಿ ಮನೆಮಾತು ಮತ್ತು ಪರಿಸರದ ಭಾಷೆಯ ಸಾಲುಗಳನ್ನು ಒಟ್ಟಿಗೆ ಸೇರಿಸಿ ಬರೆಯುವ ಸಂಕರ ರಚನೆಗಳನ್ನು ಮಾಡಿದ್ದಾರೆ. ಇಂತಹ ಸಂಕರ ರಚನೆಗಳನ್ನು ಮಾಡಲು ಅಕ್ಷರ ಮತ್ತು ಮುದ್ರಣ ಪರಂಪರೆಯ ಲೇಖಕರಿಗೆ ಸಾಧ್ಯವಾಗಿಲ್ಲ.

ಆಧುನಿಕ ಪೂರ್ವ ಕರ್ನಾಟಕದಲ್ಲಿಯೂ ಅನೇಕ ದ್ವಿಭಾಷಿಕ ಕವಿಗಳಿದ್ದು ಅವರು ದಖನಿ ಮತ್ತು ಪಾರಸಿಯಲ್ಲಿ ಬರೆಯುತ್ತಿದ್ದರು. ಆಗ ದ್ವಿಭಾಷಿಕತೆಯು ಮನೆಮಾತು ಮತ್ತು ಪರಿಸರದ ಭಾಷೆಯ ವಿಂಗಡಣೆಯಲ್ಲಿರಲಿಲ್ಲ. ಬದಲಿಗೆ, ಮನೆಮಾತು ಮತ್ತು ಪ್ರಭುತ್ವದ ಭಾಷೆಯ ನೆಲೆಯಲ್ಲಿತ್ತು. ಪಾರಸಿಯು ಈ ಕವಿಗಳ ಪರಿಸರದ ಭಾಷೆಯೂ ಮನೆಮಾತೂ ಆಗಿರದೆ, ನಮಗೆ ಇಂಗ್ಲಿಶಿನಂತೆ ಪ್ರಭುತ್ವದ ಭಾಷೆಯಾಗಿತ್ತು. ಹೈದರಾಬಾದ್ ಕರ್ನಾಟಕದಲ್ಲಿ ನಿಜಾಮರ ಆಳ್ವಿಕೆಯಲ್ಲಿ ಅನೇಕ ಲೇಖಕರು ಕನ್ನಡ ಮತ್ತು ಉರ್ದುವಿನಲ್ಲಿ ಬರವಣಿಗೆ ಮಾಡಿದರು. ಗಂಗಾವತಿಯ ರಾಘವೇಂದ್ರ ರಾವ್ 'ಜಜ್ಬ್' ಹಾಗೂ ರಾಯಚೂರಿನ ಮುದ್ದಣ 'ಮಂಜರ್' ಇದಕ್ಕೆ ನಿದರ್ಶನ. ಕನ್ನಡ ಮನೆಮಾತಿನ ಇವರಿಗೆ ಉರ್ದು ಪ್ರಭುತ್ವದ ಭಾಷೆ ಮಾತ್ರವಾಗಿರದೆ, ಅವರ ಪರಿಸರದಲ್ಲಿ ಬದುಕುತ್ತಿರುವ ಸಮುದಾಯದ ಭಾಷೆಯೂ ಆಗಿತ್ತು. ಅವರ ಧಾರ್ಮಿಕತೆ ಮತ್ತು ಕನ್ನಡ–ಸಂಸ್ಕೃತ ಸೂಚಕವಾದ ಮೊದಲ ಹೆಸರುಗಳ ಮುಂದೆ, ಪಾರಸಿ–ಉರ್ದುವಿನ ಕಾವ್ಯನಾಮಗಳು ಲಗತ್ತಾಗಿರುವ ಕ್ರಮದಲ್ಲಿಯೇ ಇದು ಸೂಚಿತ ವಾಗುತ್ತದೆ. ಆದರೆ ಇವರ ಸೀಮೆಯಲ್ಲಿರುವ ಜನಪದ ಕವಿಗಳ ಹಾಗೂ ತತ್ವಪದಕಾರರ ದ್ವಿಭಾಷಿಕತೆಯಲ್ಲಿ, ಎಲ್ಲವೂ ಜನಭಾಷೆಗಳೇ ಆಗಿವೆ. ಅವರ ಕೇಳುಗರು ಸಹ ಬಹುಭಾಷಿಕರೂ ಬಹುಧರ್ಮಗಳ ಸಾಂಸ್ಕೃತಿಕ ಪ್ರಜ್ಞೆಯುಳ್ಳವರೂ ಆಗಿರುವ ಕಾರಣ, ಮೌಖಿಕ ಕವಿಗಳಿಗೆ ಸಾಂಸ್ಕೃತಿಕ ಅನುವಾದ ಮಾಡುವ ತೊಡಕು ಸಹ ಎದುರಾಗುವುದಿಲ್ಲ.



## ಕಲ್ಲು

ಕಲ್ಲ ಮೇಲೆ
ಸಹಸ್ರ ಕುಂಭಾಭಿಷೇಕ
ಕಂಡು
ಬಡವನೆದೆಯಾಯ್ತು
ಕಗ್ಗಲ್ಲು !

**ವ. ಉಮೇಶ್ ಕಾರಂತ**
ಮಂಗಳೂರು – ೧

ಮುಸ್ಲಿಂ ಮಧ್ಯಮವರ್ಗ ಮತ್ತು ಮೇಲ್ವರ್ಗಕ್ಕೆ ಸೇರಿದ ಇಂಗ್ಲಿಶಿನಲ್ಲಿ ಬರೆಯುವ ಕೆಲವೇ ಲೇಖಕರು ಸಿಗುತ್ತಾರೆ. ಬೆಂಗಳೂರು ವಾಸಿಗಳಾಗಿರುವ ಈ ಲೇಖಕರು ಮನೆಮಾತು ಮತ್ತು ಪರಿಸರದ ಭಾಷೆ ಎರಡನ್ನೂ ಬಿಟ್ಟು ಸಲ್ಮಾನ್ ರಶ್ದಿಯಂತೆ ಇಂಗ್ಲಿಶಿನಲ್ಲಿ ಬರೆಯುತ್ತಿರುವರು. ಇವರಲ್ಲಿ ಕಾಸ್ಮೊಪಾಲಿಟನ್ ಲೋಕದ ಅನುಭವಗಳು ಧರ್ಮಾತೀತ ನೆಲೆಯಲ್ಲಿ ವ್ಯಕ್ತವಾಗುತ್ತಿವೆ. ಇವರ ಓದುಗರು ಅಖಿಲ ಭಾರತೀಯ ನೆಲೆಯವರು. ಇವರ ಬರೆಹದಲ್ಲಿ ಕರ್ನಾಟಕದ ಅನುಭವಗಳೂ ಕಡಿಮೆ. ಇವರ ಪ್ರಭಾವ ಕರ್ನಾಟಕದ ಓದುಗ ಲೋಕದಲ್ಲೂ ಕಡಿಮೆ. ಹೊಸತಲೆಮಾರಿಗೆ ಸೇರಿದ ಇವರಲ್ಲಿ ಮನೆಮಾತಾದ ಉರ್ದುವಿನ ಬಗ್ಗೆಯಾಗಲಿ, ಪರಿಸರ ಭಾಷೆಯಾದ ಕನ್ನಡದ ಬಗ್ಗೆಯಾಗಲಿ ಅಂತಹ ಆಸಕ್ತಿಯಿಲ್ಲ. ಕರ್ನಾಟಕದ ಚಿಕ್ಕಪಟ್ಟಣಗಳಲ್ಲಿ ಉರ್ದು ಶಾಲೆಗೆ ಮಕ್ಕಳನ್ನು ಸೇರಿಸುವುದು ಎಂದರೆ, ಉನ್ನತ ಶಿಕ್ಷಣದವರೆಗೆ ಹೋಗಲಾಗದಂತೆ ಕೆಳಹಂತದಲ್ಲೇ ಡ್ರಾಪ್‌ಔಟ್ ಆಗುವಂತೆ ಮಾಡುವುದು ಎಂಬಂತಹ ವಾಸ್ತವವಿದೆ. ಹೀಗಾಗಿ ಕರ್ನಾಟಕದಲ್ಲಿ ದೊಡ್ಡ ಪ್ರಮಾಣದಲ್ಲಿ ಸರ್ಕಾರಿ ಉರ್ದು ಶಾಲೆಗಳು ಸಹ ಮುಚ್ಚುತ್ತಿವೆ. ಈ ಸನ್ನಿವೇಶದಿಂದ ಮನೆಮಾತಾಗಿ ಉರ್ದುವಿನ ಅಸ್ತಿತ್ವವೇನೂ ನಾಶವಾಗುವುದಿಲ್ಲ. ಆದರೆ ಮುಸ್ಲಿಂ ಮಧ್ಯಮ ವರ್ಗವು ಜಾಗತೀಕರಣದ ದೌಡಿನಲ್ಲಿ ಸೇರಿಕೊಂಡಿದ್ದು, ಮನೆಮಾತು ಉರ್ದು ಮತ್ತು ಪರಿಸರದ ಭಾಷೆ ಕನ್ನಡ ಎರಡನ್ನೂ ಬಿಟ್ಟು ಇಂಗ್ಲಿಶಿನತ್ತ ಈಗಾಗಲೇ ಚಲಿಸಿದೆ. ಉರ್ದು ಸಾಹಿತ್ಯದ ಓದುಗರಲ್ಲಿ ಪ್ರಮುಖವಾಗಿದ್ದ ಈ ಮಧ್ಯಮವರ್ಗದ ಈ ಭಾಷಿಕ ಆಯ್ಕೆಯಿಂದ ಉರ್ದು ಪತ್ರಿಕೆ ಮತ್ತು ಸಾಹಿತ್ಯಕ್ಕೆ ಓದುಗರ ಸಂಖ್ಯೆಯೂ ಕ್ಷೀಣಗೊಳ್ಳುತ್ತಿದೆ. ಈ ಚಲನೆಯು ಇಂಗ್ಲಿಶ್‌ವಾದಿ ಮಧ್ಯಮವರ್ಗವನ್ನು ಪರಿಸರ ಮತ್ತು ಮನೆಮಾತಿನ ಭಾಷೆಯಲ್ಲಿ ಹುಟ್ಟುವ ಸಾಹಿತ್ಯಕ್ಕಿಂತ 'ಜಾಗತಿಕ' ಇಂಗ್ಲಿಶ್ ಸಾಹಿತ್ಯದ ಓದುಗರನ್ನಾಗಿಸುವತ್ತ ನಡೆದಿದೆ. ಆಗ ಮನೆಯ ಕಪಾಟನ್ನು ಇಕ್ಬಾಲ್ ಅಥವಾ ಕುವೆಂಪು ಅವರ ಪುಸ್ತಕಗಳಿಗೆ ಬದಲಾಗಿ ಜೆ. ಕೆ. ರೋಲಿಂಗ್ ('ಹ್ಯಾರಿ ಪಾಟರ್') ಅಥವಾ ಅಮಿತಾವ್ ಘೋಷರ ಕೃತಿಗಳು ಅಲಂಕರಿಸಬಹುದು. ಆಗ ಉರ್ದು ಲೇಖಕರು ಎದುರಿಸುವ ಬಿಕ್ಕಟ್ಟುಗಳ ಸ್ವರೂಪವು ಇನ್ನೊಂದೇ ಆಗುತ್ತದೆ. ಸಾಹಿತ್ಯ ರಚನೆಯಲ್ಲಿ ಲೇಖಕರ ಭಾಷೆಯ ಆಯ್ಕೆಯಿಂದ ಉಂಟಾಗುವ ಪಲ್ಲಟಗಳಿಗಿಂತ, ಒಟ್ಟು ಸಮುದಾಯಗಳೇ ಶಿಕ್ಷಣ ಮತ್ತು ದೇಶವ್ಯಾಪಿ ಚಲನೆಯ ಉದ್ಯೋಗಕ್ಕಾಗಿ ಮಾಡಿಕೊಳ್ಳುವ ಇಂಗ್ಲಿಶಿನ ಆಯ್ಕೆ ತರುವ ಪರಿಣಾಮಗಳು ಹೆಚ್ಚು ತೀವ್ರತರ ಮತ್ತು ಘಾತಕವಾಗಿರುತ್ತವೆ. ಅವು ಪರಿಸರ ಮತ್ತು ಮನೆಮಾತು ಗಳನ್ನು ಬೈಪಾಸ್ ಮಾಡುವುದರಿಂದ, ಈ ಭಾಷೆಗಳಲ್ಲಿ ಸಾಹಿತ್ಯ ಸೃಷ್ಟಿಯಾಗುವ ಮತ್ತು ಓದುವ ಸಾಧ್ಯತೆಗಳು ಅಪ್ರಸ್ತುತಗೊಳ್ಳುತ್ತ ಹೋಗುತ್ತವೆ. ಆಗ ಮನೆಮಾತು ಮತ್ತು ಪರಿಸರದ ಭಾಷೆಗಳನ್ನು ಬರೆಹಕ್ಕೆ ಆರಿಸಿಕೊಂಡು ಸೆಣಸಾಡುವ, ಇದರಿಂದ ಸಾಂಸ್ಕೃತಿಕ ಬಿಕ್ಕಟ್ಟು ಮತ್ತು ಹೊರಚಾಚುಗಳು ಸೃಷ್ಟಿಯಾಗುವ ಎರಡೂ ಸಾಧ್ಯತೆ ಗಳಿರುವುದಿಲ್ಲ. ಆದರೆ ಈ ಸೆಣಸಾಟ ಮತ್ತು ಹೊರಚಾಚಿನ ಸಾಧ್ಯತೆಗಳು, ಎಲ್ಲೂ ಆಳ ಬೇರಿಲ್ಲದ ಅಂಗ್ರೇಜಿ ಲೇಖಕರನ್ನೂ ಓದುಗರನ್ನೂ ಹುಟ್ಟಿಸುವುದಕ್ಕಿಂತ ಬಹಳ ಮುಖ್ಯವಾದುದು ಎಂದು ಮನದಟ್ಟು ಮಾಡುತ್ತವೆ.

**ರಹಮತ್ ತರೀಕೆರೆ**
ಎಂ. ಪಿ. ಪ್ರಕಾಶ್ ನಗರ, ಹೊಸಪೇಟೆ
ಬಳ್ಳಾರಿ – ೫೮೩ ೨೦೧

# ಬುದ್ಧ ಎಂಬ ಬೆಳಕು

'ದೇವರ ಕುರಿತು ನಿಮ್ಮ ಅಭಿಪ್ರಾಯವೇನು ?' ಎಂಬ ಪ್ರಶ್ನೆಗೆ ಬುದ್ಧ ನೀಡಿದ ಉತ್ತರ ವಿಶೇಷವಾದದ್ದು. ಈವರೆಗೂ ಈ ಪ್ರಶ್ನೆಗೆ ಜಗತ್ತಿನ ಜನ ನೀಡಿದ ಉತ್ತರ ಎರಡೇ. ಒಂದೋ, ದೇವರು ಇದ್ದಾನೆ ಎಂಬುದು, ಇನ್ನೊಂದು ಇಲ್ಲ ಎಂಬುದು. ಈ ಎರಡೂ ಉತ್ತರ ನೀಡುವ ಜನ ಪೂರ್ವಗ್ರಹಕ್ಕೆ ಒಳಗಾಗಿದ್ದಾರೆ. ಇಬ್ಬರದೂ ಕನ್‌ಫರ್ಮ್ಡ್ ಆದ ಉತ್ತರ ಅಲ್ಲ. ಈ ಇಬ್ಬರೂ ತಮ್ಮ ಅಭಿಪ್ರಾಯವನ್ನು ಸಾಬೀತುಪಡಿಸಲು ಸಾಧ್ಯವಿಲ್ಲ. ಆದರೆ ಬುದ್ಧನದು ಪ್ರಾಮಾಣಿಕವಾದ ಉತ್ತರ: 'ದೇವರ ಬಗ್ಗೆ ನನಗೇನೂ ತಿಳಿಯದು. ತಿಳಿಯದ, ಊಹೆಯ ಮೇಲೆ ನಿಂತ ವಿಷಯದ ಕುರಿತು ನಾನು ಮಾತಾಡಲಾರೆ. ನನ್ನ ಕಣ್ಮುಂದೆ ಜಗತ್ತಿದೆ. ಜನರ ಕಷ್ಟ-ದುಃಖಗಳಿವೆ. ಅದರ ಕುರಿತಾಗಿ ಮಾತಾಡುವೆ' ಎಂಬುದು. ಈ ಹಿನ್ನೆಲೆಯಲ್ಲಿ ಬುದ್ಧ ಪ್ರವಾದಿ ಅಲ್ಲ. ಆತ ಮಹಾತ್ಮ. ಆತ ಹೇಳಿದ್ದು ಧರ್ಮವೇ ವಿನಾ ಮತಧರ್ಮ ಅಲ್ಲ. ಆತನದು ಆಗಿರುವ ಮತವಲ್ಲ, ಪ್ರತಿದಿನವೂ ಆಗುತ್ತಲೇ ಇರುವ ಕಾಲದಿಂದ ಕಾಲಕ್ಕೆ ತನ್ನನ್ನು ಪುನರ್ ಕಟ್ಟಿಕೊಳ್ಳುತ್ತಿರುವ ಧರ್ಮ.

**ಡಾ॥ ಸರ್ಫ್ರಾಜ್ ಚಂದ್ರಗುತ್ತಿ**

ಬುದ್ಧಿಯ ವಿಕಸನವೇ ಬುದ್ಧತ್ವದ ನೆಲೆ. ಬುದ್ಧ ಬುದ್ಧಿಗೆ, ಸತ್ಯಕ್ಕೆ ಅಡ್ಡಿಯಾದ ಎಲ್ಲ ಅಡೆತಡೆಗಳನ್ನು ಮೀರಿ ನಡೆದ ಸಾಂಪ್ರದಾಯಿಕವಾದ ಹಾದಿಗಳನ್ನು ತೊರೆದು ತನ್ನದೇ ಆದ ಹೊಸ ಹಾದಿ ನಿರ್ಮಿಸಿಕೊಂಡ. ಅವನ ಕಾಲ ಯುದ್ಧಗಳ ಕಾಲವಾಗಿತ್ತು. ಅದನ್ನು ತೊರೆದು ದಯೆ-ಕರುಣೆ-ಮೈತ್ರಿಯ ಹಾದಿಯಲ್ಲಿ ಮುನ್ನಡೆದ. ಆತನ ಕಾಲದಲ್ಲಿ ಅರವತ್ತೆರಡಕ್ಕಿಂತ ಹೆಚ್ಚಿನ ದರ್ಶನ-ಸಿದ್ಧಾಂತಗಳಿದ್ದವು. ಇವುಗಳನ್ನು ಬುದ್ಧ ಮುಕ್ತಮನಸ್ಸಿನಿಂದ ಅಧ್ಯಯನ ಮಾಡಿದ. ಈ ಎಲ್ಲವನ್ನು ಸತ್ಯದ ಒರೆಗೆ ಹಚ್ಚಿದ. ಒಳಿತು-ಕೆಡುಕು ಹುಟ್ಟುವ ಮನಸ್ಸೇ ಪ್ರತಿಯೊಂದು ಆಗುಹೋಗುಗಳ ಕೇಂದ್ರ. ಮನಸ್ಸನ್ನು ನಿಯಂತ್ರಿಸಿದರೆ ಬದುಕನ್ನೇ ನಿಯಂತ್ರಿಸಬಹುದು ಎನ್ನುವ ಬುದ್ಧ ಮನಸ್ಸಿನ ಸಂಸ್ಕರಣಕ್ಕೆ ಬೇಕಾದ ವಿಧಾನಗಳನ್ನು ವಿವರಿಸಿದ. ಮನಸ್ಸಿನ ಶುದ್ಧೀಕರಣ ಧರ್ಮದ ಸಾರ ಎಂದು ಹೇಳಿ ಸರಳ ಹಾಗೂ ನಿರ್ಮಲವಾದ ಬಾಳನ್ನು ಬದುಕುವಂತೆ ಕರೆ ನೀಡಿದ-'ನಿಜವಾದ ಧರ್ಮವು ಧಾರ್ಮಿಕ ತತ್ವಗಳ ಆಚರಣೆಯಲ್ಲಿದೆಯೇ ವಿನಾ ಧಾರ್ಮಿಕ ಗ್ರಂಥಗಳಲ್ಲಿ ಅಲ್ಲ' ಎಂದ. ಧರ್ಮದ ಹಾದಿಯನ್ನು ಬಿಟ್ಟು ದೇವರು-ಆತ್ಮ-ಸ್ವರ್ಗ-ನರಕಗಳ ಭ್ರಮೆಗಳಲ್ಲಿ ಜನ ಸಿಲುಕಿಕೊಂಡಿದ್ದರು. ದೇವರಿಗೆ ಆಮಿಷವೊಡ್ಡಿ ನರಕದ ಭಯದಿಂದ ಮುಕ್ತವಾಗುವ ಸಾಂಪ್ರದಾಯಿಕ ಆಚರಣೆಯ ವಿಧಿ-ವಿಧಾನಗಳನ್ನು ಜನರು ನಂಬಿ ಅನುಸರಿಸುತ್ತಿದ್ದರು. ಹೀಗಿರುವ ಸಾಂಪ್ರದಾಯಿಕ ಮನಸ್ಸುಗಳನ್ನು ತಾನು ಕಂಡುಕೊಂಡ ಹೊಸ ಧರ್ಮದತ್ತ ಹೊರಳುವಂತೆ ಮಾಡುವ ಸವಾಲು ಆತನ ಮುಂದಿತ್ತು - 'ಸತ್ಯ, ಪೂರ್ಣಸತ್ಯ, ಸತ್ಯದ ಹೊರತು ಮತ್ತೇನೂ ಇಲ್ಲ' ಎಂಬ ಅವನ ಸಿದ್ಧಾಂತವನ್ನು ಮೊದಮೊದಲು ಜನ ಅನುಮಾನದಿಂದ ನೋಡಿದರು. ಬುದ್ಧ ಹೇಳುವ ವಿಚಾರ-ಮಾರ್ಗ-ಮಧ್ಯಮ ಮಾರ್ಗ-ಅವಿಜ್ಜ (ಅವಿದ್ಯೆ)ಯ ನಾಶದಿಂದ ಬರುವ ಸಮ್ಯಗ್‌ಜ್ಞಾನ, ಇದರಿಂದ ಮೂಢನಂಬಿಕೆ-ಅತಿಮಾನುಷವಾದವನ್ನು ತೊರೆಯುವ ಬಗೆ ಮುಂತಾದವು ಅವರಿಗೆ ಹೊಚ್ಚ ಹೊಸ ವಿಚಾರಗಳಾಗಿ ತೋರಿದವು. ಮೊದಲಿಗೆ, ಬುದ್ಧ ತನ್ನೊಂದಿಗಿದ್ದ ಐವರು ಶಿಷ್ಯರಿಗೆ ಬೋಧನೆ ಮಾಡಿದ. ತರುವಾಯ ಲಕ್ಷಾಂತರ ಮಂದಿ ಹರಿದುಬಂದರು. ಆ ಕಾಲಕ್ಕೆ ಅವನ ಬೆನ್ನಿಗೆ ಮೂವತ್ತು ಸಾವಿರಕ್ಕಿಂತ ಹೆಚ್ಚಿನ ಶಿಷ್ಯರು ಇದ್ದರೆಂದು ತಿಳಿದುಬರುತ್ತದೆ. ಬುದ್ಧನ ನೇತೃತ್ವದಲ್ಲಿ ಸಂಘದ ಮೂಲಕ ಶುರುವಾದ ಸ್ವಚ್ಛತಾ ಅಭಿಯಾನವಿದು ! ಲಿಂಗ, ವರ್ಗ, ಮತ, ಜಾತಿ - ಹೀಗೆ ಎಲ್ಲ ಬಗೆಯ ತಾರತಮ್ಯಗಳ ವಿರುದ್ಧ ಹಾಗೂ ಸಮಾನತೆಯ ಆಶಯದೊಂದಿಗೆ ಬುದ್ಧ ಹೋರಾಟದ ಕಣಕ್ಕಿಳಿದಿದ್ದ. ಅವನ ಜನಪ್ರಿಯತೆ ದಿನೇ ದಿನೇ ಹೆಚ್ಚಾಗತೊಡಗಿತು. ಬಡವರು-ಬಲ್ಲಿದರು-ಸಿರಿವಂತರು-ಅರಸರು, ಹೀಗೆ ಎಲ್ಲ ವರ್ಗ-ಜಾತಿಯ ಜನ ಅವನ ಮಾತು ಕೇಳಲು ಬಂದು ಸೇರತೊಡಗಿದರು.

ಬುದ್ಧನ ಬೋಧನೆ ಆಗಿನ ವಿಶಾಲ ಭಾರತದಾಚೆಗೂ ಹರಡಿತು. ಮರುಭೂಮಿಯಲ್ಲಿ ಹುಟ್ಟಿ ಬೆಳೆದ ಕ್ರೈಸ್ತ, ಇಸ್ಲಾಂ, ಯಹೂದಿಗಳಾದಿಯಾಗಿ ತರುವಾಯ ಹುಟ್ಟಿದ ಎಲ್ಲ ಮತಧರ್ಮಗಳೂ ಬುದ್ಧನ ಪ್ರಭಾವದಿಂದ ಹೊರತಾಗಲಿಲ್ಲ. ಬುದ್ಧ ಹಲವು ಮತಧರ್ಮಗಳ ಪ್ರವಾದಿಗಳಂತೆ ಬಡತನದಲ್ಲಿ ಗುಡಿಸಲಲ್ಲಿ ಹುಟ್ಟಲಿಲ್ಲ. ಬಡತನದ ಕಷ್ಟ ಹಸಿವುಗಳ ಸ್ಪರ್ಶವೂ ಅವನಿಗಿರಲಿಲ್ಲ. ಆತ ಜನಿಸಿದ್ದು ಅರಸನ ಮಗನಾಗಿ. ಯುವರಾಜನಿಗೆ ದೊರೆಯಬಹುದಾದ ಎಲ್ಲ ಸುಖಭೋಗಗಳು ಅವನ ಕಾಲಡಿಯಲ್ಲಿದ್ದವು. ಅಂದರೆ, ಅವನದು ಅಭಾವ ವೈರಾಗ್ಯವಲ್ಲ. ಅವನ ವೈರಾಗ್ಯ ಅಂತರಂಗದ ವಿವೇಕದಿಂದ ಹುಟ್ಟಿದ್ದು. ಅನೇಕರು ತಿಳಿದಿರುವಂತೆ ಗೌತಮ ವೃದ್ಧಾಪ್ಯ, ಸಾವು, ರೋಗಗಳನ್ನು ಕಂಡು ಅರಮನೆಯನ್ನು ತೊರೆಯಲಿಲ್ಲ. ರೋಹಿಣಿ ನದೀ ನೀರಿನ ಮೂಲವೇ ಸಂಘರ್ಷಕ್ಕೆ ಕಾರಣವಾಗಿ ಆತ

## ಅಭಿನಂದನೆ...

ಕರ್ನಾಟಕ ಸಂಘ ಶಿವಮೊಗ್ಗ ನೀಡುವ ೨೦೧೫ನೇ ಸಾಲಿನ ವಾರ್ಷಿಕ ಪ್ರಶಸ್ತಿಗಳಲ್ಲಿ ನವಕರ್ನಾಟಕ ಪ್ರಕಾಶನ ಪ್ರಕಟಿಸಿರುವ ಎಸ್. ಮಾಲತಿಯವರ 'ಸ್ವಪ್ನ ಸಾರಸ್ವತ' ಕೃತಿಗೆ ಡಾ|| ಕೆ. ವಿ. ಸುಬ್ಬಣ್ಣ ನಾಟಕ ಪ್ರಶಸ್ತಿ ಹಾಗೂ ಡಾ|| ಪ್ರಕಾಶ್ ಸಿ. ರಾವ್ ಅವರ 'ಸಕ್ಕರೆ ಕಾಯಿಲೆ ಭಯವೇಕೆ?' ಕೃತಿಗೆ ಡಾ|| ಎಚ್. ಡಿ. ಚಂದ್ರಪ್ಪಗೌಡ ವೈದ್ಯ ಸಾಹಿತ್ಯ ಪ್ರಶಸ್ತಿ ಲಭಿಸಿವೆ. ಈ ಎರಡೂ ಕೃತಿಯ ಲೇಖಕರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಮನೆಯವರೆಲ್ಲರನ್ನೂ ಒಪ್ಪಿಸಿ ಸಾಮ್ರಾಜ್ಯ ಬಿಟ್ಟು ಜ್ಞಾನಮಾರ್ಗವನ್ನು ಹುಡುಕಿ ಹೊರಟವ. ಅಂತರಂಗದೊಳಗಿನ ಜೀವದಯೆ ಅವನನ್ನು ನಾಡಿನಿಂದ ಕಾಡಿಗೆ ಕರೆತಂದಿತು.

ಜ್ಞಾನೋದಯದ ತರುವಾಯ ಸಿದ್ಧಾರ್ಥ ಬುದ್ಧನಾದ ಮೇಲೆ ತನ್ನ ಅರಿವನ್ನು ಜನರಿಗೆ ಹಂಚುತ್ತಾ ಹೋದ. ತಾನು ಪ್ರವಾದಿಯೋ, ದೇವರ ಪ್ರತಿನಿಧಿಯೋ, ತನ್ನದು ದೈವವಾಣಿಯೆಂದೋ, "ತನ್ನ ಮಾತೇ ಕೊನೆಯ ಮಾತು, ತನ್ನ ತರುವಾಯ ಮತ್ತೊಬ್ಬ ಬುದ್ಧನಿಲ್ಲ ಎಂದು ಹೇಳಲಿಲ್ಲ. ನಿಮ್ಮ ಹಾಗೆಯೇ ನಾನೂ ನಿಮ್ಮೊಳಗೊಬ್ಬ, ಎಲ್ಲವನ್ನೂ ಪರೀಕ್ಷಿಸಿ ಒಪ್ಪಿಕೊಳ್ಳಿ. ಪರೀಕ್ಷಿಸದೆ, ವಿಶ್ಲೇಷಿಸದೆ ನೀವು ನನ್ನನ್ನು ಒಪ್ಪಿಕೊಳ್ಳಬೇಡಿ. ಈ ವಿಚಾರಗಳನ್ನು ನಿಮ್ಮ ಕಾಲಕ್ಕೆ ಹೇಗೆ ಬೇಕೋ ಹಾಗೆ ಬದಲಾಯಿಸಿಕೊಳ್ಳಿ" ಎಂದು ಹೇಳಿದ. ತನ್ನ ವಿಚಾರಗಳನ್ನು ಚರ್ಚೆಗೆ ಮುಕ್ತವಾಗಿ ತೆರೆದಿಟ್ಟ. ಆದ್ದರಿಂದ ಬುದ್ಧನದು ಮತಧರ್ಮವಾಗಿರದೆ ಅದು ಶುದ್ಧಾಂಗವಾಗಿ 'ಧಮ್ಮ' ಆಯಿತು.

ಜಗತ್ತಿನ ಬಹುತೇಕ ಮತಧರ್ಮಗಳು ಆಸ್ತಿಕವಾದಿಯಾಗಿದ್ದು ಅವೆಲ್ಲವೂ ದೇವರ ಅಸ್ತಿತ್ವವನ್ನು ಸಂಪೂರ್ಣ ನಂಬಿ ಮುಂದಡಿಯಿಟ್ಟಿವೆ. ಅವುಗಳು ದೇವರನ್ನು ಭಜಿಸುವ ಪ್ರಾರ್ಥಿಸುವುದನ್ನೇ ತಮ್ಮ ಮೊದಲ ಮತ್ತು ಅಂತಿಮ ಆದ್ಯತೆಯಾಗಿರಿಸಿಕೊಂಡಿವೆ. ಬುದ್ಧನ ವಿಶೇಷತೆಯೆಂದರೆ ಆತ ಮಂಡಿಸುವ ಧರ್ಮದಲ್ಲಿ 'ದೇವರ' ಕಲ್ಪನೆಯಿಲ್ಲ. ನರಕದ ಭಯವಾಗಲಿ, ಸ್ವರ್ಗದ ಆಮಿಷವಾಗಲಿ ಇಲ್ಲ. ಅವನದು 'ದೈವಕೇಂದ್ರಿತ'ವಾಗಿರದೆ 'ತತ್ವಕೇಂದ್ರಿತ' ಧರ್ಮ. ದೈವಕೇಂದ್ರಿತ ಧರ್ಮಗಳಲ್ಲಿ ಸಹಜವಾಗಿಯೇ ಪುರೋಹಿತಶಾಹಿ ವ್ಯವಸ್ಥೆ ಹುಟ್ಟಿಕೊಂಡು ಧರ್ಮ–ದೇವರು ಎಂಬುದು ಬಂಡವಾಳವಾಗಿ ಅದು ಉದ್ಯಮದ ಸ್ವರೂಪ ಪಡೆಯುತ್ತದೆ. ಜಾತಿ–ಮತ–ಪಂಥಗಳ ಗುಂಪುಗಾರಿಕೆ ಬೆಳೆಯುತ್ತದೆ. ಬುದ್ಧ ಇವನ್ನೆಲ್ಲ ತೊಡೆದುಹಾಕಿದ. ಬುದ್ಧನ ಪ್ರಕಾರ ಧರ್ಮಕ್ಕೆ ದೇವರು–ಸ್ವರ್ಗ–ನರಕದ ಹಂಗಿಲ್ಲ. ದೇವರ ಕಲ್ಪನೆಗಿಂತ ಧರ್ಮ ದೊಡ್ಡದು. ದೇವರಿಂದ ಹೊರತಾಗಿ ಧರ್ಮ ಸ್ವತಂತ್ರವಾಗಿ ನಿಲ್ಲಬಲ್ಲದು. ಆದರೆ ಧರ್ಮವನ್ನು ಹೊರತುಪಡಿಸಿ ದೇವರ ಕಲ್ಪನೆಯೂ ಸಾಧ್ಯವಿಲ್ಲ. ಆದ್ದರಿಂದ ಬುದ್ಧನದು ಪ್ರಕೃತಿಮೂಲದ ಧರ್ಮ. ಅದು ಪ್ರಕೃತಿಯಷ್ಟೇ ಸ್ವಾಭಾವಿಕವೂ ಹಾಗೂ ವಿಕಾಸಶೀಲವೂ ಹೌದು. ಎಲ್ಲ ಮತಗಳು ಈ ಲೋಕವನ್ನು 'ಆಗಿರುವ ವಸ್ತು' ಪ್ರಪಂಚವೆಂದು ಹೇಳಿದರೆ ಬೌದ್ಧಧರ್ಮ ಮಾತ್ರ ಲೋಕವನ್ನು 'ಆಗುತ್ತಲೇ ಇರುವ' ನಿರಂತರ ಪ್ರವಾಹವೆಂದು ವಿವರಿಸುತ್ತದೆ.

'ದೇವರ ಕುರಿತು ನಿಮ್ಮ ಅಭಿಪ್ರಾಯವೇನು ?' ಎಂಬ ಪ್ರಶ್ನೆಗೆ ಬುದ್ಧ ನೀಡಿದ ಉತ್ತರ ವಿಶೇಷವಾದದ್ದು. ಈವರೆಗೂ ಈ ಪ್ರಶ್ನೆಗೆ ಜಗತ್ತಿನ ಜನ ನೀಡಿದ ಉತ್ತರ ಎರಡೇ. ಒಂದೋ, ದೇವರು ಇದ್ದಾನೆ ಎಂಬುದು, ಇನ್ನೊಂದು ಇಲ್ಲ ಎಂಬುದು. ಈ ಎರಡೂ ಉತ್ತರ ನೀಡುವ ಜನ ಪೂರ್ವಗ್ರಹಕ್ಕೆ ಒಳಗಾಗಿದ್ದಾರೆ. ಇಬ್ಬರದೂ ಕನ್‌ಫರ್ಮ್ಡ್ ಆದ ಉತ್ತರ ಅಲ್ಲ. ಈ ಇಬ್ಬರೂ ತಮ್ಮ ಅಭಿಪ್ರಾಯವನ್ನು ಸಾಬೀತುಪಡಿಸಲು ಸಾಧ್ಯವಿಲ್ಲ. ಆದರೆ ಬುದ್ಧನದು ಪ್ರಾಮಾಣಿಕವಾದ ಉತ್ತರ. 'ದೇವರ ಬಗ್ಗೆ ನನಗೇನೂ ತಿಳಿಯದು. ತಿಳಿಯದ, ಊಹೆಯ ಮೇಲೆ ನಿಂತ ವಿಷಯದ ಕುರಿತು ನಾನು ಮಾತಾಡಲಾರೆ. ನನ್ನ ಕಣ್ಮುಂದೆ ಜಗತ್ತಿದೆ. ಜನರ ಕಷ್ಟ–ದುಃಖಗಳಿವೆ. ಅದರ ಕುರಿತಾಗಿ ಮಾತಾಡುವೆ' ಎಂಬುದು. ಈ ಹಿನ್ನೆಲೆಯಲ್ಲಿ ಬುದ್ಧ ಪ್ರವಾದಿ ಅಲ್ಲ. ಆತ ಮಹಾತ್ಮ, ಆತ ಹೇಳಿದ್ದು ಧರ್ಮವೇ ವಿನಾ ಮತಧರ್ಮ ಅಲ್ಲ. ಆತನದು ಆಗಿರುವ ಮತವಲ್ಲ, ಪ್ರತಿದಿನವೂ ಆಗುತ್ತಲೇ ಇರುವ ಕಾಲದಿಂದ ಕಾಲಕ್ಕೆ ತನ್ನನ್ನು ಪುನರ್ ಕಟ್ಟಿಕೊಳ್ಳುತ್ತಿರುವ ಧರ್ಮ.

ಬುದ್ಧ ಪವಾಡ ಪುರುಷನಲ್ಲ. ಆತ ಯಾವ ಪವಾಡವನ್ನೂ ಮಾಡಲಿಲ್ಲ. ನಾವು ಯಾರೆಲ್ಲರನ್ನು ಮಹಾತ್ಮರೆಂದು ಕರೆದಿದ್ದೇವೆಯೋ ಅವರಾರೂ ಪವಾಡಗಳನ್ನು ಮಾಡಲಿಲ್ಲ. ಮಹಾತ್ಮರು ಎಂದು ಅನ್ನಿಸಿಕೊಂಡವರು ಜನಸಾಮಾನ್ಯರ ನಡುವೆ ಸಾಮಾನ್ಯರಲ್ಲಿ ಸಾಮಾನ್ಯರಾಗಿ ಹುಟ್ಟಿ ಸತ್ಯದ ಹಾದಿಯಲ್ಲಿ ಅಸಾಧ್ಯವಾದುದನ್ನು ಸಾಧ್ಯವಾಗಿಸಿದವರು. ತನ್ನ ಪವಾಡ ಬಲದಿಂದ ಗಂಗಾ ನದಿಯನ್ನು ದಾಟಿದ ಸಾಧಕನನ್ನು ಗೇಲಿ ಮಾಡಿದ ಪರಮಹಂಸರ ಪ್ರಸಂಗ ತಿಳಿದೇ ಇದೆ. ಮತಧರ್ಮಗಳಲ್ಲಿ ಹಾಗೂ ಅವುಗಳ ಸಂಸ್ಥಾಪಕರ ಸಂದರ್ಭಗಳಲ್ಲಿ ಹತ್ತು ಹಲವು ಪವಾಡಗಳನ್ನು ಮೆರೆವ ಸನ್ನಿವೇಶಗಳಿವೆ. ಸತ್ತವರನ್ನು ಬದುಕಿಸುವ ಪುನರುತ್ಥಾನಗೊಳ್ಳುವ ಕತೆಗಳ ಮೂಲಕ ತಮ್ಮದು ಅಲೌಕಿಕ ಧರ್ಮ ಎಂದು ನಂಬಿಸುವ ಕತೆ–ಉಪಕತೆಗಳಿವೆ. ಆದರೆ ಬುದ್ಧ ಇಂತಹ ಮಿಥ್‌ಗಳನ್ನು ಪ್ರಾಯೋಗಿಕವಾಗಿ ನಿರಾಕರಿಸುತ್ತಾನೆ. ಕಿಸಾಗೌತಮಿಯ ಸನ್ನಿವೇಶದ ಮೂಲಕ ಪ್ರಾಕೃತಿಕ ಸತ್ಯಗಳಿಗೆ ನಾವು ಮುಖಾಮುಖಿಯಾಗಬೇಕಾದ ಅನಿವಾರ್ಯತೆಯನ್ನು ತಿಳಿಸುತ್ತಾನೆ. ವಿಧಿವಾದ, ಹಣೆಬರಹ, ಭವಿಷ್ಯ, ಯಾಗ, ಯಜ್ಞ ಮುಂತಾದ ಪುರೋಹಿತಶಾಹಿ ಗ್ರಹಿಕೆಗಳನ್ನು ಖಂಡಿಸುತ್ತಾನೆ. 'ನಿನಗೆ ನೀನೇ ಒಡೆಯ' (ಆತ್ತಾ ಹಿ ಆತ್ತಾನೋ ನಾಥೊ) ಎಂದು ಘೋಷಿಸುವ ಬುದ್ಧ 'ನಮ್ಮೆಲ್ಲ ಕಷ್ಟ–ನಷ್ಟ–ಸುಖ–ದುಃಖಗಳಿಗೆ ಜಯಾಪಜಯಗಳಿಗೆ ನಾವೇ ಕಾರಣ, ಬೇರಾರೂ ಹೊಣೆಗಾರರಲ್ಲ' ಎನ್ನುತ್ತ ಬದುಕನ್ನು ಅತ್ಯಂತ ಸಕಾರಣಗಳಿಂದ ತರ್ಕಬದ್ಧವಾಗಿ ವಿವರಿಸುತ್ತಾನೆ.

ಬುದ್ಧನದು ಮೇಲ್ನೋಟಕ್ಕೆ ಮನುಷ್ಯಕೇಂದ್ರಿತ ಧರ್ಮ ಎನಿಸಿದರೂ ಅದು ಜೀವಕೇಂದ್ರಿತ ಧರ್ಮ ಎಂಬುದನ್ನು ಮರೆಯಬಾರದು. ಈತನ ದಯೆ–ಕ್ಷಮೆ–ಕರುಣೆ–ಮೈತ್ರಿಗಳು ನಿಸರ್ಗದ ಎಲ್ಲ ಜೀವಿಗಳನ್ನು ಒಳಗೊಂಡು ಬೆಳೆಯುತ್ತವೆ. ಯಜ್ಞಕ್ಕಾಗಿ ನೀಡುವ ಬಲಿ, ಆಹಾರಕ್ಕಾಗಿ ಬೇಟೆ, ಅಧಿಕಾರಕ್ಕಾಗಿ ಯುದ್ಧ – ಈ ಎಲ್ಲವೂ ಅವನ ಧರ್ಮಕ್ಕೆ ವಿರುದ್ಧವೇ. ನಿಸರ್ಗದ ಎಲ್ಲವೂ ಮನುಷ್ಯನ ಸುಖಕ್ಕಾಗಿಯೇ ಎಂಬ ಮತಧರ್ಮಗಳ ಪ್ರಕೃತಿವಿರೋಧಿ ನಿಲುವನ್ನು ಆತ ಒಪ್ಪುವುದಿಲ್ಲ. ಮನುಷ್ಯ ಕೂಡ ನಿಸರ್ಗದ ಒಂದು ಭಾಗ ಮಾತ್ರ ಎನ್ನುತ್ತಾನೆ. ಅವನದು ನಿಸರ್ಗವಿವೇಕ.

ಜಗತ್ತಿನಲ್ಲಿ ಪೂರ್ಣ ಒಳಿತು – ಪೂರ್ಣ. ಎಲ್ಲವೂ ಈ ಎರಡನ್ನೂ ಒಳಗೊಂಡಿರುತ್ತವೆ. ಕೇಡೆಂಬುದನ್ನು ನಾಶ ಮಾಡುವುದಲ್ಲ. ಬದಲಿಗೆ, ಅದನ್ನು ಒಳಿತಾಗಿ ಪರಿವರ್ತಿಸಿ ಎನ್ನುವುದು ಬುದ್ಧನ ಬೋಧನೆಗಳಲ್ಲೊಂದು. ಕೇಡನ್ನು ಒರೆಸಿಹಾಕು ಎಂಬ ಮತಧರ್ಮಗಳ ದಮನಕಾರಿ ನಿಲುವನ್ನು ಅವನು ಒಪ್ಪುವುದಿಲ್ಲ. ಜಗತ್ತಿಗೆ ಕಂಟಕವಾಗಿದ್ದ ಅಂಗುಲಿಮಾಲಾ ಬದಲಾಗುವುದು, ರಾಜನರ್ತಕಿ



*ಮ್ಯಾನ್ಮಾರ್, ಸಿರಿಯಾ, ಇರಾಕ್, ಆಫ್‌ಘಾನಿಸ್ಥಾನಗಳಲ್ಲಿನ ಬುದ್ಧನ ಮೂರ್ತಿಗಳನ್ನು ಧ್ವಂಸಗೊಳಿಸುತ್ತಿರುವ ತಾಲಿಬಾನಿಗಳು.*

ಅಮ್ರಪಾಲಿ ತನ್ನ ವೇಶ್ಯಾವೃತ್ತಿಯಿಂದ ಹೊರಬರುವುದು, ಇಂತಹ ಹಲವಾರು ಪ್ರಸಂಗಗಳ ಮೂಲಕ ಬುದ್ಧ ತನ್ನ ತತ್ವಗಳನ್ನು ಪ್ರಾಯೋಗಿಕವಾಗಿಯೇ ವಿವರಿಸುತ್ತಾನೆ. ಈ ಹಿನ್ನೆಲೆಯಲ್ಲಿ ಬುದ್ಧ ಜಗತ್ತಿನ ಮಹಾನ್ ವೈದ್ಯ. ಆತ ರೋಗವನ್ನು ಗುಣಪಡಿಸಲು ಮೊದಲು ರೋಗಮೂಲವನ್ನು ಪತ್ತೆಹಚ್ಚುವ ವಿಧಾನ ಅನುಸರಿಸಿದ. ಅವನದು ತಾರ್ಕಿಕ ಹಾಗೂ ವೈಜ್ಞಾನಿಕವಾದ ಮಾರ್ಗ.

ಬುದ್ಧನದು ಶಬ್ದಾಡಂಬರದ ಜಗತ್ತಲ್ಲ. ಭಜನೆ – ಪ್ರಾರ್ಥನೆ ಇವೆಲ್ಲವೂ ಅವನಿಗೆ 'ವೇಷಧಾರಿ'ಗಳ ವಿದ್ಯೆಯೆಂಬುದು ತಿಳಿದಿತ್ತು. ಆದ್ದರಿಂದ ಬುದ್ಧ ಅಂತರಂಗದ ಜಗತ್ತಿನೊಳಗಿನ ಸಂವಾದಕ್ಕೆ ಪೂರಕವಾದ ಒಳನೋಟ ಕಂಡುಕೊಳ್ಳಲು ನೆರವಾಗುವ 'ಧ್ಯಾನಮಾರ್ಗ'ವನ್ನು ಅನುಸರಿಸಿದ. 'ಪ್ರಾರ್ಥನೆಯಿಂದ ಏನಾದರೂ ಪಡೆಯಲು ಸಾಧ್ಯವೇ ?' – ಎಂಬ ಶಿಷ್ಯನ ಮಾತಿಗೆ ಆತನ ಉತ್ತರ, 'ಪ್ರಾರ್ಥನೆಯಿಂದ ಮನಶ್ಶಾಂತಿ ಸಿಗಬಹುದಷ್ಟೆ. ಆದರೆ ಜಗತ್ತಿನ ಎಲ್ಲರೂ ಸೇರಿ ವರ್ಷಾನುಗಟ್ಟಲೆ ಕುಳಿತು ನಿರಂತರ ಪ್ರಾರ್ಥನೆ ಮಾಡಿದರೂ ನದಿಯ ಆ ದಡವನ್ನು ತಲುಪಲಾದೀತೇ ? ನದಿ ದಾಟಲು ನಮಗಿರುವುದು ಎರಡೇ ದಾರಿ. ಒಂದೋ ಈಜುವುದು, ಇಲ್ಲವೇ ದೋಣಿಯನ್ನು ಆಶ್ರಯಿಸುವುದು. ಅಂದರೆ ಪ್ರಯತ್ನದ ವಿನಾ ಇಲ್ಲಿ ಏನೂ ಸಾಧ್ಯವಾಗದು.' ಪ್ರಾರ್ಥನೆಯ ಹುಸಿತನ, ಪ್ರಯತ್ನದ ಫಲದ ಕುರಿತಾಗಿ ಬುದ್ಧ ಅರ್ಥಪೂರ್ಣವಾಗಿ ವಿವರಿಸುವುದು ಹೀಗೆ. ಪ್ರಾರ್ಥನೆಗೆ ಪರ್ಯಾಯವಾಗಿ ಆತ ಹೇಳುವ 'ಧ್ಯಾನ ಮಾರ್ಗ' ವಿಶಿಷ್ಟವಾದುದು. ಅದು ಮಾತಿನ ಲೋಕವಲ್ಲ, ಮೌನದ ಜಗತ್ತು. ಅದು ಪ್ರದರ್ಶನವಲ್ಲ, ಒಳಲೋಕದ ವಿಹಾರ – 'ನಮ್ಮಲ್ಲಿ ಸಹಜವಾಗಿರುವ ಕ್ಲೇಶಗಳ ಮೇಲೆ ನಾವು ಸಾಧಿಸಬಹುದಾದ ನಿಯಂತ್ರಣವೇ ಯೋಗ. ಜಗತ್ತನ್ನು ಕಾಡುತ್ತಿರುವುದೇ ಈ ಕ್ಲೇಶಗಳು. ಈ ಕ್ಲೇಶಗಳಿಂದ ನಮ್ಮನ್ನು ಬಿಡುಗಡೆಗೊಳಿಸುವ ದಾರಿಯೇ ಯೋಗ' – ಮನಶ್ಶಾಸ್ತ್ರಜ್ಞ ಸಿ. ಜಿ. ಯೊಂಗ್‌ನ ಈ ಕಾಲದ ಅಭಿಪ್ರಾಯವಿದು. ಈ ಅಂತರ್ಮುಖತೆಯಿಂದಲೇ ಧರ್ಮದ ಸಾರಸತ್ವವಾದ 'ಸತ್ಯ'ವು ಗ್ರಾಹ್ಯವಾಗುತ್ತದೆ. ಅಂತರಂಗದ ಪುಸ್ತಕ ತೆರೆಯದೆ, ಯಾವ ಪುಸ್ತಕ ಓದಿಯೂ ಏನೂ ಪ್ರಯೋಜನವಾಗದು ಎನ್ನುತ್ತಾನೆ ಬುದ್ಧ. ಧ್ಯಾನಮಾರ್ಗ ಎಂಬುದು ಲೌಕಿಕದಿಂದ ಅಲೌಕಿಕಕ್ಕೆ ಕಟ್ಟುವ ಸೇತುವೆಯಾಗಿರದೆ ಅದು ಬಹಿರಂಗದ ಶಬ್ದಜಗತ್ತಿನಿಂದ ಅಂತರಂಗದ ಮೌನದ ಲೋಕಕ್ಕಿಳಿಯುವ ಹಾದಿ. ಒಳಲೋಕವನ್ನು ಕಾಣದೆ ಹೊರಜಗತ್ತನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗದು. 'ಕೆಲವು ವ್ಯಕ್ತಿಗಳು ಮಾತ್ರ ಈ ಜಗತ್ತಿನಲ್ಲಿ 'ಒಳನೋಟ'ವನ್ನು ಕಾಣಬಲ್ಲರು. ಉಳಿದಂತೆ ಎಲ್ಲರೂ ಕುರುಡರು' ಎನ್ನುತ್ತಾನೆ ಬುದ್ಧ. ಧ್ಯಾನಮಾರ್ಗ ವ್ಯಕ್ತಿಗತವಾದ ಧರ್ಮದ ಆಳ–ಅಗಲಗಳನ್ನು ಇನ್ನಷ್ಟು ಮತ್ತಷ್ಟು ವಿಸ್ತರಿಸಬಲ್ಲದು.

ಇಂತಹ ಮಹೋನ್ನತ ಧಮ್ಮ ಅಶೋಕನ ಕಾಲದಿಂದ ಹರ್ಷಗುಪ್ತನ ಕಾಲದವರೆಗೆ ಒಂದು ಸಾವಿರ ವರ್ಷದವರೆಗೆ ಭಾರತದಲ್ಲಿ ಉತ್ತುಂಗ ಸ್ಥಿತಿಯಲ್ಲಿತ್ತು. ಜಾತಿ–ವರ್ಗ–ಮತ–ಮೌಢ್ಯಗಳಿಂದ ಮುಕ್ತವಾಗಿದ್ದ ಭಾರತದ ಸಮಾನತೆಯ ಚಿತ್ರಗಳು ಇಲ್ಲಿಯ ಒಂದು ವರ್ಗಕ್ಕೆ ಸಹಿಸಲು ಸಾಧ್ಯವಾಗದೇ ಹೋಗಿದ್ದು ಚರಿತ್ರೆಯ ವಿಪರ್ಯಾಸ. ಬುದ್ಧಸ್ತೂಪ – ಮೂರ್ತಿ – ಬೌದ್ಧ ಸಾಹಿತ್ಯ ಎಲ್ಲವನ್ನು ಅಳಿಸಿಹಾಕುವ ಪ್ರಯತ್ನವನ್ನು ನಿರಂತರವಾಗಿ ನಡೆಸಲಾಯಿತು. ವಿಶ್ವದ ೪೮ ದೇಶಗಳಲ್ಲಿ ಹಾಗೂ ಕೆಲವು ದೇಶಗಳಲ್ಲಿ ರಾಷ್ಟ್ರೀಯ ಧರ್ಮವಾಗಿ ಹೆಸರಾಗಿರುವ ಬೌದ್ಧಧರ್ಮ ತನ್ನ ತವರು ದೇಶದಲ್ಲಿ ಮಾತ್ರ ಹಿನ್ನೆಲೆಗೆ ಸರಿಯಿತು. ಅಂಬೇಡ್ಕರ್ ತಮ್ಮ ಅಪಾರ ಸಂಖ್ಯೆಯ ಬೆಂಬಲಿಗರೊಂದಿಗೆ ಬೌದ್ಧಧರ್ಮವನ್ನು ಸ್ವೀಕರಿಸಿ ಬುದ್ಧನ ವಿರೋಧಿಗಳಿಗೆ ಮರ್ಮಾಘಾತವನ್ನು ಕೊಟ್ಟರಲ್ಲದೆ ಈ ಧರ್ಮಕ್ಕೆ ತವರುನೆಲದಲ್ಲಿ ಮರುಚಾಲನೆ ನೀಡಿದರು. ಧರ್ಮ ಹಾಗೂ ದೇವರ ಹೆಸರಲ್ಲಿ ಮೂಲತಃ ತಮ್ಮ ಕ್ರೌರ್ಯ – ದಬ್ಬಾಳಿಕೆಯಂತಹ ಊಳಿಗಮಾನ್ಯ ಮನೋಧರ್ಮವನ್ನು ಮುಂದುವರಿಸಿಕೊಂಡು ಬಂದಿದ್ದ ಈ ವರ್ಗಕ್ಕೆ ಬುದ್ಧನ ದಯೆ – ಕರುಣೆ – ಮೈತ್ರಿ – ಸಮಾನತೆಯ ಆಶಯಗಳನ್ನು ಸಹಿಸಿಕೊಳ್ಳಲಾಗಲಿಲ್ಲ. ಈ ಅಸಹನೆಯನ್ನು ಇಂದಿಗೂ ಅಲ್ಲಲ್ಲಿ ಕಾಣುತ್ತಿದ್ದೇವೆ. ಈ ದೇಶದಿಂದ ಬುದ್ಧನನ್ನು ತೊಲಗಿಸಿದ್ದೇವೆ ಎಂದು ಬೀಗುವ ಹಿಂದುತ್ವವಾದಿಗಳು, ಮ್ಯಾನ್ಮಾರ್ ಸಿರಿಯಾ ಇರಾಕ್ ಆಫ್‌ಘಾನಿಸ್ಥಾನಗಳಲ್ಲಿನ ಬುದ್ಧನ ಮೂರ್ತಿಗಳನ್ನು ಧ್ವಂಸಗೊಳಿಸುತ್ತಿರುವ ತಾಲಿಬಾನಿಗಳು – ಈ ಇಂಥವರ ಎಲ್ಲರ ಪ್ರತಿರೋಧಗಳನ್ನೂ ಮೀರಿ ಬುದ್ಧ ಬೆಳೆಯುತ್ತಲೇ ಇದ್ದಾನೆ. ಬುದ್ಧನನ್ನು ಯಾರೂ ನಾಶಮಾಡಲಾಗುವುದಿಲ್ಲ. ಯಾಕೆಂದರೆ, ಈಗ ಬುದ್ಧ ಅಥವಾ ಬುದ್ಧತ್ವ ಎನ್ನುವುದು ಒಬ್ಬ ವ್ಯಕ್ತಿಯಾಗಿ ಒಂದು ಮೂರ್ತಿಯಾಗಿ ಉಳಿದಿಲ್ಲ. ಅದೊಂದು ಪರಮಸತ್ಯ ಹಾಗೂ ಸಿದ್ಧಾಂತವಾಗಿ ಬೆಳೆದು ನಿಂತಿದೆ.

**ಡಾ॥ ಸರ್ಫ್ರಾಜ್ ಚಂದ್ರಗುತ್ತಿ**
'ದಿವ್ಯಕೃಪ', ೧ನೇ ತಿರುವು, ನೆಹರೂ ನಗರ, ಸಾಗರ – ೫೭೭ ೪೦೧

# ಕಾಯಕ

ಕಾವ್ಯಲೋಕ



ನನ್ನದು
ಉಂಡೂ ಹೋದವರು
ಕೊಂಡೂ ಹೋದವರು
ಉಂಡ ಮನೆ ಜಂತಿ ಎಣಿಸಿ
ಎದ್ದು ಹೋದವರ
ಎಲೆ ಎತ್ತುವ ಕಾಯಕ !

ಉಂಡವರು
ಅರ್ಧಮರ್ಧ ಉಂಡು
ತಾವೂ ತಿನ್ನದೆ
ಬೇರೆಯವರಿಗೂ ತಿನ್ನಲು ಬಿಡದೆ
ಚಲ್ಲಾಪಿಲ್ಲಿ ಚೆಲ್ಲಿಹೋದರೆ
ಎಲೆ ಎತ್ತುವುದು ಕಷ್ಟ ಕಷ್ಟ!
ಒಂದಗುಳೂ ಬಿಡದೆ
ಬಳಿದು ಬಾಯಲ್ಲಿ ಹಾಕಿಕೊಂಡು
ನುಣ್ಣಗೆ ಬೋಳಿಸಿದ ತಲೆ ಹಾಗೆ ಮಾಡಿಟ್ಟರೆ
ಉಂಡದ್ದೆಷ್ಟು ?
ಕೊಂಡು ಹೋದದ್ದೆಷ್ಟು ?
ಲೆಕ್ಕ ಹಾಕುವುದು ಇನ್ನೂ ಕಷ್ಟ !

ಇದೊಂದು ರೀತಿ
ಸತ್ತ ಹೆಣದ ಪೋಸ್ಟ್‌ಮಾರ್ಟಂ ಮಾಡಿದ ಹಾಗೆ !
ಚುಚ್ಚಿದ್ದೇ ಚುಚ್ಚುವ
ಮುಚ್ಚಿದ ತೂತೇ ಮುಚ್ಚುವ
ಸತ್ತ ಶವ ಅಡ್ಡಾದಿಡ್ಡಿ ಕೊಯ್ದು
ಕಾರಣ ಹೇಳಿ ಕೈತೊಳೆದುಕೊಳ್ಳುವ ಕೆಲಸ !
ಏನೇ ಪ್ರಯತ್ನಿಸಿದರೂ
ಹೆಣ ಮಾತನಾಡುವ ಗ್ಯಾರಂಟಿ ಇಲ್ಲ !

ಸ್ಮಶಾನಕ್ಕೆ ಹೋದ ಹೆಣ
ಹುಂಡಿಗೆ ಹಾಕಿದ ಹಣ
ಎರಡೂ ಒಂದೇ !

ಆದರೂ ನಾನು
ಸರಕಾರದ ಮನೆ ಕಾಯುವ
ನಂಬಿಕಸ್ಥ ನಾಯಿ !

**ಸಂಗಮೇಶ ಉಪಾಸೆ**
ನಂ. ೨೭೩, 'ಪ್ರೇಮ ಸಂಗಮ', ೩ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ
ವಿಧಾನಸೌಧ ಲೇಔಟ್, ಲಗ್ಗೆರೆ, ಬೆಂಗಳೂರು – ೫೬೦ ೦೫೮





# ಭಗ್ನಾವಶೇಷಗಳ ಜಾಡು ಹಿಡಿದು...

೩೩°೪೪'೪೪''ಉ ೭೫°೧೩'೧೩''ಪೂ – ಈ ಅಕ್ಷಾಂಶ ರೇಖಾಂಶಗಳಿಗೆ ಗೂಗಲ್ ಅರ್ಥ್‌ನಿಂದ ಹುಡುಕಿದರೆ ಆ ಕಟ್ಟಡದ ವೈಶಾಲ್ಯದ ಅರಿವು ಉಂಟಾಗುತ್ತದೆ. ಪ್ರಾಕಾರದ ಹೊರ ಆವರಣದಲ್ಲಿ ಸರಿಯಾಗಿ ೩೬೫ ಗೂಡುಗಳಿವೆ. ಇದು ಬಹುಶಃ ದಿನಗಣನೆಗಾಗಿ ಮಾಡಿದ್ದಿರಬಹುದು. ೧೮೬೮ರಲ್ಲಿ ಇದನ್ನು ಬ್ರಿಟಿಷ್ ಛಾಯಾಗ್ರಾಹಕ ಜಾನ್ ಬುರ್ಕೆ ಸೆರೆಹಿಡಿದಿದ್ದ – ಇದೊಂದೇ ದಾಖಲೆ ಅತ್ಯಂತ ಹಳೆಯದು ಎನ್ನಬಹುದು. ಬೃಹತ್ ಗಾತ್ರದ ಕಲ್ಲುಗಳು ಒಂದಕ್ಕೊಂದು ಹೆಣೆದುಕೊಂಡಂತೆ ನಿಂತಿದ್ದವು. ಭೂಕಂಪಗಳ ಕಾರಣ ಹಲವಾರು ಹೆಣಿಗೆಗಳು ಬಿಟ್ಟುಹೋಗಿ ಗೋಡೆಗಳೇ ಬಿದ್ದುಹೋಗಿವೆ. ಬಹಳ ಕ್ರೂರಿ ಎಂದೆನಿಸಿಕೊಂಡಿದ್ದ ಸಿಕಂದರ್ ಬುಷ್ತಿಖಾನ್ ೧೪ನೆಯ ಶತಮಾನದಲ್ಲಿ ಇದನ್ನು ಕೆಡವಿಸಿದ. ಕೆಡವಲು ಒಂದು ವರ್ಷಕ್ಕೂ ಹೆಚ್ಚು ಸಮಯ ಬೇಕಾಯಿತಂತೆ.

ನೀಲಿ ಸರೋವರ, ಅದರ ಮೇಲಿನ ದೋಣಿಗಳು, ಹಿನ್ನೆಲೆಯಲ್ಲಿ ಹಿಮಾಚ್ಛಾದಿತ ಶಿಖರಗಳು, ಕೆಂಪು ಕೆನ್ನೆಯ ಪುಟಾಣಿಗಳು – ಇವು ಶ್ರೀನಗರದ ಕುರಿತು ನಮ್ಮ ತಲೆಯಲ್ಲಿ ತುಂಬಿಕೊಂಡಿರುವ ಚಿತ್ರಣಗಳು. ಕೆಲವೊಂದು ಹಳೆಯ ಹಿಂದಿ ಚಿತ್ರಗೀತೆಗಳ ದೃಶ್ಯಗಳೂ ಇದಕ್ಕೆ ಕಾರಣ. ಶ್ರೀನಗರಕ್ಕೆ ಹೋಗುವ ಅವಕಾಶ ಸಿಕ್ಕಿದೊಡನೆಯೇ ಹೊರಟು ನಿಂತದ್ದು ಇದೇ ಕಾರಣಕ್ಕೆ. ಅಲ್ಲಿ ನಡೆಯಬೇಕಾಗಿದ್ದ ಗೋಷ್ಠಿಯೊಂದಕ್ಕೆ ಆಹ್ವಾನ ಸಿಕ್ಕಿದ್ದೇ ನೆಪವಾಯಿತು.

ವಿಮಾನ ಚಂಡೀಘಡವನ್ನು ದಾಟಿದ ಕೂಡಲೇ ಹಿಮಾಚ್ಛಾದಿತ ಶಿಖರಗಳು ಕಂಡವು. ಅರ್ಧಗಂಟೆಯೊಳಗಾಗಿ ನಾವು ಆ ಶಿಖರಗಳ ಮೇಲೆಯೇ ಹಾರುತ್ತಿದ್ದೆವು. ಬಿಳಿಯ ಶಿಖರಗಳು ಮಧ್ಯೆ ಮಧ್ಯೆ ನೀರು ಕರಗಿ ಹರಿದು ಹೋಗಿರುವುದರಿಂದ ಉಂಟಾಗಿದ್ದ ಜಾರುಬಂಡೆಗಳಂತಹ ಸೀಳುಗಳು. ನೀರೂ, ಹಿಮವೂ ಸೇರಿ ಹರಿಯುತ್ತಿದ್ದ ನದಿಗಳು – ಒಂದೇ ಎರಡೇ, ಪರ್ವತದಿಂದಿಳಿದ ಇವು ಮುಂದೆ ಒಂದಾಗಿ ದೊಡ್ಡ ನದಿಯಾಗುವ ಸೂಚನೆ ಮಾತ್ರ ನಮಗೆ ಕಂಡಿತಷ್ಟೆ. ಮುಂದೆ ಅವು ಭಾರೀ ದೊಡ್ಡ ನದಿಗಳಾಗಿ ಪಂಜಾಬು, ಪಾಕಿಸ್ತಾನದ ದಾಹ ತೀರಿಸಿವೆಯಲ್ಲ.

ಶ್ರೀನಗರದ ವಿಮಾನ ನಿಲ್ದಾಣದಿಂದ ವಿಶ್ವವಿದ್ಯಾಲಯದ ಹಾದಿ ಗೂಗಲ್ ಮ್ಯಾಪ್ ಪ್ರಕಾರ ಹೆದ್ದಾರಿಯೇ ಆದರೂ ನಾವು ಕ್ರಮಿಸಿದ್ದು ಮಾತ್ರ ಇಕ್ಕಟ್ಟಾದ ಸಂದಿಗೊಂದಿಗಳ ಮೂಲಕ. ಫ್ಲೈ ಓವರ್ ನಿರ್ಮಾಣದ ಪ್ರಭಾವ. ಆ ಊರಿನ ಒಳಗಿನ ಹೂರಣ ನೋಡುವ ಅವಕಾಶ ಹೀಗೆ ಸಿಕ್ಕಿತು.

ತೀರಾ ಇಳಿಜಾರಾಗಿದ್ದ ರಸ್ತೆ ಕೂಡುವಿಕೆಯೊಂದರಲ್ಲಿ ಒಂದು ಸ್ಕೂಟರ್ ಮೇಲೇರಲು ಸಾಹಸಪಡುತ್ತಿತ್ತು. ಹಿಂದೆ ಕುಳಿತಿದ್ದ ಮಹಿಳೆ ಬಿದ್ದೇಹೋದಳು. ತಕ್ಷಣವೇ ಆಕೆಗೆ ನೀರು ಕೊಟ್ಟು ಕುಳ್ಳಿರಿಸಲು ನಮ್ಮ ಡ್ರೈವರ್ ಓಡಿ ಹೋದ. ಸವಾರನಿಗಾಗಲೀ, ಆಕೆಗಾಗಲೀ ಹೆಲ್ಮೆಟ್ ಇರಲಿಲ್ಲ. ಎದ್ದು ಪ್ರಯಾಣ ಮುಂದುವರಿಸಿದರಾದರೂ ಪಾಪ ಆಕೆಯ ಗತಿ ಏನಾಯಿತೋ ತಿಳಿಯಲಿಲ್ಲ.

ರಾಜಭವನ ಮುಂತಾದ ಕಟ್ಟಡಗಳು ಇರುವ ಭಾಗ ಝೀಲಂ ನದಿಯ ದಂಡೆಯ ಮೇಲಿದೆ. ಅಲ್ಲಿಯವರೆಗೂ ರಸ್ತೆಗಳು, ಉದ್ಯಾನ ಎಲ್ಲವೂ ಸುಂದರವಾಗಿವೆ. ನದಿ ದಾಟಿದೆವು. ಆ ನದಿಯ ನೀರು (ಎಲ್ಲ ನದಿಗಳ ಹಾಗೆಯೇ) ಕೊಳಚೆ ನೀರು ಅಷ್ಟೆ. ಅಲ್ಲಿಂದ ಮುಂದೆ ನಿಜವಾದ 'ನಗರ ದರ್ಶನ' ಆರಂಭವಾಯಿತು. ಮಳೆ ನೀರು ಹರಿದು ಅಲ್ಲಲ್ಲೇ ಕೊಚ್ಚೆ ಗುಂಡಿಗಳು, ಇಕ್ಕೆಲಗಳಲ್ಲೂ ಎತ್ತರವಾದ ಗೋಡೆಗಳು – ಒಳಗಿರುವುವು ಮನೆಯೋ, ಕಾಲೇಜೋ ಏನೂ ತಿಳಿಯುವಂತಿಲ್ಲ. ಲಾಲ್ ಚೌಕ್ ಎಂದು ಆಗಾಗ್ಗೆ ಸುದ್ದಿಯಲ್ಲಿರುವ ಅಂಗಡಿ ಸಾಲುಗಳನ್ನು ನೋಡಿ ಮುಂದೆ ಸರಿದೆವು. ಬಲದಲ್ಲಿ ದಲ್ ಸರೋವರದ ಅಂಚು ಎಡದಲ್ಲಿ ಇನ್ನೊಂದು ಸರೋವರ ನಿಗೀನ್ ಎಂಬ ಹೆಸರಿನದ್ದು. ಅಲ್ಲಿ ನೀರ ಹಕ್ಕಿಗಳು ಹಾರಾಡಿಕೊಂಡಿದ್ದವು. ಮುಂದಿನ ರಸ್ತೆ ಕಾಶ್ಮೀರ ವಿಶ್ವವಿದ್ಯಾಲಯದವರೆಗೂ ಸುಗಮವಾಗಿತ್ತು. ದಾರಿಯಲ್ಲಿ ಈಚೆಗೆ ಬಿಸಿ ಸುದ್ದಿಯಲ್ಲಿದ್ದ ಎನ್.ಐ.ಟಿ. ಕೂಡ ಕಂಡಿತು.

ಕಾಶ್ಮೀರ ವಿಶ್ವವಿದ್ಯಾಲಯದ ತುಂಬ ಹಸಿರೋ ಹಸಿರು. ಹಳೆಯ ಬ್ರಿಟಿಷ್ ಕಟ್ಟಡಗಳು; ಜೊತೆಯಲ್ಲಿಯೇ ಹೊಸ ಕಟ್ಟಡಗಳೂ ಇದ್ದವು. ಗೋಷ್ಠಿಗಳು ಬೇರೆ ಬೇರೆ ವಿಭಾಗಗಳಲ್ಲಿ

**ಡಾ|| ಬಿ. ಎಸ್. ಶೈಲಜಾ**

ನಡೆಯುತ್ತಿದ್ದುದರಿಂದ ಅವುಗಳನ್ನು ನೋಡುವ ಅವಕಾಶವೂ ಸಿಕ್ಕಿತು. ವಿಶ್ವವಿದ್ಯಾಲಯದ ಪೂರ್ವದ ಅಂಚಿಗೆ ದರ್ಗಾ, ಅದರಾಚೆಗೆ ದಲ್ ಸರೋವರ. ಅದರ ಪಕ್ಕ ಪುಟ್ಟ ಉದ್ಯಾನ. ದರ್ಗಾದ ಪಕ್ಕದಲ್ಲಿ ಒಂದು ಮಾರುಕಟ್ಟೆ. ಸಂಜೆಯ ಹೊತ್ತು ಅಲ್ಲಿ ವ್ಯಾಪಾರ ಜೋರು.

ನಾನು ಭಾಗವಹಿಸಿದ್ದ ಗೋಷ್ಠಿ ಮೂರು ದಿನ ನಡೆಯಿತು. ಅದರ ನಡುವೆ ನನಗೆ ಸುತ್ತಾಟಕ್ಕೆ ಕಾಲಾವಕಾಶ ಸಿಕ್ಕಿದ್ದು ಬಹಳ ಕಡಿಮೆ. ಆದರೆ, ಮೂರು ಬಗೆಯ ಶಾಲೆಗಳಿಗೆ ಹೋಗಲು ಅವಕಾಶ ಸಿಕ್ಕಿತು. ಮೊದಲನೆಯದು ಬಿ.ಎಡ್. ಕಾಲೇಜು. ಶಿಕ್ಷಕರಾಗುವವರ ತಂಡವನ್ನು ಉದ್ದೇಶಿಸಿ ಭಾಷಣ ಮಾಡಬೇಕಾಗಿತ್ತು. ಎನ್.ಐ.ಟಿ.ಯಲ್ಲಿ ಪ್ರೊಫೆಸರ್ ಆಗಿರುವ ಸೀಮಿನ್ ರುಬಾಬ್ ಅವರು ಆಸಕ್ತಿ ವಹಿಸಿ ಈ ಉಪನ್ಯಾಸ ಏರ್ಪಾಟು ಮಾಡಿದ್ದರು. ಆ ಕಟ್ಟಡ ನದಿಗೆ ಸಮೀಪವಾಗಿತ್ತು. ೨೦೧೪ರಲ್ಲಿ ಬಂದ ದಿಢೀರ್ ಪ್ರವಾಹದ ಕಾರಣ ಕೆಳ ಅಂತಸ್ತು ಜಲಮಯವಾಗಿತ್ತು. ಆಗ ಮೊದಲ ಅಂತಸ್ತಿನವರೆಗೂ ನೀರು ಏರಿದ್ದನ್ನು ಗುರುತಿಸುವ ಗೆರೆ ಅಲ್ಲಿತ್ತು. ಈಗ ಎಲ್ಲಾ ಸಾಧಾರಣ ಸ್ಥಿತಿಗೆ ತಲುಪಿದೆ. ಇನ್ನೊಂದು ಕಾಲೇಜು/ಸ್ಕೂಲು ಎನ್ನಬಹುದು. ೧೧ ಮತ್ತು ೧೨ನೆಯ ತರಗತಿಯವರಿಗೆ ಇದು ಹುಡುಗರ ಶಾಲೆ. ಮೂರನೆಯದು ೧೦ನೆಯ ತರಗತಿಯವರು – ಹೆಣ್ಣು ಮಕ್ಕಳ ಶಾಲೆ. ಉಪನ್ಯಾಸಕ್ಕೆ ಆಯಾ ವರ್ಗದವರ ಪ್ರತಿಕ್ರಿಯೆ ನೀವು ಊಹಿಸಬಹುದಾದಂತೆಯೇ ಇತ್ತು. ಶಿಕ್ಷಕರಲ್ಲಿ ವಿಷಯ ತಿಳಿದುಕೊಳ್ಳಲು ಸ್ವಲ್ಪ ಉತ್ಸಾಹ ಇದ್ದಂತಿತ್ತು. ಹುಡುಗರಲ್ಲಿ ಬೆರಳೆಣಿಕೆಯಷ್ಟು ಜನ ಪ್ರಶ್ನೆಗಳನ್ನು ಕೇಳಿದರು. ಹೆಣ್ಣುಮಕ್ಕಳಿಗಂತೂ ಒತ್ತಾಯ ಮಾಡಿದ ಮೇಲೆ ಒಂದೆರಡು ಪ್ರಶ್ನೆ ಕೇಳಿದರು.

ಮೂರೂ ಸ್ಥಳಗಳಲ್ಲಿ ಉಪನ್ಯಾಸ ಮುಗಿದ ಮೇಲೆ ಒಬ್ಬೊಬ್ಬರಾಗಿ ಬಂದು ಪ್ರಶ್ನೆ ಕೇಳತೊಡಗಿದರು. ಈ ಅನುಭವ ನನಗೆ ಹೊಸದೇನಲ್ಲ. ಸಭೆಯಲ್ಲಿ ಎಲ್ಲರ ಎದುರು ಪ್ರಶ್ನೆಗಳನ್ನು ಕೇಳಬಾರದು ಎಂದು ಕಲಿಸಿಕೊಟ್ಟಿರುತ್ತಾರಲ್ಲ, ಅದರ ಪ್ರಭಾವ ಇದು.

ಗೋಷ್ಠಿಯ ಕಡೆಯ ದಿನ ಉತ್ತರಾರ್ಧದಲ್ಲಿ ಬಿಡುವಿತ್ತು. ಉಳಿದವರು ಶಾಲಿಮಾರ್, ಗುಲ್ಮಾರ್ಗ್ ಇತ್ಯಾದಿ ಸ್ಥಳಗಳಿಗೆ ಹೊರಟರು. ನಾನು ಆರಿಸಿದ್ದು ಮಾರ್ತಾಂಡ ದೇವಾಲಯ. ಮುಖ್ಯವಾಗಿ ದೇವಾಲಯದ ಅವಶೇಷಗಳನ್ನು ನೋಡಲು ಎನ್ನಬಹುದು. ನನ್ನ ಜೊತೆಗೆ ಸೀಮಿನ್ ರುಬಾಬ್ ಕೂಡ ಹೊರಟರು. ಹಲವಾರು ವರ್ಷಗಳ ಹಿಂದೆ ಈ ಮಾರ್ತಾಂಡ ದೇವಾಲಯದ ಶಿಲಾನ್ಯಾಸದಲ್ಲಿಯೇ ಖಗೋಳ ವೈಜ್ಞಾನಿಕ ಅಂಶ ಅಡಕವಾಗಿರುವುದನ್ನು ಓದಿದ್ದೆ. (ಈ ಕುರಿತು ಹೊಸತು ವಿಶೇಷ ಸಂಚಿಕೆಯಲ್ಲಿ ಲೇಖನವನ್ನೂ ಬರೆದಿದ್ದೆ).

ಶ್ರೀನಗರದಿಂದ ಅನಂತನಾಗ್‌ಗೆ ಎರಡು ಗಂಟೆಗಳ ಪ್ರಯಾಣ. ದಾರಿಯಲ್ಲಿ ಲಾಲ್‌ಚೌಕ್‌ಅನ್ನು ಹಾದು, ದಲ್ ಸರೋವರದ ಪ್ರವೇಶದ್ವಾರ, ಅಲ್ಲಿ ಪ್ರವಾಸಿಗಳ ಸಂತೆಯನ್ನು ನೋಡಿದೆವು. ದೋಣಿಯೊಳಗೆ ಮನೆಗಳು ಎಂದೆಲ್ಲಾ ಓದಿದ್ದ ನನಗೆ ಅಲ್ಲಿಯ ದೋಣಿ ಮನೆ ನೋಡಿ ನಗು ಉಕ್ಕಿತು. ಅದೊಂದು ಸಾಧಾರಣ ಮನೆ – ಹೋಟೆಲ್ ರೂಂ – ತಳಪಾಯಕ್ಕೆ ಮಾತ್ರ ಆಧಾರಗಳನ್ನು ಕೊಟ್ಟು ನೀರಿನಲ್ಲಿ ಮುಳುಗಿಸಿದ್ದರು. ಆದ್ದರಿಂದ ಅದು ತೆರೆಗಳಿಗೆ ಬಳುಕಾಡುತ್ತಿತ್ತೋ ಇಲ್ಲವೋ ಅನುಮಾನವಿದೆ.

ಮುಂದೆ ನಮ್ಮ ಹಾದಿ ಬಯಲಿಗೆ ತೆರೆದುಕೊಂಡಿತು. ಆದರೂ ಸುತ್ತಲೂ ಹಿಮಾಚ್ಛಾದಿತ ಶಿಖರಗಳ ಕವಚದಂತಹ ವಿನ್ಯಾಸ ಮುಂದುವರೆದಿತ್ತು. ಝೀಲಂ ನದಿಯ ಪಕ್ಕದಲ್ಲೇ ಸಾಗುವಾಗ ಇಕ್ಕೆಲಗಳಲ್ಲಿ ಕೇಸರಿ ಬೆಳೆಯುವ ಹೊಲಗಳು ಕಂಡವು; "ನವೆಂಬರ್‌ನಲ್ಲಿ ಬನ್ನಿ, ಇಡೀ ಹೊಲವೇ ನೇರಿಳೆ ಬಣ್ಣವನ್ನು ಹೊದ್ದುಕೊಂಡಿರುತ್ತದೆ" ಎಂದು ಸೀಮಿನ್ ಹೇಳಿದರು. ಆ ಹೂವಿನ ಪರಾಗವೇ ಕೇಸರಿ. ಪಾಂಪೂರ್ ಎಂದು ಸಣ್ಣ ಊರು ಕೇಸರಿಗೇ ಪ್ರಸಿದ್ಧಿ.

ಮುಂದೆ ದಾರಿಯುದ್ದಕ್ಕೂ ಮರದ ದಿಮ್ಮಿಗಳ ಅಂಗಡಿಗಳು. ಕ್ರಿಕೆಟ್ ಬ್ಯಾಟ್‌ಗಳನ್ನು ಮಾಡುವ ವಿಲ್ಲೋ ಮರ ಇಲ್ಲಿ ಬೆಳೆಯುತ್ತದೆ. ಆದ್ದರಿಂದ ರಸ್ತೆಯುದ್ದಕ್ಕೂ ಅವುಗಳ ಜಾಹೀರಾತು.

ಅವಂತೀಪುರ ಎಂಬುದೊಂದು ಸಣ್ಣ ನಗರ. ಪ್ರವೇಶಿಸುತ್ತಿದ್ದಂತೆಯೇ ಕಾಣುವುದು ರಸ್ತೆಯ ಪಕ್ಕದಲ್ಲೇ ಹಾಳುಬಿದ್ದ ದೇವಾಲಯ, ಕೆಳಗೆ ಬಿದ್ದಿರುವ ಚೆಲುವಾದ ಮೂರ್ತಿಗಳು, ಕಲ್ಲಿನ ಕೆತ್ತನೆಗಳು ಇತಿಹಾಸವನ್ನೇ ಹೇಳುತ್ತವೆ. ಅದು ಭಗ್ನವಾಗದೇ ಇದ್ದಿದ್ದರೆ... ಎಷ್ಟೊಂದು ಭವ್ಯ ಕಟ್ಟಡವಾಗಿರುತ್ತಿತ್ತು ಎನಿಸಿತು. ಕಾಲನ ಹೊಡೆತಕ್ಕೆ ಸಿಕ್ಕ ಶಿಲ್ಪಗಳಲ್ಲಿ ಕೆಲವಾದರೂ ತಮ್ಮ ಚೆಲುವನ್ನು ಉಳಿಸಿಕೊಂಡಿವೆ. ಎತ್ತರದಲ್ಲಿರುವ ಗರ್ಭಗೃಹದಿಂದ ಸುತ್ತಲಿನ ಭವ್ಯವಾದ ನೋಟ ಕಂಡುಬರುತ್ತದೆ. ಅನತಿ ದೂರದಲ್ಲಿ ಝೀಲಂ ನದಿಯೂ ಇದೆ. ಬಹುಶಃ ಇಂದು ಕಾವೇರಿ ನದೀ ತೀರಗಳಲ್ಲಿರುವ ದೇವಾಲಯಗಳಂತೆ ಭವ್ಯವಾಗಿರುತ್ತಿತ್ತೋ ಏನೋ?

ಅವಂತೀಪುರವನ್ನು ದಾಟಿ ಹೋಗುತ್ತಿದ್ದಾಗ ಸಂಗಂ ಎಂಬ ಫಲಕ ಕಂಡಿತು ವಾಸ್ತವದಲ್ಲಿ ಇದು ಝೀಲಂ ನದಿಯ ಎರಡು ಭಾಗಗಳ ಸಂಗಮ ಸ್ಥಾನವೇ.

ಮುಂದೆ ಅನಂತನಾಗ್ ನಗರವನ್ನು ಪ್ರವೇಶಿಸಿದಾಗ ಡ್ರೈವರನಿಗೆ ಯಾವ ಕಡೆ ಹೋಗಬೇಕೆಂದು ತಬ್ಬಿಬ್ಬಾಯಿತು. ಅವರಿವರನ್ನು ವಿಚಾರಿಸಿ ನಮ್ಮನ್ನು ಮಟನ್ ಎಂಬ ಸ್ಥಳಕ್ಕೆ ಕರೆದೊಯ್ದ (ಇಂಗ್ಲಿಷ್ ಭಾಷೆಯಲ್ಲಿ MATTAN ಎಂದು ಬರೆದಿತ್ತು!) ಅಲ್ಲೊಂದು ಶಿವ ದೇವಾಲಯ. ಸಂದರ್ಶಕರಲ್ಲಿ ಹೆಚ್ಚಿನವರು ಪ್ರವಾಸಿಗಳು – ಕೆಲವು ಕನ್ನಡ ಸಂಭಾಷಣೆಗಳೂ ಕೇಳಿಬಂದವು. ಪೂಜೆ, ಪುನಸ್ಕಾರ ನಡೆಯುತ್ತಿತ್ತು. ಹೊಸದಾಗಿ ಸುಣ್ಣ, ಬಣ್ಣ ಮಾಡಿದಂತಿತ್ತು. ಆದರೆ, ಅದು ನಾನು ಹುಡುಕುತ್ತಿದ್ದ ಸ್ಥಳ ಅಲ್ಲ.

ಈಗ ಡ್ರೈವರ್‌ಗೆ "ಮಾರ್ತಾಂಡ ದೇವಾಲಯ" ಎಂದು ಕೇಳು ಎಂದು ಹೇಳಿದೆ. ಅದು ಬೇರೊಂದು ಸ್ಥಳ ಎಂದು ತಿಳಿಯಿತು. ಇನ್ನೂ ಮೂರ್‍ನಾಲ್ಕು ಕಿ.ಮೀ. ಕ್ರಮಿಸಿ ಬೆಟ್ಟ ಹತ್ತಿದೆವು. ಅಲ್ಲಿ ನಿಂತಿತ್ತು ಆ ಭವ್ಯ ಕಟ್ಟಡ. ಆ ರಚನೆಯೇ ಅತ್ಯಂತ ದೈವೀಕ ಭಾವನೆಯನ್ನು ಮೂಡಿಸುತ್ತದೆ. ಇದನ್ನು ಲಲಿತಾದಿತ್ಯ ಎಂಟನೆಯ ಶತಮಾನದಲ್ಲಿಯೇ ಕಟ್ಟಿಸಿದ. ಅಲ್ಲಿಂದ ಮುಂದೆ ಕಟ್ಟಿದ ಸಾವಿರಾರು ದೇವಾಲಯಗಳಲ್ಲಿ ಇದೇ ವಾಸ್ತುವನ್ನು ಕಾಣಬಹುದು. ೩೩°೪೪'೪೪"ಉ ೭೫°೧೩'೧೩"ಪೂ – ಈ ಅಕ್ಷಾಂಶ ರೇಖಾಂಶಗಳಿಗೆ ಗೂಗಲ್ ಅರ್ಥ್‌ನಿಂದ ಹುಡುಕಿದರೆ ಆ ಕಟ್ಟಡದ ವೈಶಾಲ್ಯದ ಅರಿವು ಉಂಟಾಗುತ್ತದೆ. ಪ್ರಾಕಾರದ ಹೊರ ಆವರಣದಲ್ಲಿ ಸರಿಯಾಗಿ ೩೬೫ ಗೂಡುಗಳಿವೆ. ಇದು ಬಹುಶಃ ದಿನಗಣನೆಗಾಗಿ ಮಾಡಿದ್ದಿರಬಹುದು. ೧೮೬೮ರಲ್ಲಿ ಇದನ್ನು ಬ್ರಿಟಿಷ್ ಛಾಯಾಗ್ರಾಹಕ



ಕ್ರಿಕೆಟ್ ಬ್ಯಾಟ್‌ಗಳನ್ನು ಮಾಡುವ ವಿಲ್ಲೋ ಮರ

ಅವಂತಿ ಸ್ವಾಮಿ ಎಂಬ ವಿಷ್ಣು ದೇವಾಲಯ

ಅವಂತಿ ದೇವಾಲಯ ಭಗ್ನಾವಶೇಷಗಳು





***ಮಾರ್ತಾಂಡ ದೇವಾಲಯ***

***ಮಾರ್ತಾಂಡ ದೇವಾಲಯ***

***ನೆಲದಲ್ಲಿ ಬಿದ್ದಿರುವ ಶಿವಲಿಂಗ***

ಜಾನ್ ಬುರ್ಕೆ ಸೆರೆಹಿಡಿದಿದ್ದ – ಇದೊಂದೇ ದಾಖಲೆ ಅತ್ಯಂತ ಹಳೆಯದು ಎನ್ನಬಹುದು. ಬೃಹತ್ ಗಾತ್ರದ ಕಲ್ಲುಗಳು ಒಂದಕ್ಕೊಂದು ಹೆಣೆದುಕೊಂಡಂತೆ ನಿಂತಿದ್ದವು. ಭೂಕಂಪಗಳ ಕಾರಣ ಹಲವಾರು ಹೆಣಿಗೆಗಳು ಬಿಟ್ಟುಹೋಗಿ ಗೋಡೆಗಳೇ ಬಿದ್ದುಹೋಗಿವೆ. ಬಹಳ ಕ್ರೂರಿ ಎಂದೆನಿಸಿಕೊಂಡಿದ್ದ ಸಿಕಂದರ್ ಬುಷ್ತಿಖಾನ್ ೧೪ನೆಯ ಶತಮಾನದಲ್ಲಿ ಇದನ್ನು ಕೆಡವಿಸಿದ. ಕೆಡವಲು ಒಂದು ವರ್ಷಕ್ಕೂ ಹೆಚ್ಚು ಸಮಯ ಬೇಕಾಯಿತಂತೆ. ಆಗಲೇ ಕಾಶ್ಮೀರದಲ್ಲಿ ಹಿಂದೂಗಳ ಹತ್ಯಾಕಾಂಡ ಆರಂಭವಾಗಿದ್ದು. ೪ ತೊಲ ಬೆಳ್ಳಿಯ ತಲೆಗಂದಾಯ ಹಿಂದೂಗಳ ಮೇಲಿತ್ತಂತೆ. ಹೀಗೆ ಕೆಡವಿಸಿದ್ದರ ಹಿಂದೆ ಇದ್ದ ಉದ್ದೇಶ ಅಲ್ಲಿ ಅಡಗಿಸಿದ್ದ ಚಿನ್ನವನ್ನು ಕೊಳ್ಳೆ ಹೊಡೆಯುವುದೇ ಆಗಿತ್ತು. ಏಕೆಂದರೆ, ಅವಂತಿಪುರದಲ್ಲಿಯೂ ಅಷ್ಟೇ ಇಲ್ಲಿಯೂ ಅಷ್ಟೇ ಮೂಲಗರ್ಭಗೃಹವನ್ನೇ ಒಡೆದು ಹಾಕಿ ಶಿವಲಿಂಗವನ್ನು ಕಿತ್ತು ಹೊರಗೆಸೆಯಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ಒಂದು ಕತೆಯೂ ಇದೆ. ಹೀಗೊಂದು ತಳಪಾಯದಲ್ಲಿ ಅವನಿಗೆ ಒಂದು ತಾಮ್ರ ಶಾಸನ ಸಿಕ್ಕಿತಂತೆ. ಆ ದೇವಸ್ಥಾನವನ್ನು ಮತ್ತು ಕಾಶ್ಮೀರದ ಎಲ್ಲಾ ದೇವಸ್ಥಾನಗಳನ್ನು ಸಿಕಂದರ್ ಎಂಬ ಹೆಸರಿನ ವ್ಯಕ್ತಿ ಒಡೆದುಹಾಕುತ್ತಾನೆ ಎಂಬ ಭವಿಷ್ಯವಾಣಿಯೂ ಅದರಲ್ಲಿ ಇತ್ತಂತೆ. ಆಗ ಅವನು, "ಆಹಾ! ಈ ದೇವಸ್ಥಾನವನ್ನು ಮೊದಲು ಒಡೆದಿದ್ದರೆ ಈ ಭವಿಷ್ಯವಾಣಿಯನ್ನು ಮೊದಲೇ ಓದಿಬಿಡುತ್ತಿದ್ದೆ; ಈ ಮಾತನ್ನು ಸುಳ್ಳು ಮಾಡುವುದಕ್ಕಾಗಿಯಾದರೂ ಉಳಿದ ದೇವಸ್ಥಾನಗಳನ್ನು ಹಾಗೇ ಉಳಿಸಿಬಿಡುತ್ತಿದ್ದೆ" ಎಂದನಂತೆ.

ಅದೇನೇ ಇರಲಿ, ಈ ದೇವಸ್ಥಾನ ಆ ದಿನಗಳಲ್ಲಿ ಬಹಳ ವೈಭವದಿಂದ ಮೆರೆದಿತ್ತು ಎಂದು ಸುಲಭವಾಗಿ ಹೇಳಬಹುದು. ಹಲವಾರು ಶತಮಾನಗಳ ಕಾಲ ಪೂಜೆ ಮಾಡಿಸಿಕೊಂಡ ಶಿವಲಿಂಗ ಇಂದು ಅನಾಥವಾಗಿ ಒಂದು ಮೂಲೆಯಲ್ಲಿ ಬಿದ್ದಿದೆ. ಒಂದೊಂದು ಚೌಕದಲ್ಲೂ ಇದ್ದ ಮೂರ್ತಿಗಳು ಭಿನ್ನವಾಗಿ ನೆಲಕ್ಕುರುಳಿವೆ. ಆದರೂ ಅದೃಷ್ಟವಶಾತ್ ಕೆಲವೊಂದು ವಿಗ್ರಹಗಳು ಸುಸ್ಥಿತಿಯಲ್ಲಿವೆ. ಗಂಗಾ, ಯಮುನಾ, ಸರಸ್ವತಿ ಎಂದು ಸೂಚಿಸುವ ವಿಗ್ರಹಗಳು ಭಿನ್ನವಾಗಿಲ್ಲ. ಸೂರ್ಯನ ವಿಗ್ರಹವೂ ಸುಸ್ಥಿತಿಯಲ್ಲಿದೆ. ದೇವಾಲಯದ ಹಿಂಭಾಗದಲ್ಲಿರುವ ಗೋಡೆಯ ಮೇಲೆ ಶಾಸನವೊಂದನ್ನು ಕೆತ್ತಲಾಗಿದೆ. ಅದು ಶಾರದಾ ಲಿಪಿ ಎನ್ನುತ್ತರಾದರೂ ಅದನ್ನು ಓದಿ ಅರ್ಥೈಸುವ ಕೆಲಸ ನಡೆದಿಲ್ಲ.

ಕಲ್ಹಣನ ರಾಜ ತರಂಗಿಣಿಯಲ್ಲಿ ಈ ದೇವಾಲಯವನ್ನು ಕಟ್ಟಿಸಿದವನು ಲಲಿತಾದಿತ್ಯ (ಕ್ರಿ. ಶ. ೭೦೧–೭೫೭) ಎಂದಿದೆಯಾದರೂ, ಅದಕ್ಕೂ ಮೊದಲೇ ಕ್ರಿ. ಶ. ೨೨೩ರಲ್ಲಿಯೇ ರಣಾದಿತ್ಯನ ಕಾಲದಲ್ಲಿಯೇ ಇದು ಅಸ್ತಿತ್ವದಲ್ಲಿ ಇದ್ದಿರಬೇಕು ಎಂಬುದು ಕೆಲವು ವಿದ್ವಾಂಸರ ಅಭಿಪ್ರಾಯ. ಅವಂತೀಪುರದ ದೇವಾಲಯ ಕಟ್ಟಿದ ೧೦೦ ವರ್ಷದೊಳಗೇ ಇದನ್ನು ಕಟ್ಟಿರಬೇಕು ಎಂಬುದು ಫರ್ಗ್ಯುಸನ್ ಅವರ ಅಭಿಪ್ರಾಯ. ಅದನ್ನು ಕ್ರಿ. ಪೂ. ೩೫ರಲ್ಲಿ ಕಟ್ಟಿರಬಹುದು ಎನ್ನುತ್ತಾರೆ.

ಗರ್ಭಗೃಹದ ಇಕ್ಕೆಲಗಳಲ್ಲೂ ಸಣ್ಣ ಗರ್ಭಗೃಹಗಳು ಇರುವುದರಿಂದ ಇಲ್ಲಿ ತ್ರಿಮೂರ್ತಿಗಳನ್ನು ಸ್ಥಾಪಿಸಿದ್ದಿರಬಹುದು ಎಂಬುದೊಂದು ಅಭಿಪ್ರಾಯವೂ ಇದೆ. ಪ್ರವೇಶದ್ವಾರದ ಭವ್ಯವಾದ ಕಮಾನನ್ನು ಗ್ರೀಕ್ ಶೈಲಿಯಲ್ಲಿ ನಿಲ್ಲಿಸಲಾಗಿರುವುದರಿಂದ ಅದನ್ನು ತಡವಾಗಿ ಸೇರಿಸಿರುವ ಸಾಧ್ಯತೆ ಇದೆ ಎಂಬುದು ಇತಿಹಾಸಕಾರರ ಅಭಿಪ್ರಾಯ. ಪೂರ್ವದಲ್ಲಿರುವ ಬೆಟ್ಟಗಳಿಂದ ನೀರು ಹರಿದುಬರಲು ಮಾಡಿದ್ದ ಕಾಲುವೆಗಳಿವೆ. ಅವು ಪ್ರಾಕಾರದಲ್ಲಿ ಹರಿದುಹೋಗಲು ಪಾತಿಗಳನ್ನು ಮಾಡಿರುವುದೂ ಕಾಣುತ್ತದೆ. ಯಾಗಕುಂಡಗಳೂ ಇವೆ. ಆದ್ದರಿಂದ ಈ ಪ್ರದೇಶ ಜಲಾವೃತವಾಗಿತ್ತೇ ಎಂದು ಅನುಮಾನಿಸಬಹುದು. ಪ್ರವೇಶದ್ವಾರಕ್ಕೆ ಎತ್ತರದ ಬುನಾದಿ ಇರುವುದರಿಂದ ಸುತ್ತಲೂ ನೀರಿನಿಂದ ಆವೃತವಾಗಿದ್ದಿತು (ಅಮೃತಸರದ ಸ್ವರ್ಣಮಂದಿರದ ಹಾಗೆ) ಎನ್ನಬಹುದು.

ಅವಂತಿವರ್ಮ ಕ್ರಿ. ಶ. ೮೫೫–೮೮೩ರವರೆಗೆ ಆಳಿದವನು. ಈತ ಅತ್ಯಂತ ದಕ್ಷ ರಾಜ ಎಂದು ಜನಪ್ರಿಯನಾಗಿದ್ದ ಎಂದು ರಾಜತರಂಗಿಣಿ ಹೇಳುತ್ತದೆ. ಅವಂತಿಪುರದ ಸುತ್ತಮುತ್ತ ಈತ ಕಟ್ಟಿಸಿದ ಹಲವಾರು ದೇವಾಲಯಗಳ ಭಗ್ನಾವಶೇಷಗಳಿವೆ. ಒಂದು ವಿಷ್ಣುವಿನದ್ದು ಇನ್ನೊಂದು ಶಿವನದ್ದು. ಎರಡೂ ದೇವಾಲಯಗಳನ್ನು ಸಿಕಂದರ್ ಹಾಳುಮಾಡಿದ. ಅವನು ಬಹುಶಃ ಡೈನಮೈಟ್‌ನಂತಹ ಸ್ಫೋಟಕಗಳನ್ನು ಬಳಸಿರಬೇಕು ಎಂದು ಕನಿಂಗ್ ಹ್ಯಾಂ ಅಭಿಪ್ರಾಯಪಡುತ್ತಾರೆ. ಅವನಿಗೆ ಉಡುಗೊರೆಯಾಗಿ ಬಂದ ವಸ್ತುಗಳಲ್ಲಿ ಇದೂ ಸೇರಿತ್ತಂತೆ. ಅದೇನೇ ಇರಲಿ, ಇಂದು ಅದು ಹಾಳು ಸುರಿಯುತ್ತಿದೆ. ಮತಾಂಧತನದ ಪರಮಾವಧಿಗೆ ಸಾಕ್ಷಿಯಾಗಿದೆ.

ಈ ದೇವಾಲಯದ ನಕ್ಷೆಯ ಸಹಾಯದಿಂದ ಉತ್ತರಾಯಣ, ದಕ್ಷಿಣಾಯನಗಳನ್ನು ಗುರುತಿಸುವುದು ಸಾಧ್ಯವಾಗುತ್ತಿತ್ತು ಎಂಬ ಅಂಶವೇ ನನಗೆ ಆಕರ್ಷಣೆಯನ್ನು ಉಂಟುಮಾಡಿತ್ತು. ಆದರೆ, ಅಲ್ಲಿ ಈ ವಿನ್ಯಾಸವನ್ನು ಪರಿಶೀಲಿಸಲು ಈಗ ಏನೂ ಅವಕಾಶವಿಲ್ಲ. ಏಕೆಂದರೆ, ಪಶ್ಚಿಮ ದಿಕ್ಕಿನಲ್ಲಿ ಎತ್ತರವಾದ ಮರಗಳು ಬೆಳೆದು ನಿಂತಿವೆ. ಸೂರ್ಯಾಸ್ತ ವೀಕ್ಷಣೆ ಸಾಧ್ಯವಿಲ್ಲ. ಇದು ಈಚಿನ ಬೆಳವಣಿಗೆ. ೧೯೩೫ರ ವರದಿಗಳಲ್ಲಿ ಮತ್ತು ಆ ಹಿಂದಿನ ವರದಿಗಳಲ್ಲಿಯ ಪ್ರಕಾರ ದೇವಾಲಯದಿಂದ ಪಶ್ಚಿಮ ದಿಗಂತ ಕಾಣುವಂತಿತ್ತು. ಅಲ್ಲಿಂದ ಕಾಣುವ ಕಣಿವೆಯ ದೃಶ್ಯದ ವರ್ಣನೆಗಳೂ ಇವೆ. ಈಗ ಹೊಸದಾಗಿ ರಸ್ತೆ ನಿರ್ಮಿಸಿ, ಮಾಪೆಲ್ ಮರಗಳನ್ನು ಬೆಳೆಯಿಸಿದ್ದಾರೆ. ಹೊರಾವರಣದಲ್ಲಿ ಆಕರ್ಷಕ ತೋಟವನ್ನೂ ಮಾಡಿದ್ದಾರೆ. (ಆ ತೋಟದಿಂದ ಒಂದು ಗುಲಾಬಿ ಕಿತ್ತು ಕೈಗಿಟ್ಟು ಹಣ ಕೀಳುವ ಮಾಲಿಯನ್ನೂ ಸಾಕಿಕೊಂಡಿದ್ದಾರೆ).



***ಶಾರದಾ ಲಿಪಿಯಲ್ಲಿರುವ ಶಾಸನ – ಇದನ್ನು ಓದುವುದು ಸಾಧ್ಯವಾಗಿಲ್ಲ***



***ಬುರ್ಝ್ಹೋಮ್‌ನಲ್ಲಿ ಸೂರ್ಯನ ಚಿತ್ರದ ಬಂಡೆ***

ಇನ್ನೂ ಹಿಂದುವರೆದು ಶಿಲಾಯುಗಕ್ಕೆ ದಾರಿತೋರಿಸುವ ಸ್ಥಾನವೊಂದು ಶ್ರೀನಗರದ ಅಂಚಿನಲ್ಲಿಯೇ ಇದೆ. ಅದೇ ಬುರ್ಝ್ಹೋಮ್. ಒಂದು ಬೆಳಗ್ಗೆ ಬೇಗನೆ ಹೊರಟು ಈ ಸ್ಥಳವನ್ನು ಮುಟ್ಟಿದೆವು. ಸರಿಯಾದ ಫಲಕಗಳಿಲ್ಲದೆ ಅತ್ತಿತ್ತ ಹುಡುಕಾಡಬೇಕಾಯಿತು. ಇದು ವಾಸ್ತವದಲ್ಲಿ ಬಿರ್ಚ್ ಎಂಬ ಮರದ ಹೆಸರಿನಿಂದ ಬಂದದ್ದು. ೧೯೩೬ರಲ್ಲಿ ಇಲ್ಲಿ ಪುರಾತತ್ವ ಇಲಾಖೆ ನಡೆಸಿದ ಉತ್ಖನನದಲ್ಲಿ ಹರಪ್ಪ ಸಂಸ್ಕೃತಿಯ ಚಿಹ್ನೆಗಳು ಕಂಡುಬಂದವು. ಇದರಲ್ಲಿ ಮುಖ್ಯವಾದದ್ದು ಮಡಕೆಯ ಚೂರುಗಳು, ಕಲ್ಲಿನ ಆಯುಧಗಳು – ಇತ್ಯಾದಿ. ಆ ಆಧಾರದ ಮೇಲೆ ಮೂರು ಹಂತಗಳ ನಾಗರಿಕತೆಯನ್ನು ಗುರುತಿಸಿದ್ದಾರೆ. ಆ ನಂತರದಲ್ಲಿ ನಡೆಸಿದ ಉತ್ಖನನದಲ್ಲಿ ತಲೆಬುರುಡೆಗಳೂ ಸಿಕ್ಕವು. ಹೀಗೆ ದೊರಕಿದ ಒಂದು ಕಲ್ಲುಬಂಡೆಯ ಮೇಲಿನ ಚಿತ್ರದಲ್ಲಿ ಸೂರ್ಯನಂತಹ ಎರಡು ಆಕೃತಿಗಳು ಮತ್ತು ಕೆಳಗೆ ಜಿಂಕೆಯನ್ನು ಬೇಟೆಯಾಡುತ್ತಿರುವ ದೃಶ್ಯ ಎಲ್ಲರ ಗಮನ ಸೆಳೆದಿತ್ತು. ಮಧ್ಯಪ್ರದೇಶದ ಭಿಂಭೇಟ್ಕ ಮುಂತಾದ ಕಡೆ ಗುಹೆಗಳಲ್ಲಿ ಇರುವಂತಹ ಚಿತ್ರವೇ ಇದು. ಖಗೋಳ ವಿಜ್ಞಾನಿಗಳಿಗೆ ಅಲ್ಲಿ ಮಹಾವ್ಯಾಧ, ವೃಷಭರಾಶಿಗಳು ಕಂಡವು. ಹಾಗಿದ್ದಲ್ಲಿ ಎರಡು ಸೂರ್ಯಗಳು ಏನನ್ನು ಸೂಚಿಸುತ್ತಿರಬಹುದು? ಈ ಬಗ್ಗೆ ಅನೇಕ ಸಿದ್ಧಾಂತಗಳಿವೆ. ಅದು ಮಿಥುನ ರಾಶಿಯ ಪುನರ್ವಸು ನಕ್ಷತ್ರಗಳು – ಅಲ್ಲಿ ನೆತ್ತಿ ಮೇಲೆ ಬರುವುವು ಎಂದು ಒಂದು ವಾದ. ಸುಮಾರು ೪೦೦೦ ವರ್ಷಗಳ ಹಿಂದೆ ಸೂಪರ್‌ನೋವಾ ಉಂಟಾಗಿರಬಹುದು ಎಂದೂ ಒಂದು ಊಹೆಯಿದೆ.

ಇಲ್ಲಿ ದೊರಕಿದ ತಲೆಬುರುಡೆಯ ಮೇಲೆ ಆರು ತೂತುಗಳು ಕಂಡುಬಂದಿರುವುದು ಇನ್ನೊಂದು ಆಶ್ಚರ್ಯ. ಕೆಲವು ತೂತುಗಳು ದೊಡ್ಡವು. ಕೆಲವು ಸಣ್ಣವು. ಈ (ತಲೆಬುರುಡೆಯ ಮಾಲೀಕಳಾಗಿದ್ದ) ಹೆಂಗಸಿನ ತಲೆಗೆ ಶಸ್ತ್ರಚಿಕಿತ್ಸೆ ಮಾಡಲಾಗಿದೆ – ಇಂತಹ ಶಸ್ತ್ರಚಿಕಿತ್ಸೆಯು ಅತಿ ಪ್ರಾಚೀನ ಪುರಾವೆ ಇದು ಎಂದು ಕೆಲವರು ಹೇಳಿದರೆ, ಇನ್ನು ಕೆಲವರು ಯಾವುದೋ ಮಾಟಮಂತ್ರದಂತಹ ಆಚರಣೆಗೆ ಈ ತಲೆಬುರುಡೆಯನ್ನು ಬಳಸಲು ಮಾಡಿರುವ ತೂತುಗಳು ಎಂದು ವಾದಿಸುತ್ತಾರೆ. ಇಷ್ಟೊಂದು ತೂತುಗಳನ್ನು ಮಾಡುವಾಗ ಹೆಂಗಸು ಬದುಕಿದ್ದಿರಬಹುದೇ ? ಎಂಬುದೊಂದು ಪ್ರಶ್ನೆಯೂ ಏಳುತ್ತದೆ. ಒಟ್ಟಿನಲ್ಲಿ ಇದು ಅನೇಕ ಪ್ರಶ್ನೆಗಳನ್ನು ಹುಟ್ಟುಹಾಕಿದೆ.



***ಆರು ತೂತುಗಳು ಕಂಡುಬರುವ ತಲೆಬುರುಡೆ***

ಈಗ ಬುರ್ಝ್ಹೋಮ್‌ನಲ್ಲಿ ಸೂರ್ಯನ ಚಿತ್ರದ ಬಂಡೆಯೂ ಇಲ್ಲ; ತೂತುಗಳ ತಲೆಬುರುಡೆಯೂ ಇಲ್ಲ. ಎಲ್ಲಾ ದೆಹಲಿಗೆ ವರ್ಗಾವಣೆಯಾಗಿಬಿಟ್ಟಿವೆ. ಉತ್ಖನನದ ಗುರುತುಗಳು ಮಾತ್ರ ಉಳಿದಿವೆ. ನೆಲಮಟ್ಟದಿಂದ ಕೆಳಗೆ ಜನ ವಾಸವಿದ್ದ ಗೂಡುಗಳಿವೆ. ಅಲ್ಲಿರುವ ದೊಡ್ಡ ದೊಡ್ಡ ಕಲ್ಲು ಕಂಬಗಳನ್ನು ಎಲ್ಲಿಗೂ ಒಯ್ಯಲಾಗುವುದಿಲ್ಲ. ಆದ್ದರಿಂದ ಅವು ಮಾತ್ರ ಅಲ್ಲೇ ಉಳಿದುಕೊಂಡಿವೆ. ಅವುಗಳಲ್ಲಿ ಕೆಲವು ಬಿದ್ದುಹೋಗಿವೆ. ಆದರೂ ಅವು ಇಂಗ್ಲೆಂಡ್‌ನ ಸ್ಟೋನ್‌ಹೆಂಜ್‌ನಂತೆ (ಅಷ್ಟು ದೊಡ್ಡದಲ್ಲದಿದ್ದರೂ) ಆಕರ್ಷಣೀಯವಾಗಿವೆ. ಅವುಗಳ ಖಗೋಳ ವೈಜ್ಞಾನಿಕ ಮಹತ್ವವನ್ನು ತಿಳಿಯುವುದು ಈಗ ಸಾಧ್ಯವಿಲ್ಲದಂತಾಗಿದೆ.

ಶ್ರೀನಗರದಾಚೆ ಎತ್ತ ತಿರುಗಿ ನೋಡಿದರೂ ಬೆಟ್ಟಗಳು. ಅವುಗಳ ಹಿಂದೆ ಹಿಮಾಚ್ಛಾದಿತ ಶಿಖರಗಳು. ಝೀಲಂ ನದಿ ಹರಿದುಹೋಗುವ ಜಾಡಿನಲ್ಲಿ ಬೆಳೆದಿವೆ ಈ ನಾಡು, ಈ ನಾಗರಿಕತೆ. ಆದ್ದರಿಂದ ಭೌಗೋಳಿಕವಾಗಿ ಇದು ಸುತ್ತಲಿನ ಎಲ್ಲ ದೇಶಗಳಿಂದ ಪ್ರತ್ಯೇಕವಾಗಿ ಬೆಳೆದುಬಂದಿದೆ. ಭಾರತ ವಿಭಜನೆಗೆ ಮುಂಚೆ ಜಮ್ಮುವಿನಿಂದ ಶ್ರೀನಗರಕ್ಕೆ ಲಾಹೋರ್ ಮಾರ್ಗವಾಗಿ ರಸ್ತೆಯ ಬಳಕೆಯಾಗುತ್ತಿತ್ತು. ಆದ್ದರಿಂದ ಭಾರತದ ಮೊದಲ ರಾಷ್ಟ್ರೀಯ ಹೆದ್ದಾರಿಯಾಗಿ ಜಮ್ಮು–ಶ್ರೀನಗರ ಹೆದ್ದಾರಿ ರೂಪುಗೊಂಡಿತು. ಸುಮಾರು ೩೮ ಕಿ. ಮೀ. ಉದ್ದದ ಸುರಂಗ ಜವಾಹರ್ ಟನಲ್ ನಿರ್ಮಾಣವಾಯಿತು. ಶ್ರೀನಗರದಿಂದ ಭಾರತಕ್ಕೆ ನೇರ ಸಂಪರ್ಕ ಏರ್ಪಟ್ಟಿತು.



***ಇಂದು ಬುರ್ಝ್ಹೋಮ್‌ನಲ್ಲಿ ಕಾಣಸಿಗುವ ಶಿಲಾಸ್ತಂಭಗಳ ನೋಟ***

ನಾವು ಅನಂತನಾಗ್‌ಗೆ ಪಯಣಿಸಿದ ರಸ್ತೆಯ ಪಕ್ಕದಲ್ಲಿ ರೈಲ್ವೇ ಸ್ಟೇಷನ್‌ಗಳೂ ಇದ್ದವು. ಆದರೆ, ಇವು ಕಣಿವೆಯೊಳಗೆ ಮಾತ್ರ ಓಡಾಡುವ ರೈಲುಗಳು. ಅನಂತನಾಗ್, ಬಾರಾಮೂಲಾ, ಊರಿ, ಶ್ರೀನಗರ – ಈ ನಗರಗಳ ನಡುವೆ ಮಾತ್ರ ಓಡಾಡುತ್ತವೆ – ಬಹಳ ಅನುಕೂಲವಾಗಿದೆ ಎಂದು ನನ್ನ ಜೊತೆಗಿದ್ದ ಸೀಮಿನ್ ಹೇಳಿದರು.

ಪ್ರವಾಸೋದ್ಯಮವೇ ಕಾಶ್ಮೀರದ ಜೀವಾಳ. ಅಲ್ಲಿ ಸಿಗುವ ಹಣ್ಣುಗಳು ಬೇರೆಡೆ ಸಿಗುವುದಿಲ್ಲ. ಅಲ್ಲಿ ದೊರಕುತ್ತಿದ್ದ ಏಪ್ರಿಕಾಟ್‌ಗಳಲ್ಲಿ ಎರಡು ಬಗೆಗಳಿದ್ದವು – ಒಂದು ಗಿಲ್ಗಿಟ್‌ನಿಂದ ಬಂದದ್ದು; ಇನ್ನೊಂದು ಕಾರ್ಗಿಲ್‌ನಿಂದ ಬಂದದ್ದು. ಈ ಹೆಸರುಗಳನ್ನು ಯುದ್ಧದ ಸಂದರ್ಭದಲ್ಲಿ ಮಾತ್ರ ಕೇಳಿದ್ದ ನನಗೆ ಅವುಗಳನ್ನು ರುಚಿಕರ ಹಣ್ಣುಗಳಿಗೆ ಹೆಣೆಯುವುದು ಕಷ್ಟ ಎನ್ನಿಸಿತು. ಅಲ್ಲಿ ಬೆಳೆಯುವ ಒಂದು ವಿಶಿಷ್ಟ ಜಾತಿಯ ಸೊಪ್ಪು ದಿನವೂ ಊಟದ ಭಾಗವಾಗಿರುತ್ತಿತ್ತು. ವಿಚಿತ್ರವೆಂದರೆ ಆ ಭಾಗದಲ್ಲಿ ವಿಶಿಷ್ಟವಾದ ಯಾವುದೇ ಸಿಹಿ ಭಕ್ಷ್ಯವೂ ಇಲ್ಲವಂತೆ. ದಿನವೂ ಊಟದ ಕೊನೆಗೆ ಕೇವಲ ಐಸ್ ಕ್ರೀಂ ಕೊಡುತ್ತಿದ್ದುದು ಕೆಲವರಿಗೆ ನಿರಾಶೆ ಉಂಟುಮಾಡಿತ್ತು. ಅಲ್ಲದೆ (ಮನೆಗಳಲ್ಲಿಯೂ) ಬೆಳಗಿನ ಉಪಾಹಾರಕ್ಕೆಂದು ವಿಶೇಷವಾಗಿ ಮಾಡುವ

ಖಾದ್ಯಗಳೂ ಇಲ್ಲ ಎಂಬುದು ಇನ್ನೊಂದು ನಿರಾಶೆಯಾಗಿತ್ತು. ಹೋಟೆಲ್ ಮತ್ತು ಅತಿಥಿ ಗೃಹಗಳಲ್ಲಿ ಕೊಡುತ್ತಿದ್ದ ಬ್ರೆಡ್ ಜಮ್ಮುವಿನಿಂದ ಬರುತ್ತದಂತೆ. ಇಲ್ಲಿಯ ಮಕ್ಕಳು ಶಾಲೆಗೆ ಹೋಗುವ ಮೊದಲು ಬನ್‌ನಂತಹ ರೊಟ್ಟಿ ತಿನ್ನುತ್ತಾರೆ. ಅದನ್ನು ಮನೆಗಳಲ್ಲಿ ಮಾಡುವುದಿಲ್ಲ; ಇದಕ್ಕಾಗಿ ಬೆಳಿಗ್ಗೆ ಮಾತ್ರ ತೆರೆದಿರುವ ಕೆಲವು ಬೇಕರಿಗಳಲ್ಲಿ ಅದು ಸಿಗುತ್ತದೆ.

ಶ್ರೀನಗರದ ರಸ್ತೆಗಳಲ್ಲಿ ಪಾದಚಾರಿಗಳಿಗೆಂದು ಮಾಡಿರುವ ಜಾಗ ಒಂದೂವರೆ ಅಡಿಯಷ್ಟು ಎತ್ತರದಲ್ಲಿದೆ. ಅಲ್ಲಿಂದ ರಸ್ತೆಗೆ ಇಳಿಯುವುದು ಸ್ವಲ್ಪ ಸಾಹಸದ ಕೆಲಸವೇ. ಏಕೆಂದರೆ, ರಸ್ತೆಯ ಅಂಚಿನಲ್ಲಿ ಮಳೆನೀರು ಹರಿದುಹೋಗಲು ಅರ್ಧ ಅಡಿಯಷ್ಟು ತಗ್ಗು ಬೇರೆ ಇದೆ. ಹೀಗೆ ಒಟ್ಟು ಎರಡು ಅಡಿ ಹಾರಬೇಕು. ಇದು ವಯಸ್ಸಾದವರಿಗೆ ಬಹಳ ಕಷ್ಟವೇ ಸರಿ. ಆದರೆ, ರಸ್ತೆಯುದ್ದಕ್ಕೂ ಹತ್ತಿಪ್ಪತ್ತು ಅಡಿಗೆ ಒಬ್ಬೊಬ್ಬರಂತೆ ಬಂದೂಕುಧಾರಿ ಸಿಪಾಯಿಗಳು ನಿಂತಿರುತ್ತಾರೆ. ಅವರು ಕೈ ಹಿಡಿದು ಇಳಿಸಿ, ಹತ್ತಿಸುವುದನ್ನು ಮಾಡುತ್ತಾರೆ. ಹೀಗೆ ಹೆಜ್ಜೆ ಹೆಜ್ಜೆಗೂ ಬಂದೂಕು ದರ್ಶನವಾಗುವುದು ಏನೋ ಒಂದು ಬಗೆಯ ಕಸಿವಿಸಿ ಉಂಟುಮಾಡುತ್ತದೆ. ಬೆಂಗಳೂರಲ್ಲಿ ಯಾರಾದರೂ 'ದೊಡ್ಡ' ಮನುಷ್ಯರು ಬರುವವರಿದ್ದಾಗ ಮಾತ್ರ ವಿಮಾನ ನಿಲ್ದಾಣದ ರಸ್ತೆಯಲ್ಲಿ ಹೀಗೆ ಪೊಲೀಸರು ಕಾಣಿಸಿಕೊಳ್ಳುತ್ತಾರೆ, ಅಷ್ಟೆ. ಆದ್ದರಿಂದಲೋ ಏನೋ ಅಲ್ಲಿ ಓಡಾಡುತ್ತಿದ್ದ (ಕನ್ನಡದ) ಮಕ್ಕಳು – "ಅಪ್ಪಾ, ಇಲ್ಯಾಕೆ ಇಷ್ಟೊಂದು ಪೊಲೀಸು ?" ಎಂದು ಕೇಳುತ್ತಿದ್ದುದು ಕಿವಿಗೆ ಬಿತ್ತು.

ಅಲ್ಲಿಯ ಮಕ್ಕಳು ನನಗೆ ಶಾಲೆಯ ಹೊರಗೆ ಎಲ್ಲೂ ಕಾಣಲೇ ಇಲ್ಲ. ಒಂದೇ ಒಂದು ದಿನ ಬೆಳಗ್ಗೆ ೬ ಗಂಟೆಗೆ ವಿಶ್ವವಿದ್ಯಾಲಯದ ಮುಂದೆ ನೂರಿನ್ನೂರು ಶಾಲಾ ಬಾಲಕ/ಬಾಲಕಿಯರು ಕಂಡರು. ಮ್ಯಾರಥಾನ್ ಅಂತೆ, ಓಡಲು ಬಂದಿದ್ದರು – ಓಡಿಹೋದರು. ಆಮೇಲೆ ಎಲ್ಲೂ ಮಕ್ಕಳೇ ಕಾಣಲಿಲ್ಲ. ದರ್ಗಾದ ಬಳಿ ಸಂಜೆ ಶುಕ್ರವಾರ ಸಂತೆ ನಡೆಯುತ್ತಿತ್ತು. ಅಲ್ಲಿಯೂ ಅಷ್ಟೇ. ಮಕ್ಕಳೇ ಇಲ್ಲ. ಯುವಕ ಯುವತಿಯರೂ ಕಾಣಲಿಲ್ಲ. ಎಲ್ಲ ಮಧ್ಯವಯಸ್ಸು ದಾಟಿದವರೇ. ಆದ್ದರಿಂದಲೇ ಅಲ್ಲಿ ಏನೋ ಕೊರತೆ ಇದೆ ಎನ್ನಿಸುತ್ತಿತ್ತು. ವಿಶ್ವವಿದ್ಯಾಲಯದೊಳಗೆ ಕಾಣಸಿಗುತ್ತಿದ್ದ ಯುವಕರೆಲ್ಲಾ ಎಲ್ಲಿ ಮಾಯವಾಗಿದ್ದರೋ ಏನೋ ಅನ್ನಿಸಿತು.

ಅಲ್ಲಿಯ ಶಾಲೆಗಳಲ್ಲಿ ಯುವಕರು ಮತ್ತು ಮಕ್ಕಳೊಡನೆ ಮಾತನಾಡುವಾಗ ಕೆಲವೊಂದು ಛಳಕು ಹೊಡೆಸುವ ಹೇಳಿಕೆಗಳು ಕೇಳಿದವು. ಒಂದು ಉದಾಹರಣೆ:

"ನೀವು ಹಿಂದಿಯಲ್ಲೇಕೆ ಉತ್ತರಿಸಲೊಲ್ಲಿರಿ"

"ಭೌತವಿಜ್ಞಾನದ ಪ್ರಶ್ನೆಗಳಿಗೆ ಉತ್ತರ ಕೊಡುವಷ್ಟು ಹಿಂದಿ ಜ್ಞಾನ ನನಗಿಲ್ಲ."

"ಅದೇಕೆ ? ಹಿಂದಿ ನಿಮ್ಮ ರಾಷ್ಟ್ರಭಾಷೆಯಲ್ಲವೇ ?"

"ಹೌದು ಆದರೆ ನನ್ನ ಮಾತೃಭಾಷೆ ಬೇರೆ. ಹಿಂದಿಯ ನನ್ನ ಜ್ಞಾನ ವ್ಯವಹಾರಕ್ಕೆ ಮಾತ್ರ ಸೀಮಿತವಾಗಿದೆ."

ಆದರೆ, ಆ ಹುಡುಗಿ ಬಳಸಿದ "ನಿಮ್ಮ ದೇಶಭಾಷೆಯಲ್ಲವೇ ?" ಎಂದದ್ದು ನನಗೆ ವಿಚಿತ್ರವೆನಿಸಿತು. ಇದೇ ಪ್ರಶ್ನೆಯನ್ನು ಭಾರತದ ಯಾವುದೇ ಬೇರೆ ಊರಿನಲ್ಲಿ ಕೇಳಿದ್ದರೆ "ಹಿಂದಿ ರಾಷ್ಟ್ರಭಾಷೆ" ಎನ್ನುತ್ತಿದ್ದರು; ಅಥವಾ "ನಮ್ಮ ದೇಶಭಾಷೆ" ಎನ್ನುತ್ತಿದ್ದರು. "ನಿಮ್ಮ" ಎಂಬ ಗುಣವಾಚಕ ಆ ಸಣ್ಣ ಹುಡುಗಿಯ ಬಾಯಲ್ಲಿ ಬಂದದ್ದೇಕೆ ?

ಇಂತಹ ವಿಚಿತ್ರ ಸಂಶಯ ಬಂದದ್ದು ಇನ್ನೊಂದು ಬಾರಿ, ವಿದ್ಯಾರ್ಥಿಯೊಬ್ಬನನ್ನು ಮಾತನಾಡಿಸಿದಾಗ –

"ಭೌತಶಾಸ್ತ್ರದಲ್ಲಿ ಎಂಎಸ್. ಸಿ. ಓದುತ್ತಿದ್ದೇನೆ."

"ಮುಂದೆ ಏನು ಮಾಡಬೇಕೆಂದಿದ್ದೀರಿ ?"

"ಇಂಡಿಯಾದಲ್ಲಿ ಪಿಎಚ್. ಡಿ. ಮಾಡಬೇಕೆಂದಿದ್ದೇನೆ"

ವಿಶ್ವವಿದ್ಯಾಲಯದ ಆವರಣದಲ್ಲಿದ್ದ ಕೈಮರದ ಸೂಚಕ canteen ಎಂಬುದನ್ನು ಕಂಡಾಗ ಸಹ ಇದೇನೋ ವಿಚಿತ್ರವಾಗಿದೆ ಎನ್ನಿಸಿತು.

ಶ್ರೀನಗರದ ಸೌಂದರ್ಯ ವರ್ಣನಾತೀತ. ಮೇಲೆ ನೋಡಿದರೆ ಹಿಮಾವೃತ ಶಿಖರಗಳ ಸೊಬಗು, ಆದರೆ ಅಂಗಾಲ ಕೆಳಗೆ ಕೊಳಕು. ಹಿಮ ಶಿಖರಗಳು ಒಂದು ಬಗೆಯ ಹರ್ಷವನ್ನು ಎದೆಗೆ ತುಂಬುತ್ತಿದ್ದರೆ, ಇನ್ನೊಂದು ಬದಿಯಲ್ಲಿ ಏನೋ ಖಾಲಿಯಾದ ಭಾವನೆಯೂ ಉಂಟಾಗುತ್ತಿತ್ತು. ಅದೇನು ? ಶಬ್ದಗಳಲ್ಲಿ ಹೇಳಲಾರೆ. ಮುರಿದುಬಿದ್ದ ದೇವಾಲಯಗಳನ್ನು ಕಂಡಾಗ ಉಂಟಾದ ಅವ್ಯಕ್ತ ವೇದನೆಯೇ ? ಶಾಂತಿ ಎಂಬುದು ಮೃಗಜಲವಾಗಿರುವ ನಗರಗಳೋ ? – ಹೆಜ್ಜೆ ಹೆಜ್ಜೆಗೆ ಬಂದೂಕಿನ ದರ್ಶನವೋ ? ಏನೋ ಗೊತ್ತಿಲ್ಲ.

**ಡಾ|| ಬಿ. ಎಸ್. ಶೈಲಜಾ**
ಜವಾಹರ್‌ಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು – ೫೬೦ ೦೦೧

ಕಾವ್ಯಲೋಕ

# ಅಡುಗೆ ಮನೆಯ ಹುಡುಗಿ



ಕಣ್ಣಲ್ಲಿ ಕಂಬನಿ ಭೋರ್ಗರೆತ
ಜಿಟಿ ಜಿಟಿ ಸುರಿವ ಮಳೆ
ಇಳೆಗೆ ಬಿದ್ದ ಆರ್ಭಟಕ್ಕೆ
ಅದು ಬಂದಿರುವುದು ಗೊತ್ತಾಗಲಿಲ್ಲ
ಹೇಗೋ ಮರೆಮಾಚಿದ್ದೆ

ಕಣ್ಣಂಚಿನಲ್ಲಿ ಹರಿದ ನೀರು
ಮಳೆಯ ಜೊತೆಗೆ ಇಳೆ ಸೇರಿತ್ತು
ಎದುರು ಬಂದ ಅವನಿಗೆ ತಿಳಿಯಲಿಲ್ಲ
ಎಷ್ಟೊ ಮನಸುಗಳು ದಿನವೂ
ಹೀಗೆ ಅಳುತ್ತಿವೆ
ಯಾರ ಅರಿವಿಗೂ ಬಾರದೆ...

ಕೊರಳಿಗೆ ತಾಳಿ ಬಿದ್ದ ಕ್ಷಣವೇ
ಸಹನೆ ಮೈಗೂಡಿಸಿಕೊಂಡಿದ್ದಾಳೆ
ಎಣ್ಣೆಯಂತೆ ಮೆಲುವಾಗಿ ಬದುಕುತ್ತಾಳೆ
ಮನ ಕುದಿಯುತ್ತಿದ್ದಿರೂ ನೋಡಲು ಸೌಮ್ಯ
ನೀರು ಬಿದ್ದು ಕೆಣಕಿದಾಗಲೇ ಭಾವನೆ ಭುಗಿಲೇಳುತ್ತವೆ

ನೆಪ ಮಾತ್ರಕ್ಕೆ ನಿನ್ನ ಜೊತೆ
ಹೆಜ್ಜೆ ಮೇಲೆ ಹೆಜ್ಜೆ ಇಟ್ಟಿದ್ದೆ
ನನ್ನಂಥ ಅದೆಷ್ಟೋ ಕರುಳುಗಳು
ನಿತ್ಯ ರೋದಿಸುತ್ತಿವೆ
ಜೊತೆಗಿರುವ ಆಣೆ, ಪ್ರಮಾಣಗಳಿಗೂ ಕಾಣದ ಹಾಗೆ

ಆಗಾಗ ಕುಕ್ಕರ್ ಶಬ್ದದಂತೆ
ಹೆಣ್ದನಿಗಳು ವಟಗುಟ್ಟುತ್ತವೆ
ತನ್ನೆಲ್ಲಾ ನೋವುಗಳನ್ನ ಅಡುಗೆ ಮನೆಯ
ಸಾಸಿವೆ ಡಬ್ಬಿಗಳಲ್ಲಿ ಬಿಗಿದಿಟ್ಟು
ಆಗಾಗ ಮಾತ್ರ ಸಿಟ್ಟು ಸಿಡಿಯುತ್ತದೆ ಒಗ್ಗರಣೆಯಂತೆ

ಅಡುಗೆ ಮನೆ ಸೇರಿದ ಹುಡುಗಿ
ಹೆಂಗಸಾಗಿ ಮಮತೆ ಬಡಿಸಿ ಬದುಕುತ್ತಾಳೆ
ಆಗಾಗ ಕ್ರೌರ್ಯ, ದೌರ್ಜನ್ಯಗಳನ್ನುಂಡು
ಬಿಸಿಯಾದಾಗ ಮಾತ್ರ ಅವಳು ಬೆಂಕಿ !
ತಣ್ಣಗಾಗುತ್ತಾಳೆ ಒಲೆಯಿಂದ ಹೊರಬಿದ್ದ ಅಡುಗೆಯ ಹಾಗೆ

**ಸೌಮ್ಯ ಕೆ. ಆರ್.**
ನಂ. ೧೩೪೨/೨, ೨ನೇ ಮುಖ್ಯರಸ್ತೆ, ಮುನೇಶ್ವರ ನಗರ
ಕದಿರೇನಹಳ್ಳಿ, ಬೆಂಗಳೂರು–೬೧

❑ ಎಸ್. ಮಾಲತಿ

# ವೃತ್ತಿರಂಗದ ತೆರೆಮರೆಯ ಪ್ರತಿಭಾವಂತ ಮಹಿಳೆಯರು

**ನಾ**ಟಕ ನೋಡಿದಾಗ ಮನಸ್ಸಿನಲ್ಲಿ ಹೆಚ್ಚಾಗಿ ಉಳಿಯುವುದು ನಾಯಕ–ನಾಯಕಿಯರ ಪಾತ್ರಗಳು. ಕೆಲವೊಮ್ಮೆ ಪೋಷಕ ಪಾತ್ರಗಳು. ಆದರೆ ನಾಟಕದ ಯಶಸ್ಸಿಗೆ ತೆರೆಮರೆಯಲ್ಲಿದ್ದುಕೊಂಡೇ ಶ್ರಮಿಸಿದ ಹಲವು ಪ್ರತಿಭಾವಂತರನ್ನು ನಾವು ಸ್ಮರಿಸುವುದೇ ಇಲ್ಲ. ಸ್ಮರಿಸಬೇಕಾದ ಇಂತಹ ಕೆಲವು ಮಹಿಳೆಯರನ್ನು ಪರಿಚಯಿಸುವುದೇ ಈ ಲೇಖನದ ಉದ್ದೇಶ

ಶಿವೂಬಾಯಿ ಹುಕ್ಕೇರಿ, ಸಾವಿತ್ರಿ ಏಣಗಿ, ಭೀಮಾಬಾಯಿ ಗರೂಡ, ರೇಣಮ್ಮ ಚಿತ್ತರಗಿ, ಸಿ. ಎಸ್. ನಿರ್ಮಲಾ ರಂಗದ ಹಿಂದಿನ ತಮ್ಮ ದುಡಿಮೆಗಾಗಿ ಸ್ಮರಣೀಯರು.

ಒಂದು ಕಾಲಕ್ಕೆ ನಟಿಯಾಗಿ, ತಬಲಾ–ಹಾರ್ಮೋನಿಯಂ ವಾದಕಳಾಗಿ ಮೆರೆದ ಶಿವೂಬಾಯಿ ಹುಕ್ಕೇರಿ, ಈಗ ಲಕ್ವಾ ಹೊಡೆದ ೮೦ರ ಮುದುಕಿ. ಶಿವೂಬಾಯಿ ಬಿಜಾಪುರದವಳು. ಇವಳನ್ನು ಹುಕ್ಕೇರಿಗೆ ಮದುವೆ ಮಾಡಿಕೊಟ್ಟರು. ಗಂಡ ದುಂಡಪ್ಪ ಹುಕ್ಕೇರಿಯವರ ಪ್ರೇರಣೆಯಿಂದ ಶಿವೂಬಾಯಿ ಬಣ್ಣದ ಬದುಕಿಗೆ ಕಾಲಿಟ್ಟಳು.

ಹಲಗೇರಿ ಜಟ್ಟೆಪ್ಪನವರ ಕಂಪನಿಯಲ್ಲಿ, ಏಣಗಿ ಬಾಳಪ್ಪನವರ ಕಂಪನಿಯಲ್ಲಿ, ಗೋಕಾಕ ಬಸವಣ್ಣೆಪ್ಪನವರ ಕಂಪನಿಯಲ್ಲಿ ಅಭಿನಯಿಸಿದ ಇವಳು ಏಣಗಿ ಬಾಳಪ್ಪನವರ ಕಲಾವೈಭವ ನಾಟ್ಯಸಂಘದಲ್ಲಿ ೨೫ ವರ್ಷ ದುಡಿದಳು. ನಟಿಯಾಗಿ ಖ್ಯಾತಳಾಗಿದ್ದ ಈಕೆಯಲ್ಲಿ ಇನ್ನೂ ಒಂದು ವಿಶೇಷವಾದ ಪ್ರತಿಭೆಯಿತ್ತು. ತಬಲಾ ಹಾಗೂ ಹಾರ್ಮೋನಿಯಂ ನುಡಿಸುವುದರಲ್ಲಿ ಇವಳನ್ನು ಮೀರಿಸುವವರೇ ಇರಲಿಲ್ಲ. ಯಾವ ಗುರುವೂ ಇಲ್ಲದೆ ಕಲಿತವಳು ಇವಳು. ಹೆಣ್ಣುಮಕ್ಕಳು ತಬಲಾ ನುಡಿಸುವುದು ಅಪರೂಪ ಎಂಬ ಕಾಲಕ್ಕೆ ಇವಳು ಅದರಲ್ಲೇ ಸೈ ಅನ್ನಿಸಿಕೊಂಡಳು.

ಸತ್ಯಭಾಮಾ ಅವರ 'ವಸಂತ ಕಲಾ ನಾಟ್ಯಸಂಘ'ಕ್ಕೆ ಈಕೆ ತಬಲಾ ಸಾಥ್ ಕೊಡುತ್ತಿದ್ದಳಂತೆ. ಡಿಕ್ಕಿ ಮಾಧವರಾಯರು, ಇವಳು ತಬಲಾ ಸಾಥ್ ಕೊಟ್ಟರೇನೇ ನಾನು ಹಾಡುವುದು ಎನ್ನುತ್ತಿದ್ದರಂತೆ. ಇಂಥ ಪ್ರತಿಭಾನ್ವಿತೆ ಇನ್ನೂ ಎಲೆಮರೆಯ ಕಾಯಿಯಂತೆಯೇ ಬದುಕುತ್ತಿದ್ದಾಳೆ.

ಏಣಗಿ ಬಾಳಪ್ಪನವರ ಯಶಸ್ಸಿಗೆ ಕಾರಣಳಾದ ಮಹಿಳೆ, ಅವರ ಧರ್ಮಪತ್ನಿ ಸಾವಿತ್ರಿಬಾಯಿ ಏಣಗಿ. "ನಾನು ಕಂಪನಿ ಕಟ್ಟಾಕ, ಇಷ್ಟು ಎತ್ತರ ಬೆಳೀಲಾಕ ನನ್ನ ಹೆಂಡತೀನೇ ಕಾರಣ" ಎನ್ನುತ್ತಾರೆ ಬಾಳಪ್ಪ. ಕಂಪನಿ ನಾಟಕ ರಾತ್ರಿ ಎರಡು–ಮೂರು ಗಂಟೆಗೆ ಮುಗಿದಾಗ, ಬಾಳಪ್ಪನವರಿಗೆ ಸಾವಿತ್ರಿ ಬಿಸಿ ರೊಟ್ಟಿ, ತೊಪ್ಪಲು ಪಲ್ಯ, ಹಾಲು ತಂದುಕೊಡುತ್ತಿದ್ದರಂತೆ. ಬಾಳಪ್ಪನವರ ಶತಾಯುಷ್ಯಕ್ಕೆ ಸಾವಿತ್ರಿಯೇ ಕಾರಣ. ಬಾಳಪ್ಪನವರಿಗೆ ತಮ್ಮ ತಾಯಿ ಮತ್ತು ಹೆಂಡತಿ ಸಾವಿತ್ರಿಯ ಬಗ್ಗೆ ಬಹಳ ಅಭಿಮಾನ. ಇವರ ತಾಯಿ ಎಂಬತ್ತು ಎಕರೆ ಆಸ್ತಿ ಮಾಡಿದರೆ ಅದನ್ನು ಉಳಿಸಿಕೊಂಡವಳು ಸಾವಿತ್ರಿ ಎಂದು ಹೆಮ್ಮೆಯಿಂದ ಹೇಳುತ್ತಾರೆ.

೧೯೩೨ರಲ್ಲಿ ಸೂಡಿ ಹುಚ್ಚಪ್ಪನವರ ಜೊತೆಗೆ ಪಾಲುದಾರಿಕೆಯಲ್ಲಿ ಬಾಳಪ್ಪ ಗುರುಸೇವಾ ಸಂಗೀತ ನಾಟಕ ಮಂಡಳಿಯನ್ನು ಕಿತ್ತೂರಲ್ಲಿ ಪ್ರಾರಂಭ ಮಾಡಿದರು. ಇಬ್ಬರಿಗೂ ಮನಸ್ತಾಪವುಂಟಾಗಿ ಕೋರ್ಟಿನ ಮೆಟ್ಟಲನ್ನು ಹತ್ತಬೇಕಾಗುತ್ತದೆ. ಕೋರ್ಟಿನ ಖರ್ಚುವೆಚ್ಚವನ್ನು ಅಭಿಮಾನಿಗಳು ಭರಿಸುತ್ತಾರೆ. ಕಂಪನಿ ಬಿಟ್ಟು ಏಣಗಿಗೆ ಬಂದು ನೆಲೆಸಿದಾಗ ಕಿತ್ತೂರಿನ ಜನ ಇದರ ಬಗ್ಗೆ ತಪ್ಪಾಗಿ ಭಾವಿಸಿ ಇವರ ವಿರುದ್ಧ ದಾವೆ ಹೂಡುತ್ತಾರೆ. ಇದ್ದ ಭೂಮಿಯನ್ನು ಜಪ್ತಿ ಮಾಡಲು ಮುಂದಾಗುತ್ತಾರೆ. ಆಗ ಬಾಳಪ್ಪನವರಿಗೆ ಧೈರ್ಯ ತುಂಬಿದವರು ಸಾವಿತ್ರಿಬಾಯಿ. ಧೈರ್ಯ ತುಂಬುವುದಷ್ಟೇ ಅಲ್ಲ, ಅವರನ್ನು ತನ್ನ ತಂದೆಯ ಮನೆಗೆ ಕರೆದುಕೊಂಡು ಹೋಗಿ, ತಂದೆಗೆ ಹೊಲ ಮಾರಿದ ದುಡ್ಡು ಕೊಟ್ಟು ಅದನ್ನು ಬಾಳಪ್ಪನವರಿಗೆ ಕೊಡಿಸಿ, ಸಕಾಲದಲ್ಲಿ ಅವರ ಮರ್ಯಾದೆಯನ್ನು ಕಾಪಾಡುತ್ತಾರೆ.

ಬಾಳಪ್ಪನವರ ಕಂಪನಿ ಆರ್ಥಿಕ ಸಂಕಷ್ಟಕ್ಕೆ ಸಿಲುಕಿದ ಎಲ್ಲ ಸಂದರ್ಭಗಳಲ್ಲೂ ಸಾವಿತ್ರಿಬಾಯಿ ಸಹಾಯ ಹಸ್ತ ಚಾಚಿದ್ದಾರೆ. ಒಮ್ಮೆ ಕಂಪನಿಯ ಪರಿಕರಗಳನ್ನು ಬಾಗಲಕೋಟೆಗೆ ಸಾಗಿಸಬೇಕಾಗಿತ್ತು. ರೈಲಿನಲ್ಲಿ ಎಲ್ಲ ಸಾಮಾನುಗಳನ್ನು ಸಾಗಿಸಲಾಯ್ತು. ಆದರೆ, ಅದನ್ನು ಬಿಡಿಸಿಕೊಳ್ಳಲು ಹಣವಿರಲಿಲ್ಲ. ಆಗ ಸಹಾಯಕ್ಕೆ ಬಂದವರು ಸಾವಿತ್ರಿಯೇ. ಬಾಳಪ್ಪನವರು ಮೂರು ಕಂಪನಿಗಳ ಮಾಲೀಕರಾಗಿ ಖ್ಯಾತಿಯ ಉತ್ತುಂಗಕ್ಕೇರಲು, ಅವರ ಧರ್ಮಪತ್ನಿ ಸಾವಿತ್ರಿಬಾಯಿ ಇರದಿದ್ದರೆ ಸಾಧ್ಯವಾಗುತ್ತಿರಲಿಲ್ಲ. ಈಕೆ ಕಂಪನಿ ಉಳಿಸಿದ ಗಟ್ಟಿಗಿತ್ತಿ.

ನಟ, ನಾಟಕಕಾರ ಗರೂಡ ಸದಾಶಿವ ರಾಯರು 'ದತ್ತಾತ್ರೇಯ ನಾಟಕ ಮಂಡಳಿ'ಯ ಮಾಲೀಕರಾಗಲು ಮುಖ್ಯ ಕಾರಣ ಅವರ ಧರ್ಮಪತ್ನಿ ಭೀಮಾಬಾಯಿ ಗರೂಡ. ಯಾವುದೇ ಅದ್ದೂರಿತನವಿಲ್ಲದೆ ಪ್ರಬುದ್ಧ ಅಭಿನಯ, ಸತ್ವಯುತ ಸಾಹಿತ್ಯಗಳಿಂದ ರಂಗಭೂಮಿಯನ್ನು ಶ್ರೀಮಂತಗೊಳಿಸಿದ ಸದಾಶಿವರಾಯರಿಗೆ ಕಂಪನಿ ಕಟ್ಟುವ ಕನಸಿತ್ತಾದರೂ, ಪರಿಕರಗಳಿಗೆ ಬೇಕಾಗುವ ಹಣವಿರಲಿಲ್ಲ. ಆಗ ಅವರಿಗೆ ಸ್ಫೂರ್ತಿ, ಆರ್ಥಿಕ ಸಹಾಯ ಎರಡನ್ನೂ ನೀಡಿದವರು ಭೀಮಾಬಾಯಿ.

ಕಂಪನಿ ಎಲ್ಲಿಗೆ ಹೋದರೂ ಸದಾ ಕಂಪನಿಯ ಜೊತೆಗಿದ್ದು ಕಂಪನಿಯ

ಕಲಾವಿದರನ್ನು ತನ್ನ ಮಕ್ಕಳಂತೆ ನೋಡಿಕೊಳ್ಳುತ್ತಿದ್ದರು ಭೀಮಾಬಾಯಿ. ಅಡುಗೆಯ ಮೇಲ್ವಿಚಾರಣೆ ನೋಡಿಕೊಳ್ಳುವುದಲ್ಲದೆ, ಪ್ರಸಂಗ ಬಂದಾಗ ಅಡುಗೆಯನ್ನೂ ಮಾಡಿ ಬಡಿಸುತ್ತಿದ್ದರಂತೆ. ಕಲಾವಿದರ ಸಂಪೂರ್ಣ ಜವಾಬ್ದಾರಿ ಭೀಮಾಬಾಯಿ ಯವರದ್ದು. ಹಬ್ಬ ಹುಣ್ಣಿಮೆಗಳು ಬಂದಾಗ ಕಲಾವಿದರಿಗೆ ಹೊಸ ಬಟ್ಟೆ ತಂದು ಕೊಡುವುದು, ಸಿಹಿ ಹಂಚುವುದು ಎಲ್ಲವನ್ನೂ ನಗುಮುಖದಿಂದ ನಿಭಾಯಿಸುತ್ತಿದ್ದರು. ತನ್ನ ಚಾಣಾಕ್ಷತನದಿಂದ, ವ್ಯವಹಾರ ಕುಶಲತೆಯಿಂದ ಒಂದರ್ಥದಲ್ಲಿ ಇವರೇ ಕಂಪನಿಯ ನಿಜವಾದ ಮಾಲೀಕರಾಗಿದ್ದರೆಂದರೆ ತಪ್ಪಾಗಲಿಕ್ಕಿಲ್ಲ.

ಉತ್ತರ ಕರ್ನಾಟಕದಾದ್ಯಂತ ದತ್ತಾತ್ರೇಯ ನಾಟಕ ಮಂಡಳಿ ಜಯಭೇರಿ ಬಾರಿಸಲು, ತೆರೆಯ ಹಿಂದಿನ ಇವರ ರಂಗಕಳಕಳಿ ಮುಖ್ಯ ಕಾರಣ.

ತನ್ನ ವ್ಯವಹಾರ ಜ್ಞಾನ, ನಿಪುಣತೆಯಿಂದ ಕಂಪನಿ ನಡೆಸಿಕೊಂಡು ಬರುತ್ತಿರುವ ಇನ್ನೊಬ್ಬ ತೆರೆಮರೆಯ ಪ್ರತಿಭೆ ರೇಣಮ್ಮ ಚಿತ್ತರಗಿ. ಖ್ಯಾತ ನಟ ಜಾಲಿಹಾಳ ವೀರಯ್ಯನವರ ಪುತ್ರಿ ಈ ರೇಣಮ್ಮ. ವೀರಯ್ಯನವರು 'ಕುಮಾರ ವಿಜಯ ನಾಟ್ಯ ಸಂಘ ಚಿತ್ತರಗಿ' ಕಂಪನಿಯಲ್ಲಿ ಕಲಾವಿದರು. ರೇಣಮ್ಮ ಕಂಪನಿಯ ಎಲ್ಲರ ಮುದ್ದಿನ ಮಗಳು. ಮುಂದೆ ಅದೇ ಕಂಪನಿಯಲ್ಲಿ ಪೇಂಟರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದ ಕೆ. ಬಿ. ಶಂಕರ ಅವರನ್ನು ೧೯೭೭ರಲ್ಲಿ ಮದುವೆಯಾದರು. ಮುಂದೆ ಕಂಪನಿಯ ಸಂಪೂರ್ಣ ಮಾಲೀಕತ್ವವನ್ನು ಶಂಕರ ಅವರಿಗೆ ವಹಿಸಿಕೊಡಲಾಗುತ್ತದೆ. ಆಗ ಅವರು ಅದನ್ನು ಮುನ್ನಡೆಸಿಕೊಂಡು ಹೋಗಲು ರೇಣಮ್ಮನವರೇ ಸ್ಫೂರ್ತಿ.

ಸೊರಬದಲ್ಲಿ ಕಂಪನಿ ಕ್ಯಾಂಪ್ ಹಾಕಿದಾಗ ಅಡುಗೆ ಮಾಡಲು ಕಟ್ಟಿಗೆ ಇರಲಿಲ್ಲ. ಆಗ ಈ ರೇಣಮ್ಮ ಕಾಡಿಗೆ ಹೋಗಿ ಕಟ್ಟಿಗೆ ತಂದರಂತೆ. ಕಂಪನಿಯ ಕಲಾವಿದರಿಗೆ ಅಡುಗೆ ಮಾಡಿ ಬಡಿಸಿ, ಮಕ್ಕಳಂತೆ ನೋಡಿಕೊಳ್ಳುತ್ತಿದ್ದರಂತೆ. ಯಾವುದೇ ನಾಟಕ ೨೫ ಪ್ರದರ್ಶನ ಗಳನ್ನು ಕಂಡರೆ, ಕಲಾವಿದರಿಗೆ ಈಕೆ ಹೊಸ ಬಟ್ಟೆ ಕೊಡಿಸಿ ಸಿಹಿ ಹಂಚುತ್ತಿದ್ದರು.

೧೮ ವರ್ಷಗಳ ಹಿಂದೆ ಹೊಸರಿತ್ತಿಯಲ್ಲಿ ಕಂಪನಿ ಕ್ಯಾಂಪ್ ಹಾಕಿತ್ತು. ರೇಣಮ್ಮ ಕಲಾವಿದರಿಗಾಗಿ ಬಟ್ಟೆ ತರಲು ಅಂಗಡಿಗೆ ಹೋದರು. ಇವರು ನಾಟಕದವರೆಂದು ತಿಳಿದ ಅಂಗಡಿಯ ಮಾಲೀಕ ಉದ್ರಿ ಕೊಡಲು ಒಪ್ಪಲಿಲ್ಲ. ಆಗ, ರೇಣಮ್ಮನವರ ಜೊತೆಗಿದ್ದ ಕಲಾವಿದೆ ಚಂದ್ರಮ್ಮ ತನ್ನ ಕೊರಳಿನಲ್ಲಿದ್ದ ಚಿನ್ನದ ಚೈನು ತೆಗೆದು ರೇಣಮ್ಮ ನವರಿಗೆ ಕೊಟ್ಟಳು. ಕಲಾವಿದರಿಗೆ ರೇಣಮ್ಮನವರ ಮೇಲೆ ಅಂತಹ ಅಭಿಮಾನವಿತ್ತು!

ರೇಣಮ್ಮನವರ ಸಲಹೆ, ಸಹಕಾರ, ಪ್ರೀತಿಯಿಂದಲೇ ಶಂಕರ ೨೦ ವರ್ಷ ಕಂಪನಿ ನಡೆಸಿಕೊಂಡು ಬಂದರು. ಮೂರೂವರೆ ವರ್ಷಗಳ ಹಿಂದೆ ಶಂಕರರು ತೀರಿಕೊಂಡಾಗ ರೇಣಮ್ಮ ಧೃತಿಗೆಡಲಿಲ್ಲ. ಈಗಲೂ ಕಂಪನಿ ನಡೆಸಿಕೊಂಡು ಬರುತ್ತಿದ್ದಾರೆ.

ತೆರೆಮರೆಯಲ್ಲಿದ್ದುಕೊಂಡೇ ವೃತ್ತಿರಂಗಭೂಮಿಗೆ ಮಹತ್ವದ ಕೊಡುಗೆ ನೀಡಿದ ಇನ್ನೊಬ್ಬ ಮಹಿಳೆ ಸಿ. ಎಸ್. ನಿರ್ಮಲಾ. ಇವರು ಚಿಂದೋಡಿ ಶ್ರೀಕಂಠೇಶರ ಪತ್ನಿ. ಸುಶ್ರಾವ್ಯ ಕಂಠದಿಂದ ಕೇಳುಗರನ್ನು ಮೋಡಿ ಮಾಡಿದವರು ಇವರು. ಹಾಡುವುದರ ಜೊತೆಗೆ ಕೀಬೋರ್ಡ್, ಹಾರ್ಮೋನಿಯಂ, ಗಿಟಾರ್, ಮ್ಯಾಂಡೊಲಿನ್, ತಬಲಾ ಡ್ರಮ್‌ಸೆಟ್–ಹೀಗೆ ಎಲ್ಲಾ ಬಗೆಯ ವಾದ್ಯಗಳನ್ನು ನುಡಿಸಬಲ್ಲವರಾಗಿದ್ದರು. ಯುಗಳ ಗೀತೆಗಳನ್ನು ಹೆಣ್ಣು ಹಾಗೂ ಗಂಡುದನಿಗಳೆರಡರಲ್ಲೂ ಹಾಡುವ ಪ್ರತಿಭೆ ಇವರಿಗಿತ್ತು. ಇವರು ಗಂಡುದನಿಯಲ್ಲಿ ಹಾಡಿದಾಗ ಪ್ರೇಕ್ಷಕರು ಬೆಕ್ಕಸಬೆರಗಾಗುತ್ತಿದ್ದರಂತೆ.

ಮೂಲತಃ ಕೇರಳದವರಾದ ನಿರ್ಮಲಾರ ತಂದೆ ತಾಯಿ ಹೊಟ್ಟೆಪಾಡಿಗಾಗಿ ಮಂಡ್ಯಕ್ಕೆ ಬಂದವರು. ಇಬ್ಬರೂ ಸಂಗೀತ ಮತ್ತು ವಾದ್ಯಗಳನ್ನು ನುಡಿಸುವುದರಲ್ಲಿ ಪರಿಣತರು. ನಾಲ್ಕು ಜನ ಗಂಡುಮಕ್ಕಳು, ಇಬ್ಬರು ಹೆಣ್ಣುಮಕ್ಕಳ ದೊಡ್ಡ ಕುಟುಂಬ. ತಂದೆ ತಾಯಿ ತಮ್ಮಲ್ಲಿದ್ದ ಸಂಗೀತ ಜ್ಞಾನವನ್ನು ಎಲ್ಲ ಮಕ್ಕಳಿಗೂ ಕಲಿಸಿದರು. ಅಕ್ಕ ಫಾತಿಮಾ ಕಾಂಗೋ ನುಡಿಸಿದರೆ, ಅಲೆಕ್ಸಾಂಡರ್ ಕೀಬೋರ್ಡ್ ನುಡಿಸುತ್ತ ಹಾಡುತ್ತಿದ್ದರು. ಮೇರಿದಾಸ್ ಕಾಂಗೋ, ತಬಲಾ ಎರಡನ್ನೂ ನುಡಿಸಿದರೆ ಇನ್ನೊಬ್ಬ ಅಣ್ಣ ವಿನ್ಸಿಸನ್ ಗಿಟಾರ್ ನುಡಿಸುತ್ತಿದ್ದರು. ಆದರೆ ಎಲ್ಲರಿಗಿಂತ ಕಿರಿಯಳಾದ ನಿರ್ಮಲಾ ಎಲ್ಲಾ ವಾದ್ಯಗಳನ್ನೂ ನುಡಿಸುವುದರೊಂದಿಗೆ ಸುಶ್ರಾವ್ಯವಾಗಿ ಹಾಡುತ್ತಿದ್ದಳು. ಹೀಗೆ ಮನೆಮಂದಿಯೆಲ್ಲ ಸೇರಿ 'ಮ್ಯೂಜಿಕಲ್ ನೈಟ್' ಕಾರ್ಯಕ್ರಮ ಕೊಡುತ್ತ ಜೀವನ ನಿರ್ವಹಣೆ ಮಾಡುತ್ತಿದ್ದರು. ಇದೇ ಹೊತ್ತಿನಲ್ಲಿ ಚಿಂದೋಡಿ ಶ್ರೀಕಂಠೇಶರ ಕಣ್ಣಿಗೆ ಬಿದ್ದರು ನಿರ್ಮಲಾ. ೧೯೭೯ರಲ್ಲಿ ನಿರ್ಮಲಾ ವೃತ್ತಿಕಂಪನಿ ಸೇರಿದರು. ೧೯೮೧ರಲ್ಲಿ ಶ್ರೀಕಂಠೇಶರೊಡನೆ ಮದುವೆ. ೨೦೦೮ರವರೆಗೂ ಕಂಪನಿಗಾಗಿ ಹಾಡಿದ ನಿರ್ಮಲಾ ಇತ್ತೀಚೆಗಷ್ಟೇ ಅನಾರೋಗ್ಯದಿಂದ ನಿಧನರಾದರು. ಮಗ ಕಿಶೋರ, ಮಗಳು ಕಾಂಚನಾ, ಇಬ್ಬರೂ ವೃತ್ತಿಕಂಪನಿಯ ಕಲಾವಿದರಾಗಿದ್ದಾರೆ. ಹೀಗೆ ಈ ಎಲ್ಲ ಮಹಿಳೆಯರು, ಕೆಲವರು ತಮ್ಮ ಪ್ರತಿಭೆಯಿಂದ, ಕೆಲವರು ತಮ್ಮ ತ್ಯಾಗದಿಂದ, ತಮ್ಮ ರಂಗಕಳಕಳಿ ಯಿಂದ ತೆರೆಯ ಮರೆಯಲ್ಲಿಯೇ ದುಡಿದು ಅವಿಸ್ಮರಣೀಯರಾಗಿದ್ದಾರೆ.

**ಎಸ್. ಮಾಲತಿ**
'ಮಹಾಲಸ' ನಿಲಯ, ಜೋಗ ರಸ್ತೆ, ಸಾಗರ – ೫೭೭ ೪೦೧ ಶಿವಮೊಗ್ಗ ಜಿಲ್ಲೆ

## ಸಾದರ ಸ್ವೀಕಾರ

**ಹುಡುಕಾಟ** (ಪ್ರಬಂಧ ಸಂಕಲನ)
*ಶಾಂತಾರಾಮ ನಾಯಕ ಹಿಚಕಡ*
***ಪುಟ : xii + ೨೧೪ ಬೆಲೆ: ರೂ. ೧೫೦***
**ಶಾಂತಾರಾಮ ನಾಯಕ ಹಿಚಕಡ,** ಹಿಚಕಡ, ಅಂಕೋಲಾ, ಉತ್ತರ ಕನ್ನಡ – ೫೮೧ ೩೧೪

**ಮಣ್ಣಿಗೆ ಬಿದ್ದ ಹೂಗಳು** (ಕವನ ಸಂಕಲನ)
*ಬಿದಲೋಟಿ ರಂಗನಾಥ್*
***ಪುಟ : xii + ೭೯ = ೯೧ ಬೆಲೆ: ರೂ. ೮೫***
**ನಿಶಾಂತ್ ಪ್ರಕಾಶನ,** ಬಿದಲೋಟಿ, ಹೊಳವನಹಳ್ಳಿ ಅಂಚೆ, ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ

**ಬಸವಣ್ಣ ಮತ್ತು ಅಂಬೇಡ್ಕರ್ ಹಾಗೂ ಇತರ ಲೇಖನಗಳು** *ರಂಜಾನ್ ದರ್ಗಾ*
***ಪುಟ : ೧೭೬ ಬೆಲೆ: ರೂ. ೧೩೦***

**ಕಳಸಾ–ಬಂಡೂರಿ ನೀರಿಗಾಗಿ ಹಾಹಾಕಾರ ಮತ್ತು ನೀಚ ರಾಜಕಾರಣ** *ಸಂಯೋಜನೆ: ಸಿರಿಮನೆ ನಾಗರಾಜ್*
***ಪುಟ : ೪೮ ಬೆಲೆ: ರೂ. ೨೫***

**ಮೊಳಕೆಯೊಡೆಯದ ಬೀಜ** (ಕವನಗಳು)
*ಡಾ॥ ವಸು ಮಳಲಿ*
***ಪುಟ : ೧೨೮ ಬೆಲೆ: ರೂ. ೯೦***
*ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು*
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

**ಧರೆಹೊತ್ತಿ ಉರಿದಾಗ – ಸಂಪುಟ ೧**
(ಭಾರತ ವಿಭಜನೆಯ ದುರಂತ ಕಥೆಗಳು)
*ಅಲೋಕ್ ಭಲ್ಲಾ, ಕನ್ನಡಕ್ಕೆ: ರಾಹು*
***ಪುಟ : xlviii+೩೪೪= ೩೯೨ ಬೆಲೆ: ರೂ. ೪೦೦***

**ಧರೆಹೊತ್ತಿ ಉರಿದಾಗ – ಸಂಪುಟ ೨**
(ಭಾರತ ವಿಭಜನೆಯ ದುರಂತ ಕಥೆಗಳು)
*ಅಲೋಕ್ ಭಲ್ಲಾ, ಕನ್ನಡಕ್ಕೆ: ರಾಹು*
***ಪುಟ : xlviii+೩೬೬ = ೪೧೪ ಬೆಲೆ: ರೂ. ೪೨೫***

**ಧರೆಹೊತ್ತಿ ಉರಿದಾಗ – ಸಂಪುಟ ೩**
(ಭಾರತ ವಿಭಜನೆಯ ದುರಂತ ಕಥೆಗಳು)
*ಅಲೋಕ್ ಭಲ್ಲಾ, ಕನ್ನಡಕ್ಕೆ: ರಾಹು*
***ಪುಟ : xlviii+೩೬೮ = ೪೧೬ ಬೆಲೆ: ರೂ. ೪೨೫***
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಸೃಷ್ಟಿ ಪಬ್ಲಿಕೇಷನ್ಸ್,** # ೧೨೧, ೧೩ನೇ ಮುಖ್ಯರಸ್ತೆ, ಎಂ.ಸಿ. ಲೇಔಟ್, ವಿಜಯನಗರ, ಬೆಂಗಳೂರು – ೪೦

**ಹೊಸ ಬೆಳಕಿನ ಶೋಧದಲ್ಲಿ...** (ಆಯ್ದ ಕವಿತೆಗಳು)
*ಮರಾಠಿ ಮೂಲ: ಪ್ರೊ॥ ನೀತಾ ತೋರಣೆ*
*ಅನು: ಮೋಹನ ಹಬ್ಬು*
***ಪುಟ : ೮೬ ಬೆಲೆ: ರೂ. ೧೦೦***
**ವಿಜಯಲಕ್ಷ್ಮಿ ಪ್ರಕಾಶನ,** # ೬೫೭, ಕೂಗುಬಂದೆ ರಸ್ತೆ, ಇ ಅಂಡ್ ಎಫ್ ಬ್ಲಾಕ್, ಕುವೆಂಪು ನಗರ, ಮೈಸೂರು – ೫೭೦ ೦೨೩

**ಚಂದ್ರನಿಗೆ ಟ್ಯಾಟೂ**(ಮಕ್ಕಳ ಕವಿತೆಗಳು) *ಛಾಯಾ ಭಗವತಿ*
***ಪುಟ : xviii + ೪೬ = ೬೪ ಬೆಲೆ: ರೂ. ೭೦***
**ಆಹ್ವಾನ ಪ್ರಕಾಶನ,** ಬಸರಕೋಡು, ಹಗರಿಬೊಮ್ಮನ ಹಳ್ಳಿ, ಬಳ್ಳಾರಿ – ೫೮೩ ೨೨೪

**ತಾಯ ಮುಖ ಕಾಣದಲ್ಲಾ** (ವಿಮರ್ಶಾ ಲೇಖನಗಳ ಸಂಕಲನ) *ಡಾ॥ ಗಿರಿಜಾ ಶಾಸ್ತ್ರಿ*
***ಪುಟ : xviii+೨೮೬ = ೩೦೪ ಬೆಲೆ: ರೂ. ೧೮೦***

**ಸೆರಗ ಬಿಡೋ ಮರುಳೆ** ('ಅಕ್ಕನ ಹುಡುಕಾಟದಲ್ಲಿ' ಮತ್ತು ಇತರ ಲೇಖನಗಳು) *ಡಾ॥ ಗಿರಿಜಾ ಶಾಸ್ತ್ರಿ*
***ಪುಟ : xvi+೨೩೨ = ೨೪೮ ಬೆಲೆ: ರೂ. ೧೫೦***
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಸಿಂಚು ಮಲ್ಟಿಗ್ರಾಫ್,** # ೩–೯೯, ೨ನೇ ಹಂತ, ಕೆ.ಹೆಚ್.ಬಿ. ಕಾಲೋನಿ, ಕುವೆಂಪುನಗರ, ಮೈಸೂರು

**ಜಮಖಂಡಿ ಓಲೆಮಠಶ್ರೀಗಳ ಸಾಹಿತ್ಯಾವಲೋಕನ**
*ಸಂ.: ಡಾ॥ ಅಶೋಕ ನರೋಡೆ*
***ಪುಟ : xx + ೨೦೬ ಬೆಲೆ: ರೂ. ೨೦೦***
**ಶ್ರೀ ಕುಮಾರೇಶ್ವರ ಗ್ರಂಥಮಾಲೆ,** ಓಲೆಮಠ, ಜಮಖಂಡಿ – ನವಿಲುತೀರ್ಥ, ಸವದತ್ತಿ, ಜಮಖಂಡಿ – ೫೮೭ ೩೦೧

## ಡಾ॥ ಶ್ರೀನಿವಾಸ ಕಕ್ಕಿಲ್ಲಾಯ ಅವರ

# ಆರೋಗ್ಯ ಆಶಯ

**ಆರೋಗ್ಯ ರಕ್ಷಣೆ ಮತ್ತು ಅದರ ಸಾಮಾಜಿಕ ಆರ್ಥಿಕ, ರಾಜಕೀಯ ಆಯಾಮಗಳು**

**ಪುಟಗಳು : 368 ಬೆಲೆ : ₹ 250**






ಕನ್ನಡ ವೈದ್ಯ ಸಾಹಿತ್ಯಲೋಕಕ್ಕೆ ಮಾತ್ರವಲ್ಲ, ಒಟ್ಟಾರೆ ಸಾಹಿತ್ಯ ಲೋಕಕ್ಕೆ ಲಭ್ಯವಾದ ಒಂದು ಅದ್ಭುತವಾದ, ಪಾಂಡಿತ್ಯಪೂರ್ಣವಾದ ಕೃತಿ ಡಾ॥ ಶ್ರೀನಿವಾಸ ಕಕ್ಕಿಲ್ಲಾಯ ಅವರ 'ಆರೋಗ್ಯ – ಆಶಯ'. ಇದು ಒಬ್ಬ ಪರಿಚಿತ ವ್ಯಕ್ತಿಯನ್ನು ಹೊಗಳಲು ಹೇಳುವ ಮಾತಲ್ಲ, ಈ ಕೃತಿಯನ್ನು ಓದುತ್ತ ಹೋದ ಹಾಗೆ ಎಲ್ಲ ಓದುಗರಿಗೂ ಬರುವ ಭಾವನೆ. 'ಆರೋಗ್ಯ–ಆಶಯ' ಎಂದಾಕ್ಷಣ ಕೆಲವು ರೋಗಗಳು, ಆ ರೋಗಗಳಿಗೆ ಔಷಧಿ, ರೋಗಿಯ ಪಥ್ಯ ಮತ್ತು ಚಿಕಿತ್ಸೆಯ ಸುತ್ತಲೇ ಸುತ್ತುವ ಹಲವಾರು ಕೃತಿಗಳನ್ನು ನೋಡಿದ್ದೇವೆ. ಆದರೆ ಇಲ್ಲಿಯ ಲೇಖನಗಳು ಕೇವಲ ಮನುಷ್ಯರ ರೋಗ ಮತ್ತು ಚಿಕಿತ್ಸೆಯ ಕುರಿತು ಮಾತ್ರ ಮಾತನಾಡುವುದಿಲ್ಲ, ಒಟ್ಟಾರೆ ಒಂದು ವ್ಯವಸ್ಥೆ ರೋಗಪೀಡಿತವಾದರೆ ಆಗುವ ಅನಾಹುತಗಳೇನು ಎನ್ನುವ ವಿಷಯದ ಕುರಿತು ಆಧಾರ ಸಮೇತ ಸಾದರಪಡಿಸುತ್ತವೆ.

ಒಟ್ಟು ಹತ್ತು ಅಧ್ಯಾಯಗಳನ್ನೊಳಗೊಂಡಿರುವ ಈ ಕೃತಿ ವೈದ್ಯರ ಆಯ್ಕೆ, ವೈದ್ಯಕೀಯ ಶಿಕ್ಷಣದ ಖಾಸಗೀಕರಣ, ಆರೋಗ್ಯ ಸೇವೆಗಳ ವ್ಯಾಪಾರಿಕರಣ, ಇಂಥ ಆರೋಗ್ಯಕ್ಷೇತ್ರವನ್ನು ವ್ಯಾಪಿಸಿರುವ ವಿಷಯಗಳಿಂದ ಆರಂಭವಾಗಿ, ವೈಜ್ಞಾನಿಕ ಮನೋಭಾವ, ಮಹಿಳೆಯರ ಆರೋಗ್ಯ ಸಮಸ್ಯೆಗಳು, ಸೋಂಕುರೋಗ, ಮಧುಮೇಹ, ಕ್ಯಾನ್ಸರ್, ಹೃದಯಾಘಾತ ಇಂಥ ನೂರಾರು ರೋಗಗಳ ಕುರಿತು ಕಾಳಜಿ, ಚಿಕಿತ್ಸೆ ಕುರಿತ ಎಚ್ಚರ, ಅನಾವಶ್ಯಕ ಪರೀಕ್ಷೆ – ಔಷಧಿ ಎಲ್ಲದರ ಕುರಿತು ವಿವರವಾಗಿ ಬರೆಯುತ್ತಾರೆ. ಹಲವಾರು ರೋಗಗಳ ಇತಿಹಾಸ, ವಿಶ್ವದಲ್ಲಾದ ಚಿಕಿತ್ಸಾ ಪ್ರಯೋಗ ಇಂಥ ಎಲ್ಲ ವಿವರಗಳನ್ನು ಓದುತ್ತ ಹೋದ ಹಾಗೆ ಓದುಗರಿಗೆ ವಿವಿಧ ರೋಗಗಳ ಕಾರಣ, ಪರಿಣಾಮ, ಚಿಕಿತ್ಸೆ, ವಿವಿಧ ಚಿಕಿತ್ಸಾ ವಿಧಾನದ ಕುರಿತು ಮಾಹಿತಿ ದೊರಕುತ್ತವೆ. ಇದು ಮಹತ್ವವಾದದ್ದು. ರೋಗಿಗೆ ಔಷಧೀಯ ಪರಿಚಯ ಮಾಡುವುದಕ್ಕಿಂತ ಮುಖ್ಯವಾದದ್ದು ರೋಗದ ಪರಿಚಯ ಮಾಡಿಸುವುದು.

– ಸಿದ್ದನಗೌಡ ಪಾಟೀಲ



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

**HOSATHU** Kannada Monthly / AUGUST 2016 / ₹ 20 (No. of Pages 64)
RNI Regd. KARKAN / 1999 / 614. Karnataka Regd. KARN/BGE/07/2015-17
Licenced to post without prepayment. WPP No.14.
Posted at BENGALURU PSO, MYSORE ROAD, BENGALURU-560 026 on the 28th of every month.